ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಪ್ರೊ. ಎಂ.ಪಿ.ಎಲ್. ಶಾಸ್ತ್ರಿ

ಲೇಖನ ಹಾಗೂ ಸಂಗ್ರಹ

ಹಾರೋಗದ್ದೆ ಉಷಾರಮೇಶ್ ನಾಯಕ್

ಪ್ರಕಟಣೆ:
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ,
ವಿಧಾನ ಸೌಧ, ಬೆಂಗಳೂರು - 560 001.

Prof. M.P.L. SHASTRI: Prathibhavantha Samsadiya Patugala Baduku Baraha Malike (Eminent Parliamentarian Series) Written by Harogadde Usha Ramesh Nayak, Published by Karnataka Legislature Library Committee, Vidhana Soudha, Bangalore-01.

Pages-213+15
Rupees-20/-



First Edition: January, 2005
Number of Copies: 2,000

Printed and Cover Page Deisgned by:
Government Printing Press,
Bangalore-01

@ ಪ್ರೊ. ಎಂ.ಪಿ.ಎಲ್. ಶಾಸ್ತ್ರಿ : ಪ್ರತಿಭಾವಂತ ಸಂಸದೀಯ ಪಟುಗಳ ಬದುಕು-ಬರಹ ಮಾಲಿಕೆ ಮೂಲ ಕೃತಿ ರಚನೆ: ಹಾರೋಗದ್ದೆ ಉಷಾ ರಮೇಶ್ ನಾಯಕ , ಪ್ರಕಟಣೆ; ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ, ವಿಧಾನ ಸೌಧ, ಬೆಂಗಳೂರು 560001

ಪುಟ ಸಂಖ್ಯೆ: 213+15
ಬೆಲೆ ರೂ: 20/-



ಮೊದಲನೆ ಮುದ್ರಣ: ಜನವರಿ, 2005
ಪ್ರತಿಗಳು: 2,000

ಮುಖಪುಟ ವಿನ್ಯಾಸ ಮತ್ತು ಮುದ್ರಣ: 2,000
ಸರ್ಕಾರಿ ಮುದ್ರಣಾಲಯ,
ಬೆಂಗಳೂರು-1

# ಪೀಠಿಕೆ

ದೇಶದ ಸ್ವಾತಂತ್ರ ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ: ರಾಮಮನೋಹರ ಲೋಹಿಯಾ, ಡಾ: ಬಿ.ಆರ್. ಅಂಬೇಡ್ಕರ್, ಡಾ: ಶಾಂಪ್ರಸಾದ್ ಮುಖರ್ಜಿ, ಡಾ: ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕವನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇವೆ.

ಹಾಗೆಯೇ, ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರ ಕುರಿತು ಕಿರುಹೊತ್ತಿಗೆಗಳನ್ನು ಸಿದ್ದಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ಈ ಕಾರ್ಯವನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನ ಮಂಡಲದ ಗ್ರಂಥಾಲಯ ಉಪ ಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತರಾಗಿ ರಾಜ್ಯದ ವಿಶ್ವವಿದ್ಯಾಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ದೇವರಾಜ ಅರಸು, ಶ್ರೀ ಜೆ.ಹೆಚ್. ಪಾಟೇಲ್,

ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಬಿ.ಎಲ್. ಸುಬ್ಬಮ್ಮ, ಡಾ. ಲಂಕಾ ಸುಂದರಂ ಹಾಗೂ ಇನ್ನೂ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

ಈಗ ಹಾರೋಗದ್ದೆ ಉಷಾ ರಮೇಶ್ ನಾಯಕ, ಇವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟುವಾಗಿದ್ದ ಪ್ರೊ. ಎಂ.ಪಿ.ಎಲ್. ಶಾಸ್ತ್ರಿರವರ ಬಗೆಗಿನ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ವಿ.ಆರ್. ಸುದರ್ಶನ್
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

ಕೃಷ್ಣ
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

ಬೆಂಗಳೂರು,
1ನೇ ಜನವರಿ, 2005

# ಲೇಖಕಿಯ ನುಡಿ

ಕರ್ನಾಟಕ ರಾಜ್ಯದ ವಿಧಾನ ಮಂಡಲದ ವಿಧಾನ ಸಭಾ ಸಚಿವಾಲಯವು ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳನ್ನು ಗುರುತಿಸಿ ಅವರ ಕುರಿತು ಬದುಕು–ಬರಹ ಮಾಲಿಕೆಯ ಅಡಿಯಲ್ಲಿ ಗ್ರಂಥಗಳನ್ನು ರಚಿಸಿ–ಪ್ರಕಟಿಸುತ್ತಿರುವುದು ಒಂದು ಶ್ಲಾಘನೀಯ ಕಾರ್ಯವೇ ಆಗಿದೆ. ಇದರಿಂದ ಶಾಸನ ಸಭೆಗಳಲ್ಲಿ ಶ್ರೇಷ್ಠ ಸೇವೆ ಸಲ್ಲಿಸಿದ ಪ್ರತಿಭಾವಂತ ಸಂಸದೀಯ ಪಟುಗಳ ವಿಚಾರಗಳು ಹಾಗೂ ಅನುಭವಗಳು ಶಾಸಕರುಗಳಿಗೆ ಮತ್ತು ಜನ ಸಾಮಾನ್ಯರಿಗೂ ಲಭ್ಯವಾಗಿ ಮಾರ್ಗದರ್ಶನ ನೀಡುತ್ತವೆ ಎಂಬುದರಲ್ಲಿ ಸಂಶಯವಿಲ್ಲ.

ಈ ಯೋಜನೆಯಡಿಯಲ್ಲಿ ಖ್ಯಾತ ಸಂಸದೀಯ ಪಟುಗಳಾಗಿ ಮತ್ತು ಶಿಕ್ಷಣ ತಜ್ಞರಾಗಿ ಸುಪ್ರಸಿದ್ಧರಾಗಿದ್ದಂತಹ ದಿ. ಪ್ರೊ.ಎಂ.ಪಿ.ಎಲ್. ಶಾಸ್ತ್ರಿಯವರ ಕುರಿತು ಗ್ರಂಥ ರಚನೆಗೆ ಆಯ್ಕೆ ಮಾಡಿರುವುದು ಬಹು ಸೂಕ್ತವೇ ಆಗಿದೆ. ಶಾಸ್ತ್ರಿಯವರು 25 ವರ್ಷಗಳಷ್ಟು ದೀರ್ಘಕಾಲ ಮೇಲ್ಮನೆಯ (ವಿಧಾನ ಪರಿಷತ್) ಸದಸ್ಯರಾಗಿ ಆ ಸ್ಥಾನಕ್ಕೆ ಘನತೆ–ಗೌರವಗಳನ್ನು ತಂದುಕೊಟ್ಟವರು. ಬೆಂಗಳೂರಿನಲ್ಲಿ ಪ್ರತಿಷ್ಠಿತ ಎಂ.ಇ.ಎಸ್. ಸಂಸ್ಥೆಯನ್ನು ಹುಟ್ಟು ಹಾಕಿ ಶಿಕ್ಷಣ ಪ್ರಸಾರ ಕೈಗೊಂಡರಲ್ಲದೆ ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಬೆಂಗಳೂರು ವಿಶ್ವವಿದ್ಯಾನಿಲಯಗಳ ಸೆನೆಟ್, ಅಕಾಡೆಮಿಕ್ ಹಾಗೂ ಕೌನ್ಸಿಲ್‌ಗಳಲ್ಲಿ ಸದಸ್ಯರಾಗಿದ್ದು 25 ವರ್ಷಗಳಷ್ಟು ದೀರ್ಘ ಕಾಲ ಅವುಗಳ ಅಭಿವೃದ್ಧಿಗೆ ಶ್ರಮಿಸಿದಂತವರು. ಅದೇ ರೀತಿ, ಬೆಂಗಳೂರಿನ ಪ್ರತಿಷ್ಠಿತ ಭಾರತೀಯ ವಿದ್ಯಾಭವನ ಹಾಗೂ ಮಿಥಿಕ್ ಸೊಸೈಟಿಗಳ ಅಭಿವೃದ್ಧಿಗೂ ಶ್ರಮಿಸಿದ್ದರಲ್ಲದೆ ಹಲವಾರು ಸಂಘ ಸಂಸ್ಥೆಗಳ ಕಾರ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿದ್ದಂತವರು.

ಪ್ರೊ. ಶಾಸ್ತ್ರಿಯವರಂತ ಧೀಮಂತ ವ್ಯಕ್ತಿಯ ಕುರಿತಂತೆ ಗ್ರಂಥ ರಚಿಸುವ ಕಾರ್ಯವನ್ನು ಶ್ರೀ ಬಿ.ಬಿ. ಶಿವಪ್ಪನವರು ಅಧ್ಯಕ್ಷರಾಗಿರುದ್ದಂತಹ ವಿಧಾನಸಭಾ ಸಚಿವಾಲಯದ ಗ್ರಂಥಾಲಯ ಉಪ–ಸಮಿತಿಯು ನನಗೆ ವಹಿಸಿದ್ದು ನನ್ನ ಸುಯೋಗವೆಂದೇ ತಿಳಿದಿದ್ದೇನೆ. ಅದಕ್ಕಾಗಿ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಇತರ ಸದಸ್ಯರುಗಳಿಗೆ ನಾನು ಅಭಾರಿಯಾಗಿದ್ದೇನೆ. ಈ ವರ್ಷ (2003–04) ಮೊದಲಬಾರಿಗೆ ಇಂತಹ ಗ್ರಂಥಗಳನ್ನು ರಚಿಸಲು ಮಹಿಳಾ–ಲೇಖಕಿಯರಿಗೆ ಅವಕಾಶ ಮಾಡಿಕೊಟ್ಟಿದ್ದು ಆ ಪ್ರಪ್ರಥಮ ಇಬ್ಬರು ಮಹಿಳಾ ಲೇಖಕಿಯರಲ್ಲಿ ನಾನು ಒಬ್ಬಳು ಎಂದು ತಿಳಿದು ತುಂಬಾ ಸಂತಸವಾಗಿದೆ.

ನನಗೆ, ಶಾಸ್ತ್ರಿಯವರ ಕುರಿತಂತೆ ಗ್ರಂಥ ರಚಿಸುವಲ್ಲಿ ಸಂಶೋಧನಾಧಿಕಾರಿಯಾಗಿದ್ದ ಡಾ. ಚಂದ್ರಪ್ಪ, ವಿಧಾನ ಸಭಾ ಸಚಿವಾಲಯದ ಅಧೀನ ಕಾರ್ಯದರ್ಶಿಗಳಾದ್ದ ಶ್ರೀ ಹೆಚ್.ಎಸ್. ಜಗನ್ನಾಥ್‌ರವರು, ಸಂಶೋಧನಾ ವಿಭಾಗದ ಶ್ರೀಮತಿ ವಿಶಾಲಾಕ್ಷಿ, ಮತ್ತು ಇತರೆ ಸಿಬ್ಬಂದಿಯವರು ವಿಶೇಷವಾಗಿ ಸಹಕರಿಸಿದ್ದಾರೆ. ಹಾಗೂ ಬೆರಳಚ್ಚುಗಾರ್ತಿ ಶ್ರೀಮತಿ ರತ್ನಾ ಚಂದ್ರಶೇಖರ್, ಡಿ.ಟಿ.ಪಿ. ಮಾಡಿದಂತಹ ಕುಮಾರಿ ಪಿ. ತೇಜ ಮತ್ತು ಸರ್ಕಾರಿ ಮುದ್ರಣಾಲಯದವರಿಗೂ ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಜೊತೆಗೆ, ವಿವಿಧ ಲೇಖಕರು ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಕುರಿತಂತೆ ಪ್ರಕಟಿಸಿದ ಬರಹಗಳನ್ನು–ಗ್ರಂಥಗಳನ್ನು ಸದುಪಯೋಗ ಮಾಡಿಕೊಂಡಿದ್ದೇನೆ. ಆ ಲೇಖಕರಿಗೆಲ್ಲ ನನ್ನ ಧನ್ಯವಾದಗಳು.

ಬೆಂಗಳೂರಿನ ಮಲ್ಲೇಶ್ವರಂ ಎಂ.ಇ.ಎಸ್ ಸಂಸ್ಥೆಯವರು ಶಾಸ್ತ್ರಿಯವರ ಕುರಿತು ಮಾಹಿತಿ ಒದಗಿಸಿ ಕೊಡುವಲ್ಲಿ ಸಹಕರಿಸಿದ್ದಾರೆ. ಅವರಿಗೂ ನನ್ನ ಧನ್ಯವಾದಗಳನ್ನು ತಿಳಿಸುತ್ತೇನೆ. ಕೊನೆಯದಾಗಿ, ಈ ಲೇಖನ ರಚನೆ ಸಂದರ್ಭದಲ್ಲಿ ನನಗೆ ಹೆಚ್ಚಿನ ಪ್ರೋತ್ಸಾಹ ಹಾಗೂ ಸಹಕಾರ ನೀಡಿದ ನನ್ನ ಪತಿ ಹೆಚ್.ವಿ. ರಮೇಶ್ ನಾಯಕ್ ಹಾಗೂ ಮಗಳು ಭೂಮಿಕಾಳನ್ನು ಸದಾ ಸ್ಮರಿಸುತ್ತೇನೆ.

ನಾನು ಈಗಾಗಲೇ **"ಶಿವಮೊಗ್ಗ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು"** (2002) ಹಾಗೂ **"ದಕ್ಷಿಣ ಕನ್ನಡ ಜಿಲ್ಲೆಯ ಶತಮಾನದ ಮಹಾನ್ ಪ್ರತಿಭೆಗಳು"** (2003) ಎಂಬ ಎರಡು ಸಂಶೋಧನಾ ಗ್ರಂಥಗಳನ್ನು ರಚಿಸಿ ಪ್ರಕಟಿಸಿದ್ದು ಅಪಾರ ಜನಮನ್ನಣೆಗೆ ಪಾತ್ರವಾಗಿವೆ. ಅದೇ ರೀತಿ, ನಾನು ಈಗ ರಚಿಸಿ ಕರ್ನಾಟಕ ಸರ್ಕಾರ ಪ್ರಕಟಿಸುತ್ತಿರುವ ನನ್ನ ಮೂರನೇ ಕೃತಿ **"ಪ್ರೊ. ಎಂ.ಪಿ.ಎಲ್. ಶಾಸ್ತ್ರಿ"** ಗ್ರಂಥವು ಸಹ ಜನ ಮನ್ನಣೆ ಗಳಿಸುತ್ತದೆ ಎಂದು ಭರವಸೆಯನ್ನು ಹೊಂದಿದ್ದೇನೆ.

**ಹಾರೋಗದ್ದೆ ಉಷಾ ರಮೇಶ್ ನಾಯಕ**
ಲೇಖಕಿ

# ಭಾಗ–1

## ಬಾಲ್ಯ ಜೀವನ – ಶಿಕ್ಷಣ – ಮತ್ತು ವಿವಿಧ ರಂಗಗಳಲ್ಲಿ ಅವರ ವಿಶಿಷ್ಟ ಸೇವೆಗಳ ಕುರಿತು.

# ಪ್ರೊ. ಎಂ.ಪಿ.ಎಲ್. ಶಾಸ್ತ್ರಿ

## ಪರಿವಿಡಿ

## ಭಾಗ–3



## ಭಾಗ–4

# ಭಾಗ 1

# ಪ್ರೊ. ಮುತ್ತೂರು ಪುರುಷೋತ್ತಮ ಲಕ್ಷ್ಮೀನರಸಿಂಹ ಶಾಸ್ತ್ರಿಗಳು

ಪ್ರೊ: ಎಂ.ಪಿ.ಎಲ್. ಶಾಸ್ತ್ರಿ ಎಂದೇ ಪ್ರಸಿದ್ಧರಾದ ಇವರು ಶ್ರೇಷ್ಠ ಸಂಸದೀಯ ಪಟುಗಳು, ಶಿಕ್ಷಣತಜ್ಞರು, ಸಂಸ್ಕೃತ ವಿದ್ವಾಂಸರು, ಆಡಳಿತಗಾರರು, ಸಂಘಟನಕಾರರು ಹಾಗೂ ಕಲಾ ಪೋಷಕರು ಆಗಿದ್ದು ತಮ್ಮ ನಿರರ್ಗಳವೂ ಹಾಗೂ ಪ್ರಭಾವಶಾಲಿಯೂ ಆದ ವಾಗ್ಝರಿಗೆ ಹೆಸರಾದಂತವರು. ಸುಮಾರು ಎರಡು ದಶಕಗಳ ಕಾಲ (1946–49, 1952–1968) ರಾಜ್ಯ ಮೇಲ್ಮನೆಯ (ವಿಧಾನ ಪರಿಷತ್) ಸದಸ್ಯರಾಗಿ ರಾಜ್ಯದ ಜನತೆಯ ಹಿತಾಸಕ್ತಿಯ ಸಂಬಂಧ ಶ್ರಮಿಸಿದಂತವರು. ಹಾಗೇ ಹಲವಾರು ಸಂಘ–ಸಂಸ್ಥೆಗಳಲ್ಲಿ ಉನ್ನತಮಟ್ಟದ ಸೇವೆ ಸಲ್ಲಿಸಿದಂತವರು.

ವಿಧಾನ ಪರಿಷತ್ ಇತಿಹಾಸದಲ್ಲಿಯೇ ಅತ್ಯುತ್ತಮ ಸಂಸದೀಯ ಪಟುಗಳೆಂದೇ ಖ್ಯಾತರಾದ ಶಾಸ್ತ್ರಿಗಳು ಸದನದಲ್ಲಿ ವಿಚಾರ ಪೂರಿತ ಭಾಷಣ ಮಾಡುತ್ತ ಸರ್ಕಾರಕ್ಕೆ ಸೂಕ್ತವಾದ ಸಲಹೆ–ಸೂಚನೆಗಳನ್ನು ನೀಡಿದಂತವರು. ಅವರ ಸದಸ್ಯತ್ವದ ಕಾಲದಲ್ಲಿ ಮುಖ್ಯಮಂತ್ರಿ ಹಾಗೂ ವಿದ್ಯಾ ಮಂತ್ರಿಗಳಾದ ಎಲ್ಲಾ ಧುರೀಣರಿಗೆ ವಿಶೇಷವಾಗಿ ಏಕೈಕ ವಿಶ್ವಾಸಾರ್ಹ ವ್ಯಕ್ತಿಯೆಂದರೆ ಶಾಸ್ತ್ರಿಗಳು. ಶಾಸ್ತ್ರಿಯವರು ತಮ್ಮ ಆಳವಾದ ಜ್ಞಾನ, ಅನುಭವ ಹಾಗೂ ವಾಕ್ಚಾತುರ್ಯದಿಂದಾಗಿ ವಿಧಾನ ಪರಿಷತ್ತಿನ ಕಲಾಪಗಳಿಗೆ ಹೊಸ ಆಯಾಮವನ್ನು ತಂದು ಕೊಟ್ಟವರಾಗಿದ್ದು ಸದಸ್ಯರೆಲ್ಲರ ಗೌರವಕ್ಕೆ ಪಾತ್ರರಾಗಿದ್ದರು.

ಶಾಸ್ತ್ರಿಯವರು ಹಿಂದಿನ ಮೈಸೂರು ನ್ಯಾಯವಿಧಾಯಕ ಸಭೆಯ ಸದಸ್ಯರಾಗಿ ಆಯ್ಕೆಯಾದ ಸಂದರ್ಭದಲ್ಲಿ ಆಗಿನ ಪ್ರಸಿದ್ಧ ಕಾಂಗ್ರೆಸ್ ಮುಖಂಡರು ಹಾಗೂ ಹಣಕಾಸು ಸಚಿವರಾಗಿದ್ದ ಹೆಚ್.ಸಿ. ದಾಸಪ್ಪನವರು, ಎಂ.ಪಿ.ಎಲ್. ಎಂದರೇ "ಮೈಸೂರು ಪವರ್ ಅಂಡ್ ಲೈಟ್" ಎಂದು ಅರ್ಥೈಸಿದ್ದರಂತೆ. ಇದು ಅಕ್ಷರಶಃ ಸತ್ಯ.

ಶಾಸ್ತ್ರಿಯವರು ನ್ಯಾಯವಿಧಾಯಕ ಸಭೆಗೆ ಆಯ್ಕೆಯಾದ ಸಮಯದಲ್ಲಿ ಅದು ಚೆಂಗಲರಾಯರೆಡ್ಡಿ, ಮಹಾದೇವಯ್ಯ, ಕೆ.ಟಿ. ಭಾಷ್ಯಂ ಮುಂತಾದ ಶ್ರೇಷ್ಠ ಧುರೀಣ ರಿಂದ ಕೂಡಿದ್ದು ಅವರುಗಳು ತಮ್ಮ ಭಾಷಣಗಳಿಂದ ಇಡೀ ಸಭೆಯನ್ನು ಆಕರ್ಷಿಸುತ್ತಿದ್ದಂತಹ ಕಾಲ. ಅಂತಹವರ ಮಧ್ಯೆಯು ಶಾಸ್ತ್ರಿಯವರು ತಾವೇನೂ ಕಮ್ಮಿ ಇಲ್ಲವೆಂಬಂತೆ ತಮ್ಮ ಅದ್ಭುತವಾದ ವಾಕ್ಚಾತುರ್ಯ ಮತ್ತು ವಿಚಾರ ಲಹರಿಯಿಂದ ಇಡೀ ಸಭೆಯನ್ನು ಮೋಡಿ ಮಾಡುತ್ತಿದ್ದರು. ಅವರು ತಮ್ಮ ಮೂರನೆಯ ಬಾರಿಯ ಸದಸ್ಯತ್ವದ ಅವಧಿಯು ಮುಕ್ತಾಯವಾದ (1962–68) ನಂತರ ರಾಜಕೀಯ ಜೀವನಕ್ಕೆ ನಿವೃತ್ತಿಯನ್ನು ಘೋಷಿಸಿದಾಗ ಶಾಸ್ತ್ರಿಗಳಿಲ್ಲದ ವಿಧಾನ ಪರಿಷತ್ತನ್ನು ಕಲ್ಪಿಸಿಕೊಳ್ಳುವುದೇ ಅಸಾಧ್ಯ ಎಂದು ಹಲವು ಹಿರಿಯರು ಉದ್ಗರಿಸಿದರಂತೆ.

ಶಾಸ್ತ್ರಿಯವರ ಪ್ರಕಾಂಡ ಪಾಂಡಿತ್ಯ ಹಾಗೂ ಅವರು ತಮ್ಮನ್ನು ವಿವಿಧ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಸಿ ಕೊಂಡದ್ದನ್ನು ಗಮನಿಸಿಯೇ ರಾಷ್ಟ್ರಾಧ್ಯಕ್ಷರಾಗಿದ್ದ ಡಾ: ರಾಧಾಕೃಷ್ಣನ್ ಅವರು ಶಾಸ್ತ್ರೀಯವರನ್ನು "a veritable human dynamo" ಎಂದು ಕರೆದಿದ್ದರು.

## ಬಾಲ್ಯ ಜೀವನ, ಶಿಕ್ಷಣ ಮತ್ತು ವಿವಿಧ ರಂಗಗಳಲ್ಲಿ ಅವರ ವಿಶಿಷ್ಟ ಸೇವೆಗಳ ಕುರಿತು–

ಶಾಸ್ತ್ರಿಗಳು ಕೋಲಾರ ಜಿಲ್ಲೆಯ ಶಿಡ್ಲಘಟ್ಟ ತಾಲ್ಲೂಕಿನ ಮುತ್ತೂರು ಗ್ರಾಮದಲ್ಲಿ ಜನಿಸಿದರು (10.3.1910). ಶಾಸ್ತ್ರಿಗಳದು ಸಂಸ್ಕೃತ ಪಂಡಿತರ ವಂಶವಾಗಿದ್ದು ಅವರ ತಂದೆ ಮಹಾವಿದ್ವಾನ್ ಪಂಡಿತ ರತ್ನಂ ಪುರುಷೋತ್ತಮ ಶಾಸ್ತ್ರಿಗಳು, ಅವರ ತಾಯಿ ಅನ್ನಪೂರ್ಣಮ್ಮನವರು, ಮೈಸೂರು ಮಹಾರಾಜರಾಗಿದ್ದ ಶ್ರೀ ಕೃಷ್ಣರಾಜ ಒಡೆಯರು ಪುರುಷೋತ್ತಮ ಶಾಸ್ತ್ರಿಗಳನ್ನು ತಮ್ಮ ಆಸ್ಥಾನದ ಮಹಾವಿದ್ವಾಂಸರನ್ನಾಗಿ ನೇಮಕ ಮಾಡಿಕೊಂಡಿದ್ದು 'ಪಂಡಿತ ರತ್ನಂ' ಎಂಬ ಬಿರುದನ್ನು ನೀಡಿ ಗೌರವಿಸಿದ್ದರು. ಅವರ ತಂದೆ ನರಹರಿ ಶಾಸ್ತ್ರಿಗಳು ಸಹ ಆಸ್ಥಾನದ ಮಹಾವಿದ್ವಾಂಸರಾಗಿದ್ದಂತವರು.

ಶಾಸ್ತ್ರಿಗಳು ತಮ್ಮ ಪ್ರಾರಂಭಿಕ ಶಿಕ್ಷಣವನ್ನು ತಮ್ಮ ತಾತ ನರಹರಿ ಶಾಸ್ತ್ರಿಗಳು ಮುತ್ತೂರಿನಲ್ಲಿ ಸ್ಥಾಪಿಸಿದ್ದ 125 ವರ್ಷಗಳಷ್ಟು ಪ್ರಾಚೀನವಾದ ಹಾಗೂ ಕರ್ನಾಟಕದಲ್ಲಿಯೆ ಪ್ರಖ್ಯಾತವಾದ ಸಂಸ್ಕೃತ ಗುರುಕುಲದಲ್ಲಿ ಪಡೆದರು. 10ನೇ ವಯಸ್ಸಿನಲ್ಲಿಯೇ ಶಾಸ್ತ್ರಿಗಳು ತಮ್ಮ ತಂದೆ ಮತ್ತು ತಾತನ ನೆರವಿನಿಂದ ಸಂಸ್ಕೃತ ಭಾಷೆಯಲ್ಲಿ ಆಳವಾದ ಜ್ಞಾನವನ್ನು ಹೊಂದಲು ಸಾಧ್ಯವಾಯಿತು.

ಮುತ್ತೂರಿನಲ್ಲಿಯೇ ಇಂಗ್ಲಿಷ್ ಲೋಯರ್ ಸೆಕೆಂಡರಿ ಶಿಕ್ಷಣ ಮುಗಿಸಿದ ಶಾಸ್ತ್ರಿಗಳು ನಂತರ ಬೆಂಗಳೂರಿನ ನ್ಯಾಷನಲ್ ಹೈಸ್ಕೂಲಿನಲ್ಲಿ ಶಿಕ್ಷಣ ಮುಂದುವರೆಸಿ (1925–27) ನಂತರ ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ಅಭ್ಯಸಿಸಿದರು. (1927–30).

ಈ ಸಮಯದಲ್ಲಿ ಭಾರತದ ಸ್ವಾತಂತ್ರ್ಯ ಚಳುವಳಿಯು ಉಚ್ಛ್ರಾಯ ಸ್ಥಿತಿ ತಲುಪಿದ್ದು ಶಾಸ್ತ್ರಿಗಳು ಸ್ವಾತಂತ್ರ್ಯ ಚಳುವಳಿಯ ನಾಯಕರ ಭಾಷಣಗಳಿಂದ ಸ್ಫೂರ್ತಿಗೊಂಡು ರಾಷ್ಟ್ರೀಯ ಭಾವನೆಯನ್ನು ಬೆಳೆಸಿಕೊಂಡರು. 'ಸೈಮನ್ ಹಿಂತಿರುಗು' (1927) – ಉಗ್ರ ಚಳುವಳಿಯಲ್ಲಿ ಅವರು ವಿದ್ಯಾರ್ಥಿ ನಾಯಕರಾಗಿ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಮೆರವಣಿಗೆ, ಪ್ರತಿಭಟನಾ ಸಭೆಗಳ ಮುಂದಾಳತ್ವ ವಹಿಸುತ್ತಿದ್ದರು. ಈ ರಾಷ್ಟ್ರೀಯ ಅಂದೋಲನದ ಹಿನ್ನೆಲೆಯೆ ಅವರನ್ನು ಹೆಚ್ಚು ಹೆಚ್ಚು ಕ್ರಿಯಾಶೀಲರನ್ನಾಗಿ ಮಾಡಿತಲ್ಲದೆ ತಮ್ಮ ನಾಡು ಹಾಗೂ ಸಂಸ್ಕೃತಿಯ ಬಗ್ಗೆ ಅಪಾರ ಅಭಿಮಾನ ತಳೆಯುವಂತೆ ಮಾಡಿತು.

ಅವರು ಮುಂದೆ ಸಂಸ್ಕೃತ ಭಾಷೆಯಲ್ಲಿ ಉನ್ನತ ಶಿಕ್ಷಣ ಪಡೆಯಲು (ಬಿ.ಎ., ಎಂ.ಎ) ಮೈಸೂರು ಮಹಾರಾಜ ಕಾಲೇಜು ಸೇರಿದ್ದು (1931–36) ಇಲ್ಲಿ ಅವರಿಗೆ ಶ್ರೇಷ್ಠ ಮಟ್ಟದ ವಿದ್ವಾಂಸರಾಗಿದ್ದ ಬಿ.ಎಂ.ಶ್ರೀ, ಟಿ.ಎಸ್. ವೆಂಕಣ್ಣಯ್ಯ, ಎಂ. ಹಿರಿಯಣ್ಣ, ಎ.ಆರ್. ಕೃಷ್ಣಶಾಸ್ತ್ರಿ, ಎಂ.ಎಚ್. ಕೃಷ್ಣ, ಎ.ಆರ್. ವಾಡಿಯಾ, ಜೆ.ಸಿ. ರಾಲೋಮೆಟ್‌ಕಾಫ್, ಸುಬ್ಬರಾಯ ಶಾಸ್ತ್ರಿ ಮುಂತಾದವರ ಸಂಪರ್ಕ ದೊರೆತಿದ್ದು. ಅವರೆಲ್ಲರ ವಿಶ್ವಾಸಕ್ಕೂ ಪಾತ್ರರಾದರು.

ಜೊತೆಗೆ, ಶಾಸ್ತ್ರಿಗಳು ಸಾಂಸ್ಕೃತಿಕ ಚಟುವಟಿಕೆಗಳಲ್ಲು ಸಕ್ರಿಯವಾಗಿ ಭಾಗವಹಿಸುತ್ತಿದ್ದು ಮಹಾರಾಜ ಕಾಲೇಜಿನ ಕರ್ನಾಟಕ ಸಂಘ, ಇತಿಹಾಸ ಸಂಘ, ಸಂಸ್ಕೃತ ಸಂಘ ಮತ್ತು ಕಾರ್ಯದರ್ಶಿಗಳ ಸಂಘದ ಪ್ರಧಾನ ಕಾರ್ಯದರ್ಶಿಯಾಗಿಯೂ ಕ್ರಿಯಾತ್ಮಕವಾಗಿದ್ದರು. ಕಾಲೇಜಿನ ಚರ್ಚಾಸ್ಪರ್ಧೆ ಮತ್ತು ಭಾಷಣ ಸ್ಪರ್ಧೆಗಳಲ್ಲಿ ಸತತವಾಗಿ ಭಾಗವಹಿಸುತ್ತಿದ್ದು ಅತ್ಯುತ್ತಮ ಭಾಷಣಕಾರರೆಂದು ಗುರುತಿಸಲ್ಪಟ್ಟಿದ್ದು ವಿದ್ಯಾರ್ಥಿ ಸಮುದಾಯದಲ್ಲಿ ಬಹುಜನಪ್ರಿಯರಾಗಿದ್ದರು, ಅಲ್ಲದೆ ಅವರಿಗೆ ಯಾವುದೇ ಅನರ್ಸ್ ಅಥವಾ ಎಂ.ಎ. ತರಗತಿಗೆ ಬೇಕಾದರೂ ಹೋಗಿ ಕುಳಿತು ಪಾಠ ಕೇಳುವಂತ ಅನುಮತಿ ಅವರಿಗೆ ಪ್ರಾಚಾರ್ಯರಿಂದ ದೊರೆತಿತ್ತು. ಕಾರವಾರದಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿದ (1931) ಶಾಸ್ತ್ರಿಗಳಿಗೆ ವಿ.ಸೀ. ತಿ.ತಾ.ಶರ್ಮ ಮುಂತಾದ ಗಣ್ಯರ ಪರಿಚಯವಾಗಿತ್ತು.

ತಮ್ಮ ಎಂ.ಎ. ಪದವಿಯ ನಂತರ ಶಾಸ್ತ್ರಿಗಳು ಕೆಲಕಾಲ ಮೈಸೂರಿನ ಬನುಮಯ್ಯ ಹೈಸ್ಕೂಲು ಮತ್ತು ಮಹಾರಾಜಾ ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಈ ಸಮಯದಲ್ಲಿ ಖ್ಯಾತರಾಗಿರುವ ಡಾ: ಎಲ್. ಬಸವರಾಜು, ಡಾ: ಕೆ. ಕೃಷ್ಣಮೂರ್ತಿ, ಪ್ರೊ: ಬಿ.ಎಚ್. ಶ್ರೀಧರ, ಡಾ:ದೇಜಗೌ ಅವರ ಶಿಷ್ಯರಾಗಿದ್ದರು.

ನಂತರದಲ್ಲಿ ಶಾಸ್ತ್ರಿಗಳು ಬೆಂಗಳೂರಿನಲ್ಲಿ ನೆಲೆ ನಿಂತು (1938) ತಮ್ಮನ್ನು ಸಾರ್ವಜನಿಕ ಸೇವೆಯಲ್ಲಿ ತೊಡಗಿಸಿಕೊಂಡರು. ಅವರ ವಿಶಿಷ್ಟ ಸೇವೆಯನ್ನು ಶಿಕ್ಷಣ ತಜ್ಞರಾಗಿ, ವಿಧಾನ ಪರಿಷತ್ ಸದಸ್ಯರಾಗಿ ಹಾಗೂ ಸಾಂಸ್ಕೃತಿಕ ರಂಗದ ಪೋಷಕರಾಗಿ ಸ್ಪಷ್ಟವಾಗಿ ಗುರುತಿಸಲಾಗಿದ್ದು ಆ ಕ್ಷೇತ್ರಗಳಡೆಯಲ್ಲಿಯೇ ಅವರ ಸೇವೆಯನ್ನು ವಿವರವಾಗಿ ಸ್ಮರಿಸಲಾಗಿದೆ.

## ಶಿಕ್ಷಣ ತಜ್ಞರಾಗಿ :

ಶಾಸ್ತ್ರಿಗಳನ್ನು ನಮ್ಮ ರಾಜ್ಯದ ಶ್ರೇಷ್ಠ ಶಿಕ್ಷಣ ತಜ್ಞರಲ್ಲಿ ಒಬ್ಬರೆಂದು ಗುರುತಿಸಲಾಗಿದೆ. ಅವರು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅಪಾರವಾದದ್ದು ಹಾಗೂ ಅಮೂಲ್ಯವಾದದ್ದು. ಅವರು ಬೆಂಗಳೂರಿನ ಪ್ರತಿಷ್ಠಿತ ಎಂ.ಇ.ಎಸ್. ಸಂಸ್ಥೆಯನ್ನು ಕೈಗಾರಿಕೋದ್ಯಮಿ ಜಿ.ಎ. ಆಚಾರ್ಯ, ಕ್ರಿಕೆಟ್ ಕ್ಷೇತ್ರದಲ್ಲಿಯೆ ಹೆಸರಾದ ಹಾಗೂ ಸುಪ್ರಸಿದ್ಧ ವಕೀಲರಾಗಿದ್ದ ಎಂ. ಚಿನ್ನಸ್ವಾಮಿ ಮತ್ತು ವಾಣಿಜ್ಯ ಶಿಕ್ಷಣದಲ್ಲಿ ಖ್ಯಾತರಾಗಿದ್ದ ಬಿ.ಆರ್. ಸುಬ್ಬರಾವ್ ಅವರ ಸಹಕಾರದೊಂದಿಗೆ ಸ್ಥಾಪಿಸಿದರು (1955–56). ಮಲ್ಲೇಶ್ವರಂನ 15ನೇ ಕ್ರಾಸಿನಲ್ಲಿ ಪುಟ್ಟದಾಗಿ ಪ್ರಾರಂಭವಾದ ಈ ಸಂಸ್ಥೆ ಇಂದು ಹೆಮ್ಮರವಾಗಿ ಬೆಳೆದಿದೆ. ಎಂ.ಎ.ಎಸ್. ಸಂಸ್ಥೆ ಪ್ರಾರಂಭವಾದ ದಿನದಿಂದ ಅದರ ಸಮಗ್ರ ಜವಾಬ್ದಾರಿಗಳು ಶಾಸ್ತ್ರಿಗಳು ಹೆಗಲಿಗೆ ಬಿದ್ದವು. ಶಾಸ್ತ್ರಿಗಳು ಅದರ ಸ್ಥಾಪನಾ ಕಾರ್ಯದರ್ಶಿಯಾಗಿ (1957) ಮತ್ತು ಅಧ್ಯಕ್ಷರಾಗಿ (1991–2001) ಸೇವೆ ಸಲ್ಲಿಸಿದ್ದಲ್ಲದೆ ಈ ಸಂಸ್ಥೆಯಡಿಯಲ್ಲಿ ಇತರ ಹಲವಾರು ಸಂಸ್ಥೆಗಳನ್ನು ಪ್ರಾರಂಭಿಸಿದ್ದು ಯಶಸ್ವಿಯಾಗಿ ಮುನ್ನಡೆಯುವಂತೆ ಮಾಡಿದ್ದಾರೆ.

ಅದೇ ರೀತಿ, ಅವರು ಬಹಳ ಹಿಂದೆಯೆ ಖ್ಯಾತ ಸಾಹಿತಿಗಳಾಗಿದ್ದ ಶ್ರೀ ದೇವುಡು ಅವರ ಜೊತೆ ಸಹಕರಿಸಿ ಗಾಂಧಿನಗರ ಪ್ರೌಢ ಶಾಲೆಯನ್ನು ಸ್ಥಾಪಿಸಿದ್ದರು (1942). ಅದರ

ಮುಖ್ಯೋಪಾಧ್ಯಾಯರಾಗಿಯೂ ಕಾರ್ಯ ನಿರ್ವಹಿಸಿದ್ದ ಅವರು ಆ ಶಾಲೆಯನ್ನು ನಮ್ಮ ರಾಷ್ಟ್ರದ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಬೆಳೆಸಿದರು.

ವಿಶೇಷವಾಗಿ ಅವರು ಮೈಸೂರು ವಿಶ್ವವಿದ್ಯಾಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳ ಅಭಿವೃದ್ಧಿಗೂ ಶ್ರಮಿಸಿದಂತವರು. ಶಾಸ್ತ್ರಿಯವರು ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಆಯ್ಕೆಗೊಂಡಿದ್ದು (1944) ಮುಂದೆ ಅವರು ಅದರ ಸಿಂಡಿಕೇಟ್ ಮತ್ತು ಅಕಾಡೆಮಿಕ್ ಕೌನ್ಸಿಲ್‌ಗಳಲ್ಲೂ ಸದಸ್ಯರಾಗಿ ಸುಮಾರು 25 ವರ್ಷಗಳಷ್ಟು ದೀರ್ಘ ಕಾಲ ವಿಶ್ವವಿದ್ಯಾನಿಲಯದ ಅಭಿವೃದ್ಧಿಗಾಗಿ ಶ್ರಮಿಸಿದ್ದರು (1944–69).

ಮುಂದೆ ಅವರು ಬೆಂಗಳೂರು ವಿಶ್ವವಿದ್ಯಾನಿಲಯದ ಸ್ಥಾಪನಾ ಸಮಿತಿಯ ಸದಸ್ಯರಾಗಿ ಅದರ ಸ್ಥಾಪನೆಗೂ ಶ್ರಮಿಸಿದರು (1964). ಅದರ ಪ್ರಥಮ ಸಿಂಡಿಕೇಟ್, ಸೆನೆಟ್ ಮತ್ತು ಅಕಾಡೆಮಿಕ್ ಕೌನ್ಸಿಲ್ ಸದಸ್ಯರಾಗಿ ಸುಮಾರು 15 ವರ್ಷ ಕಾಲ ಸೇವೆ ಸಲ್ಲಿಸಿದರು. (1964–1979).

ಶಾಸ್ತ್ರಿಗಳು ಆಗಿನ ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಎಸ್.ಆರ್. ಕಂಠಿ ಮತ್ತು ಇತರರ ಜೊತೆಗೂಡಿ 'ಬೆಂಗಳೂರು ವಿಶ್ವವಿದ್ಯಾನಿಲಯ ಬಿಲ್'ನ್ನು ತಯಾರಿಸುವಲ್ಲಿ ಮಹತ್ತರವಾದ ಪಾತ್ರವಹಿಸಿದ್ದರು. ಈ ಸಂಬಂಧ ಯು.ಜಿ.ಸಿ.ಯ ಅಧ್ಯಕ್ಷರಾಗಿದ್ದ ಸರ್. ಚಿಂತಮನ್ ದೇಶಮುಖ್ ಅವರೊಂದಿಗೂ ಸಹಕರಿಸಿದ್ದರು.

ಶೈಕ್ಷಣಿಕ ವಿಚಾರ ಕುರಿತಂತೆ ಅಪಾರ ಜ್ಞಾನ ಹೊಂದಿದ್ದ ಅವರು ಯಾವುದೇ ಸಮಸ್ಯೆಯನ್ನು ಅಂಕಿ–ಅಂಶಗಳೊಂದಿಗೆ ಸಮರ್ಥವಾಗಿ ವಿಶ್ಲೇಸುತ್ತಿದ್ದರು. ಅವರು ಶೈಕ್ಷಣಿಕ ವಿಚಾರಗಳ ಸಂಬಂಧವಾಗಿ ವಿಶೇಷವಾಗಿ ರಾಧಾಕೃಷ್ಣನ್ ಸಮಿತಿ (1946), ರೆಡ್ಡಿ ಆಯೋಗ, ಕೊಠಾರಿ ಆಯೋಗ, ಲಕ್ಷ್ಮಣ ಸ್ವಾಮಿ ಮೊದಲಿಯಾರ್ ಆಯೋಗ, ರಾಜ್ಯ ಪುನರ್ವಿಂಗಡಣ ಆಯೋಗ, ಭಾಷಾ ಆಯೋಗ ಮೊದಲಾದವುಗಳ ಮುಂದೆ ತುಂಬಾ ಸಮರ್ಥವಾಗಿ ತಮ್ಮ ವಾದಗಳನ್ನು ಮಂಡಿಸಿದ್ದರು.

ಶಾಸ್ತ್ರಿಯವರು ಪ್ರಾಥಮಿಕ ಹಂತದ ಶಿಕ್ಷಣದಿಂದ ಹಿಡಿದು ವಿಶ್ವವಿದ್ಯಾಲಯ ಮಟ್ಟದ ಶಿಕ್ಷಣದ ಅಭಿವೃದ್ಧಿಗಾಗಿ ಶ್ರಮಿಸಿದ್ದಂತವರು. ಸಂಸ್ಕೃತ ಭಾಷೆಯಲ್ಲಿ ವಿಶೇಷ ಪರಿಣಿತಿ ಪಡೆದಿದ್ದ ಅವರು ಸಂಸ್ಕೃತ ಶಿಕ್ಷಣ ಮತ್ತು ಪರೀಕ್ಷಾ ಮಂಡಳಿಯ ಸದಸ್ಯರಾಗಿ 25 ವರ್ಷಗಳಷ್ಟು ದೀರ್ಘ ಕಾಲ ಸೇವೆ ಸಲ್ಲಿಸಿದ್ದರು (1945–72). ಹಾಗೂ ಸಂಸ್ಕೃತ ಭಾಷೆಯ ಸಂಬಂಧವಾಗಿ ಅವರು ರಾಜ್ಯ ಮತ್ತು ರಾಷ್ಟ್ರಮಟ್ಟದ ಸಮಿತಿಗಳಲ್ಲಿ ಕೆಲಸ ಮಾಡಿದ್ದರು.

ಜೊತೆಗೆ ಶಿಕ್ಷಣ ತಜ್ಞರಾಗಿ ರಾಜ್ಯದ ಪ್ರಪ್ರಥಮ ಪಿ.ಯು.ಸಿ. ಮಂಡಲಿ, ಸೆಕೆಂಡರಿ ಶಿಕ್ಷಣದ ಬೋರ್ಡ್, ವಿಶ್ವವಿದ್ಯಾನಿಲಯದ ಶಿಕ್ಷಣಾಭಿವೃದ್ಧಿ ಸಮಿತಿ, ಮೆಡಿಕಲ್ ಕಾಲೇಜು ಸಮಿತಿ, ಮೈಸೂರು–ಬೆಂಗಳೂರು ವಿಶ್ವವಿದ್ಯಾನಿಲಯಗಳ ಸಂಸ್ಕೃತ, ಪಾಳಿಪ್ರಾಕೃತ ಭಾಷಾ ವಿಭಾಗಗಳ ಅಧ್ಯಯನ ಸಮಿತಿ ಮುಂತಾದವುಗಳಲ್ಲಿ ಅವರು ಸದಸ್ಯರಾಗಿದ್ದರು ಹಾಗೂ ದೇಶದ ಅನೇಕ ವಿಶ್ವವಿದ್ಯಾನಿಲಯಗಳ ಸಂಸ್ಕೃತ ವಿಭಾಗದ ಸ್ನಾತಕೋತ್ತರ ಪದವಿಗೆ ಪರೀಕ್ಷಕರಾಗಿದ್ದರು.

## ವಿಧಾನಪರಿಷತ್ ಸದಸ್ಯರಾಗಿ :

ಶಾಸ್ತ್ರಿಗಳು ಶಿಕ್ಷಣ ಕ್ಷೇತ್ರದಿಂದ ವಿಧಾನಮಂಡಲದ ಮೇಲ್ಮನೆ ಅಥವಾ ವಿಧಾನಪರಿಷತ್‌ಗೆ ಮೂರು ಬಾರಿ ಆಯ್ಕೆಗೊಂಡು ಶ್ರೇಷ್ಠ ಸೇವೆ ಸಲ್ಲಿಸಿದ್ದರು (1952–1968). ಅಲ್ಲದೆ ಅವರು ಸ್ವಾತಂತ್ರ್ಯಕ್ಕೂ ಮೊದಲು ಹಳೇ ಮೈಸೂರು ರಾಜ್ಯದ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದರು (1946–49). ಅವರನ್ನು ವಿಧಾನ ಮಂಡಲದ ಪಬ್ಲಿಕ್ ಅಕೌಂಟ್ಸ್ ಸಮಿತಿ ಸದಸ್ಯರನ್ನಾಗಿಯೂ ಮಾಡಲಾಗಿತ್ತು.

ಅವರು ತಮ್ಮ ಸದಸ್ಯತ್ವದ ಕಾಲವನ್ನು ತುಂಬಾ ಜವಾಬ್ದಾರಿಯುತವಾಗಿ ನಿರ್ವಹಿಸಿದಂತವರು. ಅವರು ಪರಿಷತ್ತಿನ ಕಲಾಪಗಳಲ್ಲಿ ಅತೀವ ಆಸಕ್ತಿಯಿಂದ ಭಾಗವಹಿಸುತ್ತಿದ್ದು ಅವರ ಭಾಷಣಗಳು ತುಂಬಾ ಸುದೀರ್ಘವಾಗಿರುತ್ತಿದ್ದು ಅಂಕಿ–ಅಂಶಗಳಿಂದ, ವಿಚಾರಗಳಿಂದ ಕೂಡಿರುತ್ತಿದ್ದವು. ಜನತೆಯ ಸಮಸ್ಯೆಗಳಿಗೆ ಸ್ಪಂದಿಸುವುದೇ ಅವರ ಮುಖ್ಯ ಗುರಿಯಾಗಿರುತ್ತಿತ್ತು. ಅವರು ಖ್ಯಾತ ಶಿಕ್ಷಣ ತಜ್ಞರೆಂದು ಗುರುತಿಸಲ್ಪಟ್ಟಿದ್ದರೂ ಅವರು ಗಮನ ಹರಿಸದ ವಿಚಾರಗಳಿರಲಿಲ್ಲ. ಅದು ಭಾಷಾ ಸಮಸ್ಯೆ ಕುರಿತಂತೆ ಇರಬಹುದು, ರೈತರ ಸಮಸ್ಯೆ ಕುರಿತಂತೆ ಇರಬಹುದು ಅಥವಾ ಇನ್ಯಾವುದೋ ಸಮಸ್ಯೆ ಕುರಿತಂತೆ ಇರಬಹುದು. ಸ್ವತಃ ಸರ್ಕಾರ ಅವರ ಸಲಹೆಗಳನ್ನು ಕೇಳುತ್ತಿತ್ತು ಹಾಗೂ ಆ ದಿಸೆಯಲ್ಲಿ ಮುಂದುವರೆಯುತ್ತಿತ್ತು. ಆ ಮಟ್ಟದಲ್ಲಿ ಶಾಸ್ತ್ರಿಗಳು ಸಮಸ್ಯೆಗಳೆಡೆಗೆ ಗಮನಹರಿಸುತ್ತಿದ್ದರೆಂದರೆ ತಪ್ಪಿಲ್ಲ.

ಶಾಸ್ತ್ರಿಯವರು ರಾಜಕೀಯವನ್ನು ತಮ್ಮ ಪೂರ್ಣ ಅವಧಿಯ ವೃತ್ತಿಯನ್ನಾಗಿ ಮಾಡಿಕೊಂಡಿರಲಿಲ್ಲ. ಅವರು ಕೊನೆಯವರೆಗೂ ಸ್ವತಂತ್ರ ಅಭ್ಯರ್ಥಿಯಾಗಿ ವಿರೋಧ ಪಕ್ಷದಲ್ಲಿದ್ದರು. ಅವರೊಬ್ಬ ಅತ್ಯುತ್ತಮ ಸಂಸದೀಯ ಪಟುಗಳಾಗಿದ್ದು ವಿಶೇಷವಾಗಿ ಶಿಕ್ಷಣ, ಹಣಕಾಸು, ಕೃಷಿ ಕೈಗಾರಿಕೆ ಮತ್ತು ಇತರ ಸಾರ್ವಜನಿಕ ಹಿತಾಸಕ್ತಿಯ ವಿಷಯಗಳ ಮೇಲಿನ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು.

ವಿಧಾನ ಪರಿಷತ್ತಿನ ಸದಸ್ಯರಾಗಿದ್ದಾಗ ಅವರ ಜೊತೆಗಿದ್ದ ಇತರ ಧುರೀಣರೆಂದರೆ ಶ್ರೀ ಹಾರ್ನಹಳ್ಳಿ ರಾಮಸ್ವಾಮಿ, ಶ್ರೀ ಕಡಿದಾಳು ಮಂಜಪ್ಪ, ಶ್ರೀ ಬಿ.ಡಿ. ಜತ್ತಿ, ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಶ್ರೀ ಅಣ್ಣಾರಾವ್ ಗಣಮುಖಿ, ಶ್ರೀ ಎಂ.ಪಿ. ಈಶ್ವರಪ್ಪ, ಶ್ರೀ ಪಿ.ಎಮ್. ನಾಡಗೌಡ, ಶ್ರೀ ಹೆಚ್.ಎಫ್. ಕಟ್ಟಿಮನಿ, ಶ್ರೀ ಕೇಶವರಾವ್ ನಿಟ್ಟೂರ್‌ಕರ್, ಶ್ರೀ ಎ.ಸಿ. ಪಾವಟೆ, ಶ್ರೀ ಅಜೀಜ್‌ಶೇಟ್, ಶ್ರೀ ಜಿ.ಕೆ. ಮೊಗಳಿ, ಶ್ರೀ ಟಿ.ಎಸ್. ಕೆಂಪಹೊನ್ನಯ್ಯ, ಡಾ: ಎಸ್.ಸಿ. ನಂದೀಮಠ, ಶ್ರೀಮತಿ ಗ್ರೇಸಿ ಠಕ್ಕರ್, ಶ್ರೀ ಜೆ.ಬಿ. ಮಲ್ಲರಾಧ್ಯ, ಶ್ರೀ ನಿಜಲಿಂಗಪ್ಪ, ಶ್ರೀ ಎಸ್.ಆರ್. ಕಂಠಿ, ಶ್ರೀ ಡಿ. ದೇವರಾಜ ಅರಸ್ ಮತ್ತು ಶ್ರೀಮತಿ ಎಂ.ಆರ್. ಜಯಲಕ್ಷಮ್ಮ ಮುಂತಾದವರು.

ಶಾಸ್ತ್ರೀಯವರು ಹಳೆಯ ಮೈಸೂರು ನ್ಯಾಯವಿದಾಯಕ ಸಭೆಗೆ ಆಯ್ಕೆಯಾದ ಸಮಯದಿಂದಲೂ ಸಾರ್ವಜನಿಕರ ಗಮನ ಸೆಳೆದಂತವರು.

ಅವರು ಮೈಸೂರಿನ ಮೊದಲ ಜವಾಬ್ದಾರಿಯುತ ಸರ್ಕಾರದ ವಿರುದ್ಧವೇ ಧ್ವನಿ ಎತ್ತಿದಂತವರು. ಕೆ.ಸಿ. ರೆಡ್ಡಿ ನೇತೃತ್ವದ ಸರ್ಕಾರ ಆಗ ಮೈಸೂರು ಹೈಕೋರ್ಟಿನ ನ್ಯಾಯಾಧೀಶರಾಗಿದ್ದ ಜಿ. ಪರಮಶಿವಯ್ಯನವರನ್ನು ಅಧಿಕಾರವಧಿ ಇದ್ದಾಗ್ಯೂ ಸ್ವಯಂ ನಿವೃತ್ತರಾಗಿ ಹೋಗುವಂತೆ ಸೂಚಿಸಿ ಅವರ ಸ್ಥಳದಲ್ಲಿ ಜಸ್ಟೀಸ್ ಪಿ. ಮೇದಪ್ಪನವರನ್ನು ನೇಮಿಸಿತ್ತು. ಶಾಸ್ತ್ರೀಯವರು ಸರ್ಕಾರದ ಈ ಕ್ರಮವನ್ನು ಸದನದಲ್ಲಿ ಪ್ರಶ್ನಿಸಲು ಅವಕಾಶ ಕೋರಿದರು. ಆದರೆ ಸಭಾಧ್ಯಕ್ಷರಾಗಿದ್ದ ಶ್ರೀ ಹೆಚ್.ಬಿ. ಗುಂಡಪ್ಪನವರು ನ್ಯಾಯಾಮೂರ್ತಿಗಳ ಕುರಿತಂತೆ ಸದನದಲ್ಲಿ ಚರ್ಚಿಸಬಾರದೆಂದು ಅವರ ಪ್ರಶ್ನೆಯನ್ನು ಚರ್ಚೆಗೆ ಇಡಲು ಒಪ್ಪಲಿಲ್ಲ.

ಶಾಸ್ತ್ರಿಗಳು ಶಾಸಕರಾದ ತಮ್ಮ ಹಕ್ಕನ್ನು ಚಲಾಯಿಸಲು ಸರ್ಕಾರ ಅವಕಾಶ ನೀಡುತ್ತಿಲ್ಲ ಎಂದು ಹಕ್ಕುಚ್ಯುತಿ ನೋಟಿಸ್ ಮಂಡಿಸಿದರು ಅದನ್ನು ಸಭಾಧ್ಯಕ್ಷರು ಪುರಸ್ಕರಿಸದಿದ್ದಾಗ ಶಾಸ್ತ್ರಿಗಳು ರೆಡ್ಡಿ ಸರ್ಕಾರದ ವಿರುದ್ಧವೇ ಅವಿಶ್ವಾಸ ಗೊತ್ತುವಳಿಯನ್ನು ಮಂಡಿಸಿದರು (ಸದನದ ಇತಿಹಾಸದಲ್ಲಿಯೆ ಮೊಟ್ಟ ಮೊದಲ ಬಾರಿಗೆ).

ನಂತರ ಅವರ ಪ್ರಶ್ನೆಯನ್ನು ಅಧ್ಯಕ್ಷರು ಚರ್ಚೆಗೆ ಇಟ್ಟಿದ್ದು ಕೆ.ಸಿ. ರೆಡ್ಡಿಯವರು ನ್ಯಾಯಮೂರ್ತಿಯಗಳ ಬದಲಾವಣೆ ಕುರಿತಂತೆ ಉತ್ತರಿಸಿದ್ದರು.

ಅದೇ ರೀತಿ, ಶಾಸ್ತ್ರಿಯವರು ಡೆಕ್ಕನ್ ಹೆರಾಲ್ಡ್ ಪತ್ರಿಕೆಯ ಸಂಪಾದಕರಾಗಿದ್ದ ಪೋತಾನ್ ಜೋಸೆಫ್ ಶಾಸಕರ ಕುರಿತಂತೆ ಪತ್ರಿಕೆಗಳಲ್ಲಿ ಕೆಟ್ಟದಾಗಿ ಪ್ರಕಟಿಸಿದ್ದನ್ನು ಪ್ರತಿಭಟಿಸಿ ಆ ಕುರಿತು ನಡೆದ ಚರ್ಚೆಯಲ್ಲೂ ಪ್ರಮುಖ ಪಾತ್ರವಹಿಸಿದ್ದರು. ಸಭಾ ಅಧ್ಯಕ್ಷರಾಗಿದ್ದ ಕೆ.ಟಿ. ಭಾಷ್ಯಂರವರು ಪೋತನ್ ಜೋಸೆಫರನ್ನು ಸದನದ ಬಾರ್‌ಕೌನ್ಸಿಲ್‌ಗೆ ಕರೆಸಿ ಎಚ್ಚರಿಸಿದ್ದರು (1953).

ಶಾಸ್ತ್ರಿಗಳು ವಿಶಾಲ ಕರ್ನಾಟಕ (ಮೈಸೂರು) ರಾಜ್ಯವನ್ನು ವಿರೋಧಿಸಿಯೂ ಸುದ್ದಿ ಮಾಡಿದಂತವರು. ಅವರು ಹಳೇ ಮೈಸೂರು ಪ್ರದೇಶಗಳನ್ನು ಒಳಗೊಂಡ ಮೈಸೂರು ರಾಜ್ಯಕ್ಕೆ ಒತ್ತಾಯಿಸಿದ್ದರು (ಬೆಂಬಲಿಸಿದ್ದರು). ಈ ಸಂಬಂಧ ಅವರು ರಾಜ್ಯ ಪುನರ್ವಿಂಗಡಣ ಸಮಿತಿಯ ಎದುರಿಗೂ ವಾದಿಸಿದ್ದರು (1955–56).

ಸಾರ್ವಜನಿಕ ಹಿತಾಸಕ್ತಿಯ ವಿಷಯಗಳ ಚರ್ಚೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದ ಶಾಸ್ತ್ರಿಯವರ ವಿಚಾರ–ಲಹರಿಗಳನ್ನು ಓದಿಯೇ ತಿಳಿಯಬೇಕು. ಅವರು ವಿವಿಧ ವಿಷಯಗಳನ್ನು ಅಥವಾ ಸಮಸ್ಯೆಗಳನ್ನು ವಿವಿಧ ಭಾಷೆಗಳಲ್ಲಿ (ಕನ್ನಡ–ಇಂಗ್ಲಿಷ್) ವಿವಿಧ ಕೋನಗಳಿಂದ ವಿಶ್ಲೇಷಿಸುತ್ತಿದ್ದ ರೀತಿಯನ್ನು ಎಲ್ಲರೂ ಅವಶ್ಯವಾಗಿ ತಿಳಿಯಬೇಕು.

ಸಾಲು ಡಿಸೋಜ ಎಂಬುವರು ಎಂ.ಪಿ.ಎಲ್. ಶಾಸ್ತ್ರಿಯವರು ಶಾಸಕರಾಗಿ ವಿಧಾನ ಪರಿಷತ್ತಿನಲ್ಲಿ ಚರ್ಚಿಸಿದ ಅಥವಾ ಮಾಡಿದ ಭಾಷಣಗಳ ಕುರಿತಂತೆ ಸಂಶೋಧನೆಯನ್ನು ಕೈಗೊಂಡಿದ್ದು ಗಮನಾರ್ಹ ಸಂಗತಿಯೆ ಆಗಿದೆ.

**ಸಾಂಸ್ಕೃತಿಕವಾಗಿ :**

ಶಾಸ್ತ್ರಿಗಳಿಗೆ ನಮ್ಮ ಭಾರತೀಯ ಸಂಸ್ಕೃತಿಯ ಕುರಿತು ಅತೀವ ಆಸಕ್ತಿ ಹಾಗೂ ಕಾಳಜಿ ಇತ್ತು. ಶಿಕ್ಷಣ ಹಾಗೂ ಸಂಸ್ಕೃತಿ ಪ್ರಸಾರವನ್ನು ಒಟ್ಟೊಟ್ಟಿಗೆ ಕೈಗೊಳ್ಳ ಬೇಕೆಂಬುದು ಅವರ ಅಭಿಮತವಾಗಿತ್ತು. ಅವರು ಈ ಕುರಿತು ಗಾಢ ಚಿಂತನೆಯನ್ನು ಮಾಡುತ್ತಿದ್ದರು.

ಈ ದಿಸೆಯಲ್ಲಿಯೇ ಅವರು ಬೆಂಗಳೂರು ಭಾರತೀಯ ವಿದ್ಯಾಭವನದ ಅಭಿವೃದ್ಧಿಗೆ ಶ್ರಮಿಸಿದ್ದು ಅದರ ಗೌರವ ಕಾರ್ಯದರ್ಶಿಯಾಗಿ ಸುಮಾರು 10 ವರ್ಷ ಕಾಲ ಕಾರ್ಯನಿರ್ವಹಿಸಿದ್ದರು (1963–72). ಅದೇ ರೀತಿ, ಬೆಂಗಳೂರಿನ ಇನ್ನೊಂದು ಪ್ರತಿಷ್ಠಿತ ಸಂಸ್ಥೆಯಾದ ಮಿಥಿಕ್ ಸೊಸೈಟಿಯ ಸಕ್ರಿಯ ಸದಸ್ಯರಾಗಿದ್ದ ಅವರು ಕೆಲ ವರ್ಷಗಳ ಕಾಲ ಉಪಾಧ್ಯಕ್ಷರು ಹಾಗೂ ಅಧ್ಯಕ್ಷರಾಗಿಯೂ ಶ್ರೇಷ್ಠ ಸೇವೆ ನೀಡಿದ್ದರು. (1964–69)

ಬೆಂಗಳೂರಿನಲ್ಲಿ ಭಾರತೀಯ ನಾಟ್ಯ ಸಂಘದ ಶಾಖೆಯನ್ನು ತೆರೆಯುವ ಮೂಲಕ ಕರ್ನಾಟಕ ರಂಗಭೂಮಿಗೆ ಅಪಾರ ಕೊಡುಗೆಯನ್ನು ಸಲ್ಲಿಸಿದ್ದ ಅವರು ಕನ್ನಡ, ಇಂಗ್ಲಿಷ್, ಸಂಸ್ಕೃತ ಮತ್ತು ತೆಲುಗು ಭಾಷೆಗಳನ್ನು ಚೆನ್ನಾಗಿ ತಿಳಿದಿದ್ದರು.

ಸಂಸ್ಕೃತ ಭಾಷೆ, ಸಾಹಿತ್ಯಗಳ ಪ್ರಸಾರಕರಾಗಿ, ಸಂಶೋಧಕರಾಗಿ ಶ್ರಮಿಸಿದ್ದ ಅವರು ಖ್ಯಾತ ಕನ್ನಡ ಮತ್ತು ಸಂಸ್ಕೃತ ಬರಹಗಾರರಾಗಿದ್ದರು. ಅವರ ಬರಹಗಳು ಅನೇಕ ವಿದ್ವತ್ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕ ಮಾಲೆಯಲ್ಲಿ 'ಸುಪ್ರಭಾತ ಸಂಗ್ರಹಗಳು' ಎಂಬ ಅವರ ಕೃತಿ ಪ್ರಕಟವಾಗಿದೆ. ಹಾಗೇ ಶೃಂಗೇರಿ ಮಠದ 'ತತ್ವಾಲೋಕ' ಎಂಬ ದಾರ್ಶನಿಕ ದ್ವೈ ಮಾಸಿಕ ಸಂಪಾದಕರಾಗಿಯೂ ಅವರು ಸೇವೆ ಸಲ್ಲಿಸಿದ್ದಾರೆ. ಹಾಗೇ ಅವರು ಸಂಪಾದಿಸಿದ ಶಾವಣ ನಂದಿನಿ, ಶಿವದಯ, ಸಹಸ್ರ ಮತ್ತು ಸಂಗೀತಾ–ಗಂಗಾಧರ ಪ್ರಮುಖ ಕೃತಿಗಳಾಗಿವೆ.

ಹಲವಾರು ಸಂಘ ಸಂಸ್ಥೆಗಳ ಸಾರಥ್ಯವನ್ನು ಸಮರ್ಥವಾಗಿ ನಿರ್ವಹಿಸಿದ್ದ ಶಾಸ್ತ್ರಿಯವರು ಶ್ರೇಷ್ಠ ಸಂಘಟನಕಾರರು, ಅವರು ಠಾಗೂರ್ ಶತಮಾನೋತ್ಸವ ಸಮಿತಿ, ಶಾಂತಿ ಸಮ್ಮೇಳನಗಳ ಅಧ್ಯಕ್ಷರಾಗಿ, ವಿವಿಧ ಧರ್ಮಗಳ ತುಲನಾತ್ಮಕ ಅಧ್ಯಯನದ ಅಖಿಲ ಭಾರತ ಮಟ್ಟದ ಅಧ್ಯಕ್ಷರಾಗಿ, ರಾಜ್ಯ ಪಂಡಿತ ಪರಿಷತ್ತಿನ ಅಧ್ಯಕ್ಷರಾಗಿ, ವಿಶ್ವವಿದ್ಯಾನಿಲಯದ ರಾಷ್ಟ್ರೀಯ ಭಾವೈಕ್ಯ ಸಮಿತಿಯ ಅಧ್ಯಕ್ಷರಾಗಿ, ಅಖಿಲ ಕರ್ನಾಟಕ ಖಾಸಗೀ ಕಾಲೇಜುಗಳ ಆಡಳಿತ ಮಂಡಳಿಗಳ ಸಂಘದ ಅಧ್ಯಕ್ಷರಾಗಿ,

ಸಂಸ್ಕೃತ ವಿಶ್ವಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿ, ನಾಟ್ಯ ಸಂಘದ ಉಪಾಧ್ಯಕ್ಷರಾಗಿ, ರಾಜ್ಯದ ಆಗಮತ್ರಯ ಮಹಾ ಮಂಡಲಿ, ಅಲಂಕಾರ ಶಾಸ್ತ್ರ, ಯೋಜನಾ ಮಂಡಲಿ ಹಾಗೂ ಮೈಸೂರಿನ ಪ್ರಾಚ್ಯ ವಿದ್ಯಾ ಸಂಸ್ಥೆಯ ಸದಸ್ಯರಾಗಿ, ರಾಷ್ಟ್ರೀಯ ವಿಭಾಗ ಸಂಕಿರಣದ ಪ್ರಧಾನ ಸಂಚಾಲಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದ ಕಾಲೇಜುಗಳ ಸಂಘದ ಕಾರ್ಯದರ್ಶಿಯಾಗಿ, ಹಾಗೂ ಅಧಿಕೃತ ಭಾಷಾ ಆಯೋಗದ ಸದಸ್ಯರಾಗಿ ತಮ್ಮ ಬಹುಮುಖ ಸೇವೆಯನ್ನು ಸಲ್ಲಿಸಿದ್ದಾರೆ.

## ಪ್ರಶಸ್ತಿ–ಪುರಸ್ಕಾರಗಳು

ಹಲವಾರು ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸಿದ್ದ ಶಾಸ್ತ್ರೀಯವರಿಗೆ ಹಲವು ಪ್ರಶಸ್ತಿಗಳು ಸಂದಿದ್ದವು.

ಅಖಿಲ ಭಾರತ ಪಂಡಿತ ಸಮ್ಮೇಳನವು ಅವರಿಗೆ "ವಿದ್ಯಾಭೂಷಣ" ಪ್ರಶಸ್ತಿ ನೀಡಿ ಗೌರವಿಸಿದ್ದು. ಅಯೋಧ್ಯೆಯ ಸಂಸ್ಕೃತ ಕಾರ್ಯಲಯವು "ಶಾಸ್ತ್ರರತ್ನ" ಪ್ರಶಸ್ತಿ ನೀಡಿ ಪುರಸ್ಕರಿಸಿತ್ತು (1964) ಶೃಂಗೇರಿಯ ಜಗದ್ಗುರುಗಳು 'ವಿದ್ಯಾಸಾಗರ' ಎಂಬ ಬಿರುದನ್ನು ನೀಡಿ ಗೌರವಿಸಿದ್ದರು. ಅವರು ವಿವಿಧ ಕ್ಷೇತ್ರಗಳಲ್ಲಿ ನೀಡಿದ ಶ್ರೇಷ್ಠ ಸೇವೆಯನ್ನು ಗಮನಿಸಿ ಶ್ರೀ ರಾಮಕೃಷ್ಣ ಹೆಗ್ಗಡೆಯವರ ಸರ್ಕಾರ ಶಾಸ್ತ್ರಿಯವರಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಿ ಪುರಸ್ಕರಿಸಿತ್ತು (1988).

ರಾಜಲಕ್ಷ್ಮೀಯವರನ್ನು ವಿವಾಹವಾಗಿದ್ದ (1931) ಶಾಸ್ತ್ರಿಯವರಿಗೆ ಮೂರು ಜನ ಹೆಣ್ಣು ಮಕ್ಕಳು ಮತ್ತು ಒಬ್ಬ ಪುತ್ರ ಇರುವರು.

ಹೀಗೆ ತುಂಬ ಸಾರ್ಥಕ ಜೀವನವನ್ನು ನಡೆಸಿದ್ದ ಶಾಸ್ತ್ರಿಯವರು ತಮ್ಮ 90ನೇ ವಯಸ್ಸಿನಲ್ಲಿ ನಿಧನರಾದರು (6.6.2001).

– * –

# ಭಾಗ–2

## ವಿಧಾನ ಪರಿಷತ್ ಸದಸ್ಯರಾಗಿ ಶಾಸ್ತ್ರಿಯವರು ವಿವಿಧ ವಿಷಯಗಳ ಮೇಲಿನ ಚರ್ಚೆಯಲ್ಲಿ ಭಾಗವಹಿಸಿ ಮಾಡಿದಂತಹ ಮುಖ್ಯ – ಭಾಷಣಗಳ ಕುರಿತು ಯಥಾವತ್ ಅವರದೇ ಭಾಷೆಯಲ್ಲಿ.

# I. ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರು ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸಿ ಮಾಡಿದಂತ ಭಾಷಣಗಳು

## I. 1958ರಲ್ಲಿ ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸಿದ ಸಂದರ್ಭದಲ್ಲಿ

0ಶ್ರೀ ಎಂ.ಪಿ.ಎಲ್. ಶಾಸ್ತ್ರಿ:– ನಾನು ಹಿಂದೆ ಈ ಸಭೆಯ ಮುಂದೆ ವಿಜ್ಞಾಪನೆ ಮಾಡಿಕೊಂಡ ಹಾಗೆ ಇನ್ನು ಕನ್ನಡಿಗರಲ್ಲಿರತಕ್ಕಂಥ ದೇಶಾಭಿಮಾನ ಹೋಗಿ ಕನ್ನಡ ರಾಜ್ಯಕ್ಕೆ ಒಂದು ವೇಳೆ ಸಂಚಕಾರ ಬರತಕ್ಕ ಪ್ರಕರಣ ಬಂದೀತು ಎಂಬುದಾಗಿ ಅವರೂ ಸಹ ಹೇಳಿದರು. ಈ ಸಂದರ್ಭದಲ್ಲಿ ನಾನು ಹೇಳುವುದೇನೆಂದರೆ ಕರ್ನಾಟಕದಲ್ಲಿರತಕ್ಕವರೆಲ್ಲರೂ ಕನ್ನಡಗರಾಗಿಯೇ ಇರಬೇಕೆಂದು ಹೇಳುವ ಅಭಿಪ್ರಾಯವನ್ನು ಒಂದು ಸಮನ್ವಯ ರೀತಿಯಲ್ಲಿ ನಮ್ಮ ಮೈಸೂರು ರಾಜ್ಯಕ್ಕೆ ಇಟ್ಟುಕೊಳ್ಳತಕ್ಕದ್ದು ಯೋಗ್ಯವಾದುದು ಎಂದು ನಾನು ತಮ್ಮಲ್ಲಿ ಬಿನ್ನೈಸಿಕೊಳ್ಳುತ್ತೇನೆ. ಇಲ್ಲಿಯವರೆಗೂ ನಮ್ಮ ಮೈಸೂರು ರಾಜ್ಯ ಒಂದು ಸೆಕ್ಯುಲರಿಸ್ಟೇಟ್ ಆಗಿಯೇ ಬೆಳೆದುಕೊಂಡು ಬಂದಿದೆ. ಈಗಾಗಲೇ ನಮ್ಮ ದೇಶ ಒಂದು ಮಾದರೀ ದೇಶವಾಗಿದೆ. ಹೀಗಿರುವಾಗ ಇನ್ನು ಮುಂದೆಯೂ ಈ ಅಭಿಪ್ರಾಯಗಳನ್ನು ಉಳಿಸಿಕೊಂಡು ಅದನ್ನೆಲ್ಲಾ ಬೆಳೆಸಿಕೊಂಡು ಬರುವುದು ನಮ್ಮೆಲ್ಲರ ಮತ್ತು ಸರ್ಕಾರದ ಆದ್ಯ ಕರ್ತವ್ಯ. ಶ್ರೀಮಾನ್ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಅಂತಹ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರಿಂದ ಈ ವಿಷಯವನ್ನು ಹೇಳುತ್ತಿದ್ದೇನೆ.

ಯಾರು ಯಾರು ನಮ್ಮ ಜೊತೆಯಲ್ಲಿ ಇರುವುದಕ್ಕೆ ಇಷ್ಟವೋ ನಮ್ಮ ಸುಖದುಃಖಗಳಲ್ಲಿ ಭಾಗಿಯಾಗುತ್ತಾರೋ ಅಂತಹವರು ಇರಲಿ, ಯಾರು ಯಾರು ಮನಸ್ಸು ಕೊಡುವುದಿಲ್ಲವೋ ಅಂತಹವರನ್ನು ಕಟ್ಟಿಕೊಂಡು ನಾವು ಮಾಡಬೇಕಾದುದೇನಿದೆ. ಮೈಸೂರು ರಾಜ್ಯದಲ್ಲಿ ಅವರು ಮೈಸೂರು ರಾಜ್ಯದ ಪ್ರಜೆ ಎಂದು ಹೆಮ್ಮೆ ಪಡತಕ್ಕದ್ದು, ಮೈಸೂರು ಪದದಲ್ಲಿ ಅಗೌರವವನ್ನು ತೋರಿಸತಕ್ಕವನಿಗೆ ಈ ರಾಜ್ಯದಲ್ಲಿ ಸ್ಥಾನವಿಲ್ಲ. ಅಂತಹವರನ್ನು ನಿರ್ಬಂಧವಾಗಿ ಬಲಾತ್ಕಾರವಾಗಿ ನಮ್ಮ ರಾಜ್ಯದಲ್ಲಿಟ್ಟುಕೊಳ್ಳತಕ್ಕ ಪ್ರಯತ್ನವನ್ನು ನಾವು ಹೆಚ್ಚು ಮಾಡಬೇಕಾದುದೇನಿದೆ. ಅಂತಹ ಜನರು ಹೊರಟು ಹೋದರೆ ಮೈಸೂರು ರಾಜ್ಯಕ್ಕೆ ಗೌರವ ಬರುತ್ತದೆ. ಇಲ್ಲದಿದ್ದರೆ ಮೈಸೂರು ರಾಜ್ಯದ ಕೀರ್ತಿಗಾಗಲೇ ಮತ್ತು ಉತ್ತಮವಾದ ಜೀವನದ ಕ್ರಮಕ್ಕಾಗಲೀ ಧಕ್ಕೆ ಬರುತ್ತದೆಂದು ನನ್ನ ಅಭಿಪ್ರಾಯವಾಗಿದೆ.

ಶ್ರೀಮಾನ್ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಮಹಾರಾಷ್ಟ್ರ ಜನಗಳನ್ನೂ ಸಹ ಇಲ್ಲಿ ಇಟ್ಟುಕೊಳ್ಳಬೇಕು ಎಂಬುದಾಗಿ ಸಹ ಆಗ್ರಹಪೂರ್ವಕವಾಗಿ ಹೇಳಿದರು. ನಮ್ಮ ಮೈಸೂರು ರಾಜ್ಯಕ್ಕೆ ಅಗೌರವವನ್ನು ಉಂಟು ಮಾಡುವ ಜನರು ಇಲ್ಲಿ ಇರಲು ಅರ್ಹರಲ್ಲ. ಇಡೀ ರಾಜ್ಯದಲ್ಲಿರುವ ಯಾವ ಮಹಾರಾಷ್ಟ್ರದವರಾಗಲೀ ಕೊಂಕಣಿಯವರಾಗಲಿ, ತಮಿಳರಾಗಲೀ, ತೆಲುಗರಾಗಲಿ ಎಲ್ಲರೂ ಭಾರತದ ಪ್ರಜೆ, ಕರ್ನಾಟಕದ ಪ್ರಜೆ ಎಂಬ ಗೌರವವನ್ನಿಟ್ಟುಕೊಂಡು ಮುಂದುವರಿಯಬೇಕು. ಆ

1. ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸಿದ ಸಂದರ್ಭದಲ್ಲಿ (27.2.1958 ರಂದು)

ಗೌರವ ಎಲ್ಲ ಜನಾಂಗದವರಿಗೂ ಸಲ್ಲತಕ್ಕದ್ದಾಗಿದೆ. ಹಾಗಿಲ್ಲದಿದ್ದ ಮೇಲೆ ಅಂತಹ ಸಣ್ಣ ಪುಟ್ಟ ರಾಜ್ಯಗಳನ್ನು ತೆಗೆದು ಹಾಕಲೇಬೇಕು. ಇದು ಅವರ ಮಾತಿಗೆ ಉತ್ತರವಾಗಿ ಹೇಳುವ ಮಾತು.

ಇನ್ನು ರಾಜ್ಯಪಾಲರ ಭಾಷಣಕ್ಕೆ ಉತ್ತರವಾಗಿ ಕೃತಜ್ಞತೆಯನ್ನು ಸಮರ್ಪಣೆ ಮಾಡುವ ಸೂಚನಾ ನಿರ್ಣಯದ ವಿಷಯದಲ್ಲಿ ಮಾತನಾಡುತ್ತೇನೆ.

ರಾಜ್ಯಪಾಲರ ಭಾಷಣ ಸುಮಾರು 15 ಪುಟಗಳಿಂದ ಕೂಡಿದ್ದರೂ ಮೂರು ನಾಲ್ಕು ವಿಷಯಗಳನ್ನು ಬಹಳ ಚೆನ್ನಾಗಿ ಪ್ರಸ್ತಾಪ ಮಾಡಿದ್ದಾರೆ. ಆ ವಿಷಯಗಳನ್ನು ಚೆನ್ನಾಗಿ ಪ್ರಸ್ತಾಪ ಮಾಡಿದ್ದಾರೆ. ಆ ವಿಷಯಗಳ ಮೇಲೆ ನಾನು ಒಂದೆರಡು ಸಲಹೆಗಳನ್ನು ಕೊಡಲಿಚ್ಛಿಸುತ್ತೇನೆ. ನಮ್ಮ ಮೈಸೂರು ರಾಜ್ಯದಲ್ಲಿ ಆಹಾರ ಧಾನ್ಯಗಳ ಉತ್ಪತ್ತಿ ಸಾಲದು. ಆಹಾರ ಧಾನ್ಯಗಳ ಉತ್ಪತ್ತಿಯನ್ನು ಹೆಚ್ಚು ಮಾಡಬೇಕಾದುದು ಅತ್ಯಗತ್ಯ. ಈ ಕಾರ್ಯವನ್ನು ಕೂಡಲೇ ಕೈಗೊಳ್ಳಬೇಕು. ಎರಡನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ವ್ಯವಸಾಯ ಮತ್ತು ಸಾಮೂಹಿಕ ಅಭಿವೃದ್ಧಿಗಾಗಿ ಸುಮಾರು 619.69 ಲಕ್ಷ ರೂಪಾಯಿಗಳನ್ನು ಮೀಸಲಾಗಿಡಬೇಕೆಂದು ಹೇಳಿದ್ದಾರೆ. ನಮ್ಮ ದ್ವಿತೀಯ ಪಾಂಚವಾರ್ಷಿಕ ಯೋಜನೆಯು ಯಾವ ಒಂದು ಹೆಚ್ಚಿನ ರೂಪದಲ್ಲಿ ನಡೆಯಬೇಕೆಂದು ಆಸೆಪಟ್ಟಿದ್ದರೋ ಆ ಆಸೆ ಈಗ ಕುಂಠಿತವಾಗಿದೆ. ದ್ವಿತೀಯ ಪಾಂಚವಾರ್ಷಿಕ ಯೋಜನೆಗೆ ಒದಗಿಸಿದ್ದ 35 ಕೋಟಿ ರೂಪಾಯಿಗಳ ವೆಚ್ಚವನ್ನು ಈಗ 25.7 ಕೋಟಿ ರೂಪಾಯಿಗಳಲ್ಲಿ 619.69 ಲಕ್ಷ ರೂಪಾಯಿಗಳನ್ನು ಅಂದರೆ ಸುಮಾರು ಕಾಲು ಭಾಗದಷ್ಟು ವ್ಯವಸಾಯ ಮತ್ತು ಸಾಮೂಹಿಕ ಅಭಿವೃದ್ಧಿ ಬಾಬ್ತಿಗೆ ಒದಗಿಸಿದ್ದಾರೆ. ಇದು ಅಖಿಲ ಭಾರತಕ್ಕೆ ಅನ್ವಯಿಸರತಕ್ಕದ್ದು ಎಂದೂ ಸಹ ಭಾಷಣದಲ್ಲಿ ಹೇಳಿದ್ದಾರೆ. ಪ್ಲಾನಿಂಗ್ ಕಮೀಷನ್ನಿನವರು ಈ ಯೋಜನೆಯನ್ನು ನಿರ್ಧಾರ ಮಾಡುವವರು, ಅವರು ದ್ವಿತೀಯ ಪಾಂಚವಾರ್ಷಿಕ ಯೋಜನೆಯಲ್ಲಿ ಸುಮಾರು ಶೇಕಡ 12ರಷ್ಟು ಭಾಗವನ್ನು ಯೋಜನೆಯು ಪೂರ್ಣ ವೆಚ್ಚದಲ್ಲಿ ವ್ಯವಸಾಯ ಮತ್ತು ಸಾಮಾಜಿಕ ಅಭಿವೃದ್ಧಿಗಾಗಿ ಕೊಡಬೇಕೆಂದು ತೀರ್ಮಾನ ಮಾಡಿದ್ದಾರೆ. ಈ ಬಾಬ್ತಿಗೆ ಅದೇ ರೀತಿ ಖರ್ಚು ಮಾಡಬೇಕೆಂದು ಸೂಚನೆ ಕೊಟ್ಟಿರುವುದೂ ಕೂಡ ರಾಜ್ಯಪಾಲರ ಭಾಷಣದಿಂದ ಚೆನ್ನಾಗಿ ವ್ಯಕ್ತವಾಗುತ್ತದೆ.

ನಾವು ಖರ್ಚು ಮಾಡತಕ್ಕ 25 ಕೋಟಿ ರೂಪಾಯಿಗಳಲ್ಲಿ ವ್ಯವಸಾಯ ಮತ್ತು ಸಾಮೂಹಿಕ ಅಭಿವೃದ್ಧಿಗಾಗಿ 619 ಲಕ್ಷ ರೂಪಾಯಿಗಳನ್ನು ಮೀಸಲಾಗಿಟ್ಟಿದ್ದೇವೆ. ಎಂದರೆ ಅದು ನಾಲ್ಕನೆಯ ಒಂದು ಭಾಗದಷ್ಟಾಗುತ್ತದೆ. ಈ ಹಣ ಅಗ್ರಿಕಲ್ಚರಲ್ ಕಮ್ಯುನಿಟಿಯ ಡೆವಲಪ್‌ಮೆಂಟಿಗೆ ವೆಚ್ಚ ಮಾಡುತ್ತಾ ಇರುವ ಹಣ. ಇದು ದುರ್ವ್ಯಯ ಆಗದೆ ಇರುವ ರೀತಿಯಲ್ಲಿ ನೋಡಿಕೊಳ್ಳಬೇಕು ಎನ್ನುವ ಎಚ್ಚರಿಕೆಯಲ್ಲಿನ ಮಾತನ್ನು ಈಗ ಹೇಳುತ್ತಿದ್ದೇನೆ. ಏತಕ್ಕೆ ಹೇಳುತ್ತೇನೆಂದರೆ ನಮ್ಮಲ್ಲಿ ಮೊಟ್ಟಮೊದಲು ಪಾಂಚವಾರ್ಷಿಕ ಯೋಜನೆಯ ಕೊನೆಯ ಕಾಲದಲ್ಲಿ ಆಹಾರಧಾನ್ಯಗಳು ಸಮೃದ್ಧಿಯಾಗಿವೆ ಎಂದು ಸರ್ಕಾರದವರು ಹೇಳಿದ್ದಾರೆ. ಸರ್ಕಾರದವರು ಮೊದಲನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ಏನೇನು ಸಾಧಿಸಿದ್ದಾರೆ ಎನ್ನುವ ಬಗ್ಗೆ 1955ನೇ ಇಸ್ವಿಯಲ್ಲಿ ಅಂಕಿಅಂಶಗಳನ್ನು ಕೊಟ್ಟಿದ್ದಾರೆ.

ಅತ್ತ ಕಡೆ ಇರುವ ಸದಸ್ಯರು ಮರೆತಿದ್ದಾರೆ. ಪಬ್ಲಿಕ್ ಮೆಮೋರಿ ಈಸ್ ಟೂ ಶಾರ್ಟ್ ಇವರ ವಿಷಯದಲ್ಲಿಯೇ ಅದು ಅನ್ವರ್ಥವಾಗಿದೆಯೇ ಎಂದು ಭಾಸವಾಗುತ್ತದೆ. ಈ ಮಾತನ್ನು ಕೇಳುತ್ತ ಮುಂದಿನ ವರ್ಷ 1956ನೇ ಇಸ್ವಿಯಲ್ಲಿ ನಡೆದಿರತಕ್ಕ ಕಾರ್ಯಕ್ರಮಗಳನ್ನು ಜನತೆಯ ಮುಂದೆ ಇಟ್ಟಿರತಕ್ಕ ಪಟ್ಟಿ ಎಂದರೆ "A brief report on the working of Agriculture Food productions. ಎನ್ನುವುದರಲ್ಲಿ ಹೀಗೆ ಹೇಳಿದ್ದಾರೆ. "The Food production Drive was started in the state on a planned basis from the year 1949-50, in confirmity with the plan sponsored by the Govt. of India for achieving self sufficiency in food within about 3 years time."

ಮೊದಲನೇ ಪಂಚವಾರ್ಷಿಕ ಯೋಜನೆಯಲ್ಲಿ ತಮಗೆ ಗೊತ್ತಿದ್ದ ಹಾಗೆ ಸಭಾಪತಿಗಳೇ, ವ್ಯವಸಾಯ ಮತ್ತು ಕಮ್ಯುನಿಟಿ ಡೆವಲಪ್‌ಮೆಂಟಿಗೆ ಪ್ರಧಾನ ಸ್ಥಾನ ಕೊಟ್ಟಿದ್ದರು. ವೆಚ್ಚ ಮಾಡಿರತಕ್ಕ ಕೋಟ್ಯಾಂತರ ರೂಪಾಯಿಗಳೆಲ್ಲಾ ಈ ಪ್ರಧಾನ ಕಾರ್ಯಕ್ಕಾಗಿ ಈ ಹಣವೆಲ್ಲಾ ವೆಚ್ಚವಾಗಿರತಕ್ಕಂಥಾದ್ದು ಭೂವ್ಯವಸ್ಥೆಯನ್ನು ಉತ್ತಮಗೊಳಿಸುವುದಕ್ಕೆ ಅದರಿಂದ ಉತ್ಪನ್ನ ಹೆಚ್ಚಿಸಿ ಕೊಳ್ಳುವುದಕ್ಕೆ ಆಹಾರಧಾನ್ಯಗಳ ಅಭಾವವನ್ನು ನೀಡುವುದಕ್ಕೆ, ಹೀಗೆ ಜನತೆಯಲ್ಲಿ ತೃಪ್ತಿಯನ್ನು ತಂದುಕೊಳ್ಳುವುದಕ್ಕೆ ಮಾಡಿರತಕ್ಕ ಕೆಲಸಕ್ಕೆ ಖರ್ಚು ಮಾಡಿದ್ದಾರೆಂದು ಹೇಳಿದ್ದಾರೆ. ಮೂರು ವರ್ಷಗಳೊಳಗೆ ಆಹಾರದ ಅಭಾವವನ್ನು ನೀಗಿಕೊಳ್ಳಬಹುದು ಎಂದು ಹೇಳಿದ್ದಾರೆ.

ಕೇವಲ ಅಖಿಲ ಭಾರತ ಸರ್ಕಾರದವರು 97000 ಟನ್ನಿನಷ್ಟು ಆಹಾರ ಧಾನ್ಯಗಳ ಉತ್ಪನ್ನ ಮಾಡಿ ನಿಮ್ಮನ್ನು ಸಂರಕ್ಷಣೆ ಮಾಡುತ್ತೇವೆಂದು ಮೈಸೂರು ಸರ್ಕಾರದವರಿಗೆ ಹೇಳಿದರು.

ನಮಗೆ ಬೇಕಾದುದು 2,41,000 ಟನ್‌ಗಳು, ಆದರೆ 1954ರ ವೇಳೆಗೆ 244000 ಟನ್ನುಗಳನ್ನು ಬೆಳೆದಿದ್ದಾರೆ. ಎಂದರೆ 3 ಸಾವಿರ ಟನ್‌ಗಳಷ್ಟು ಉಳಿಯಿತು.

ಅಲ್ಲಿ 3 ಸಾವಿರ ಟನ್ನುಗಳು, ಇಲ್ಲಿ 43000 ಟನ್‌ಗಳು ಬಂದರೆ ಒಟ್ಟು 46000 ಟನ್‌ಗಳಷ್ಟು ಆಹಾರಧಾನ್ಯವನ್ನು ಯಾರಾದರೂ ಬಡಬಗ್ಗರಿಗಾಗಲೀ ನೆರೆಹೊರೆ ಪ್ರಾಂತಗಳಿಗಾಗಲೀ ಮನಃ ಪೂರ್ವಕವಾಗಿ ಕೊಡಲು ನಮ್ಮಲ್ಲಿತ್ತು ಎಂದ ಹಾಗಾಯಿತು. ಇವೊತ್ತು ಜನರು ನರಳುತ್ತಿದ್ದಾರೆ. ರಾಜ್ಯಪಾಲರ ಭಾಷಣದಲ್ಲಿ ಬೊಂಬಾಯಿ ಕಡೆಯಿಂದ ಅಕ್ಕಿಯು ಬರುವ ಹಾಗಿಲ್ಲ. ದಕ್ಷಿಣ ಜೋನಲ್ ಕೌನ್ಸಿಲ್‌ನೊಡನೆ ತೆಗೆದುಕೊಳ್ಳುವುದಕ್ಕೆ ಸಾಧ್ಯವಿದ್ದರೆ ತೆಗೆದುಕೊಳ್ಳಬಹುದು ಎಂದು ಹೇಳಿದ್ದಾರೆ. ನಿಜವಾಗಿಯೂ ಪಾಂಚವಾರ್ಷಿಕ ಯೋಜನೆಗೆ ವೆಚ್ಚಮಾಡಿರತಕ್ಕಂಥ ಹಣ ವ್ಯಯವಾಗಿದ್ದ ಪಕ್ಷದಲ್ಲಿ ಸರ್ಕಾರ ಕೊಟ್ಟಿರತಕ್ಕ ಅಂಕಿಅಂಶಗಳು ಸತ್ಯಕ್ಕೆ ದೂರವಾಗಿಲ್ಲದೆ ಇರುವ ಅಂಶ.

ನಾನು ಬಯಸತಕ್ಕದ್ದು ಶಾಂತಿ. ಶಾಂತಿಯಿಂದ ಕೇಳಿದರೆ ವಿವರಗಳೆಲ್ಲ ತಿಳಿಯುತ್ತದೆ. ನಾನು ಹಳೇ ಮೈಸೂರಿನ ರಾಜ್ಯದಲ್ಲಿದ್ದ ಅಂಕಿಅಂಶಗಳನ್ನೂ ಪ್ರಸ್ತಾಪ ಮಾಡುತ್ತ ಈಗ ಹೊಸ ರಾಜ್ಯ ಬಂದ ಮೇಲೆ ಈಗಿನ ಪರಿಸ್ಥಿತಿ ಉತ್ತಮವಾಗಿದೆಯೇ ಇಲ್ಲವೇ ಎಂದು ಹೇಳುವುದಕ್ಕೆ ಮೊದಲೇ ಅವರು ಹೀಗೆ ಆಗ್ರಹ ಮಾಡಿದ್ದಾರೆ.

ನಮಗೆ ಈಗ ಬಂದಿರುವ ಪ್ರದೇಶಗಳಲ್ಲಿ ಕೊಡಗು ಮತ್ತು ಕೊಳ್ಳೇಗಾಲ ಇವು ಅಭಾವ ಪ್ರದೇಶಗಳೆಂದು ಭಾವಿಸಿರಲಿಲ್ಲ ಮತ್ತು ಅದು ಅಲ್ಲಿಂದ ಹೆಚ್ಚು ಉತ್ಪನ್ನವಾಗುತ್ತದೆ ಮತ್ತು ಸರ್‌ಪ್ಲಸ್ ಆಗುತ್ತದೆಯೇ ಎಂದು ಅದರ ಕಾರಣಗಳನ್ನು ಹೇಳುತ್ತಿದ್ದೇನೆ.

ಈಗ ನಮಗೆ ಸೇರಿರುವ ಕೊಡಗು ಮತ್ತು ಕೊಳ್ಳೇಗಾಲ ಇವುಗಳು ಅಭಾವ ಪ್ರದೇಶಗಳೇ ಎನ್ನುವುದನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಪಡೋಣವೆಂದು ಸಭೆಯ ಮುಂದೆ ಅದನ್ನು ನಿವೇದನೆ ಮಾಡಿಕೊಳ್ಳುತ್ತಿದ್ದೆ. ನಾನು ಪಕ್ಷ ಪ್ರತಿ ಪಕ್ಷಗಳ ತೊಂದರೆಗಳಿಗೆ ಸಿಕ್ಕಿದವನಲ್ಲ. ನನ್ನ ಮನಸ್ಸಿಗೆ ಯಾವ ನಿರ್ಧಾರವು ಸರಿಯಾಗಿದೆ ಅಥವಾ ಇಲ್ಲ ಎನ್ನುವುದನ್ನು ಮಾತ್ರ ಈ ಸಭೆಯಲ್ಲಿ ನಿವೇದನೆ ಮಾಡುತ್ತಿದ್ದೇನೆ. ಉದಾಹರಣೆಯಾಗಿ ಉತ್ತರ ಕರ್ನಾಟಕ ಎಂದರೆ ಬೊಂಬಾಯಿ ಕಡೆಗಳಿಂದ ಬಂದಿರತಕ್ಕ ಭಾಗಗಳಿಂದ ಅಭಾವ ಪರಿಸ್ಥಿತಿಯಿದೆ. ಅದರಿಂದ ಆಹಾರ ಧಾನ್ಯಗಳ ಕೊರತೆ ಇದೆ ಎಂದು ತಿಳಿದುಬಂದಿದೆ. ಆದರೆ ಹಿಂದೆ ಈ ಸಿರೀಲ್ಸ್ ಎನ್ನುವುದು ಈ ಭಾಗಗಳಿಂದಲೇ ಹೆಚ್ಚಾಗಿ ಬರುತ್ತಿತ್ತು. ಆದರೆ ಈಗ ಈ ಭಾಗಗಳು ಅಭಾವದ ಆಹಾರ ಪರಿಸ್ಥಿತಿಗೆ ಸಿಕ್ಕಿದೆ ಎಂದು ತಿಳಿದುಬಂದಿದೆ. ಹೈದರಾಬಾದು ಕರ್ನಾಟಕದಲ್ಲಿ ಗುಲ್ಬರ್ಗ ಜಿಲ್ಲೆಯು ಮೊದಲಿನಿಂದಲೂ ಅಭಾವದ ಪರಿಸ್ಥಿತಿಗೆ ಸಿಕ್ಕಿದೆ. ಈ ಪರಿಸ್ಥಿತಿಯಿಂದಾಗಿ ಎರಡನೇ ಪಾಂಚವಾರ್ಷಿಕ ಯೋಜನೆಯಲ್ಲಿ ಶೇಕಡ 12ರಷ್ಟು ವೆಚ್ಚ ಮಾಡುತ್ತಿರುವುದನ್ನು 25ರಷ್ಟು ಏರಿಸಬೇಕಾದ ಪ್ರಕೃತ ಪರಿಸ್ಥಿತಿ ಈಗ ಬಂದಿದೆ. ಹೀಗಾಗುವುದಕ್ಕೆ ಎಲ್ಲೋ ಏನೋ ಕೊಂಚ ತಪ್ಪು ಬಂದಿರುತ್ತದೆ ಮತ್ತು ಏನೋ ಒಂದು ರೀತಿಯ ದುರ್ವಾಸನೆ ಬಂದಿರುವುದನ್ನು ಸರ್ಕಾರದವರು ಪರ್ಯಾಲೋಚನೆ ಮಾಡಬೇಕಾಗಿತ್ತು. ಇಲ್ಲದೆ ಹೋದ ಪಕ್ಷದಲ್ಲಿ ಈ ಆಹಾರ ಧಾನ್ಯದ ಉತ್ಪನ್ನವು ನಮ್ಮ ದೇಶದಲ್ಲಿ ಹೆಚ್ಚಾಗಿ ಬೆಳೆಯುವುದಕ್ಕೆ ಬರಲು ಸಾಧ್ಯವಾಗುತ್ತಿತ್ತು. ಆದರೆ ಸಾಮಾನ್ಯ ಪ್ರಜೆಗೆ ಯಾವ ರೀತಿಯಾಗಿ ಈ ವಿಷಯಗಳು ನಡೆಯುತ್ತಿವೆ ಎನ್ನುವುದೇ ತಿಳಿಯುತ್ತಿಲ್ಲ. ಅದರಿಂದಾಗಿ ಅವನನ್ನು ಉತ್ತಮ ಸ್ಥಿತಿಗೆ ತರುವುದಕ್ಕೇ ಸಾಧ್ಯವಿಲ್ಲವೆಂಬ ಭಾವನೆ ಬೆಳೆಯುತ್ತಿದೆ.

ಉತ್ಪನ್ನ ಹೆಚ್ಚಿಸಬೇಕಾದರೆ ಭೂ ಸುಧಾರಣೆಯನ್ನು ತರಬೇಕೆಂದು ಅವರೇ ಎರಡನೇ ಪ್ಯಾರಾದಲ್ಲಿ ಹೇಳಿದ್ದಾರೆ. ಆದರೆ ಈ ಭೂಸುಧಾರಣೆ ಎನ್ನುವುದನ್ನು ನೋಡಿದರೆ ಹಿಂದೆ ನಡೆದುಕೊಂಡು ಬಂದಿರತಕ್ಕ ರೀತಿಗೂ ಈಗಿನ ರೀತಿಗೂ ಒಂದು ರೀತಿಯಾದ ಸಂಚಕಾರ ಬಂದಿದೆ ಎಂದು ತಿಳಿದು ಬರುತ್ತದೆ. ಉತ್ಪತ್ತಿ ಹೆಚ್ಚಾಗುತ್ತದೆ ಎಂದು ಹೇಳುತ್ತಿದ್ದಾರೆ. ಈಗ ಬಂದಿರುವ ಜತ್ತಿ ಸಮಿತಿಯ ವರದಿಯನ್ನು ವಿಚಾರ ಮಾಡುವಾಗ ಈ ವಿಷಯಗಳನ್ನೆಲ್ಲ ಕೂಲಂಕುಷವಾಗಿ ವಿಚಾರ ಮಾಡುತ್ತೇನೆ ಮತ್ತು ಅದರಿಂದ ಈಗ ಇನ್ನೂ ಆಹಾರದ ಅಭಾವ ವಿದೆಯೋ ಇಲ್ಲವೆ ಎನ್ನುವುದನ್ನು ಆಗ ಹೇಳುತ್ತೇನೆ. ಈಗಾಗಲೇ ಚಾರಿಟಬಲ್ ಇನಾಂಸ್ ಅಬಾಲಿಷನ್ ಮತ್ತು ಪರ್ಸನಲ್ ಇನಾಂಸ್ ಅಬಾಲಿಷನ್ ಕಾನೂನನ್ನು ಮಾಡಿ ಮಾನ್ಯ ಸದಸ್ಯರು ಅನೇಕರು ನೀಡಿದ ಅಭಿಪ್ರಾಯಗಳನ್ನೆಲ್ಲ ಕ್ರೋಡೀಕರಿಸಿ ಒಂದು ಕಾನೂನನ್ನು 1954ರಲ್ಲಿ ಮಾಡಲಾಯಿತು. ಈ ನಾಲ್ಕು ವರ್ಷಗಳಲ್ಲಿ ಈ ಭೂಸುಧಾರಣೆಯನ್ನು ಯಾವ ರೀತಿಯಾಗಿ ಸರ್ಕಾರ ನಿರ್ವಹಣೆ ಮಾಡಿದೆ ಎಂದು ನೋಡಿದರೆ

ಅದು ಮುಂದೆ ಬರತಕ್ಕ ಭೂ ಸುಧಾರಣೆಯ ಒಂದು ಅಕ್ರಮದ ರುಚಿಯನ್ನು ಈಗಾಗಲೇ ತೋರಿಸುತ್ತದೆ. ಪರ್ಸನಲ್ ಇನಾಂಸ್ ಅಬಾಲಿಷನ್ ಮಾಡಿ ಲಕ್ಷಾಂತರ ಎಕರೆಗಳನ್ನು ಹೊಂದಿದ್ದ ಭೂಮಿಯ ಮಾಲೀಕರಿಗೊಬ್ಬರಿಗಾದರೂ ರಿಲೀಫ್‌ನ್ನು ಕೊಡುವುದಕ್ಕೆ ಮೈಸೂರು ಸರ್ಕಾರ ಪ್ರಯತ್ನ ಮಾಡಿಲ್ಲ. ಈ ರೀತಿಯಾದ ಇನಾಂಸ್ ಅಬಾಲಿಷನ್ ಜಮೀನುಗಳ ಸ್ಥಿತಿಯಾಗಿರುವುದರಿಂದ ಯಾವ ಭೂಮಾಲೀಕರಿಗೂ ಯಾವ ವಿಧವಾದ ಪ್ರಯೋಜನವೂ ದೊರಕಲಿಲ್ಲ. ಈ ಕಾನೂನಾದ ಮೇಲೆ ಸಾಮಾನ್ಯ ಪ್ರಜೆಗೂ ಕೂಡ ಏನೂ ಉಪಯೋಗವಾಗಲಿಲ್ಲ. ಉದಾಹರಣೆಯಾಗಿ ಇದರ ಪರಿಸ್ಥಿತಿ ಹೇಗಿದೆ ಎಂದು ಹೇಳಬೇಕಾದರೆ ಮೈಸೂರಿನಿಂದ ನನ್ನ ಬಳಿಗೆ ಈಗ ಕೆಲವು ದಿನಗಳ ಹಿಂದೆ ಮೂರು ಜನ ಮಿತ್ರರು ಬಂದಿದ್ದರು. ಅವರುಗಳೆಲ್ಲರಿಗೂ 500 ರಿಂದ 600 ಎಕರೆಗಳವರೆಗೂ ಇನಾಂ ಜಮೀನುಗಳಿದ್ದವು. ಅವರಿಗೆ ಪರಿಹಾರವಾಗಿ ಸುಮಾರು ಹತ್ತು ಸಾವಿರ ರೂಪಾಯಿಗಳನ್ನು ಕೊಡಬೇಕೆಂದು ಇದ್ದರೂ ಕೂಡ ಈಗಾಗಲೇ ಮೂರು ವರ್ಷಗಳಾದರೂ ಅವರಿಗೇನೂ ಪರಿಹಾರ ದೊರಕಲಿಲ್ಲ. ಇದರಿಂದ ಅವರು ಮನೆ ಮಠಗಳನ್ನು ಮಾರಿ ಜೀವನವನ್ನು ಮಾಡಬೇಕಾಗಿದೆ ಮತ್ತು ಅವರು ಮನೆ ಮಠಗಳನ್ನು ಭೋಗ್ಯ ಮಾಡಿ ಸಾಲ ಸೋಲಗಳನ್ನು ಬೇರೆ ಮಾಡಿ ಕೊಂಡಿದ್ದಾರೆ. ಆ ಸಾಲಗಳನ್ನು ತೀರಿಸಲಾಗದ ಪರಿಸ್ಥಿತಿ ಬಂದಿರುವುದರಿಂದ ಅವರ ಮನೆ ಮಠಗಳು ಹರಾಜು ಆಗುವ ಸ್ಥಿತಿಗೆ ಬಂದಿದೆ. ಮೂರು ವರ್ಷಗಳಾದರೂ ಇಂತಹ ವ್ಯವಹಾರಗಳು ಇತ್ಯರ್ಥವಾಗಿಲ್ಲ. ಈ ರೀತಿಯಾಗಿರುವ ಇನಾಂ ಜಮೀನುಗಳನ್ನು ನೋಡಿಕೊಳ್ಳುವ ಸಲುವಾಗಿಯೇ ಮೂರು ವರ್ಷಗಳ ಕಾಲ ಡೆಪ್ಯುಟಿ ಕಮೀಷನರ್ ಫಾರ್ ಇನಾಂ ಅಬಾಲಿಷನ್ ಎಂದು ನೇಮಿಸಿದ್ದರು. ಆದರೆ ಅವರು ಕೆಲಸವನ್ನು ತಿಳಿದು ಈ ಕೆಲಸಗಳಿಗಾಗಿ ತಕ್ಕ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕೆ ಮೊದಲೇ ಅವರನ್ನು ಬೇರೆ ಜಾಗಕ್ಕೆ ವರ್ಗಮಾಡಿಬಿಡುತ್ತಾರೆ. ಈ ರೀತಿಯಾಗಿ ಮೈಸೂರು ಜಿಲ್ಲೆಯಲ್ಲಿ ಮೂರು ನಾಲ್ಕು ಡೆಪ್ಯುಟಿ ಕಮೀಷನರುಗಳನ್ನು ವರ್ಗ ಮಾಡಿದ್ದಾರೆ. ಇದರಿಂದಾಗಿ ಈ ವ್ಯವಹಾರಗಳಲ್ಲಿ ಜನಗಳಿಗೆ ಸುಖ ದೊರೆಯುತ್ತದೆಯೇ, ರೈತರಿಗೆ ಅನುಕೂಲವಾಗುತ್ತದೆಯೇ ಎಂದರೆ ಹೇಗೆ ಆಗುತ್ತದೆ? ಜಮೀನು ಮಾಡುವ ರೈತನಿಗೆ ಅವನು ಕೆಲಸ ಮಾಡಲು ಅನುಕೂಲವಾಗುವಂತೆ ಸರ್ಕಾರ ಕೆಲಸ ಮಾಡದಿದ್ದರೆ ಈ ಭೂಸುಧಾರಣೆಯಿಂದ ಅನೇಕ ರೀತಿಯಾದ ಅನಾಹುತವಾಗುತ್ತದೆ ಮತ್ತು ಇದರಿಂದ ಸಾಮಾನ್ಯ ಪ್ರಜೆಗೆ ತೊಂದರೆಗಳು ಬರುತ್ತವೆ ಎಂದು ನನ್ನ ಮನಸ್ಸಿಗೆ ಅನ್ನಿಸುತ್ತದೆ.

## 2. 1964ರಲ್ಲಿ ರಾಜ್ಯಪಾಲರ ಭಾಷಣಕ್ಕೆ ವಂದನೆ ಸೂಚಿಸಿ ಮಾತಾನಾಡುತ್ತಾ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ನಾಮನಿರ್ದೇಶನ ಹೊಂದಿದವರು), ಮಾನ್ಯ ಸಭಾಪತಿಯವರೇ, ರಾಜ್ಯಪಾಲರು ಮೈಸೂರು ವಿಧಾನ ಮಂಡಲದ ಸಂಯುಕ್ತಾಧಿವೇಶವನ್ನು ಉದ್ದೇಶಿಸಿ ಮಾಡಿರತಕ್ಕ ಭಾಷಣದಲ್ಲಿ 4–5 ಅಂಶಗಳನ್ನು ಕುರಿತು ಮಾತಾನಾಡ ಬೇಕೆಂದು ನಾನೀಗ ನಿಂತಿದ್ದೇನೆ.

ಮೊಟ್ಟ ಮೊದಲನೆಯ ಬಾರಿಗೆ ಮೈಸೂರಿನ ರಾಜ್ಯಪಾಲರು ಎರಡೂ ಸಭೆಯ ಸದಸ್ಯರುಗಳನ್ನುದ್ದೇಶಿಸಿ ಕನ್ನಡದಲ್ಲಿ ಭಾಷಣ ಮಾಡಿದ್ದು ಮೈಸೂರಿನ ಕನ್ನಡ ಜನತೆಗೆ ಇದು ಬಹಳ

2. ರಾಜ್ಯಪಾಲರ ಭಾಷಣಕ್ಕೆ ವಂದನೆ ಸೂಚಿಸಿ ಮಾತಾನಾಡುತ್ತಾ 3.3.1964 ರಂದು

ಸಂತೋಷವನ್ನುಂಟು ಮಾಡಿದೆ. ಕನ್ನಡ ಭಾಷೆಯು ಕೇವಲ 2 ಕೋಟಿ ಕನ್ನಡಿಗರ ಭಾಷೆಯೇ ಆಗಿರದೆ ಇದು ರಾಜ್ಯ ಭಾಷೆಯೂ ಕೂಡ ಆಗಿದೆ. ಮೈಸೂರಿನ ಆಡಳಿತದ ಅಧಿಕೃತ ಭಾಷೆಯೂ ಆಗಿದೆ. ಕಳೆದ ಎರಡು ಸಾವಿರ ವರ್ಷಗಳ ಕಾಲದಿಂದಲೂ ಕನ್ನಡ ಸಾಹಿತ್ಯವನ್ನು ಬೆಳೆಸಿಕೊಂಡು ಬಂದಿರತಕ್ಕ ಒಂದು ಭಾಷೆ ಇದು. ಅಂಥ ಜನತೆಗೆಲ್ಲಾ ಇಂದು ರಾಜ್ಯಪಾಲರು ಬಹಳ ಸಂತೋಷವನ್ನುಂಟು ಮಾಡಿದ್ದಾರೆ. ನಮ್ಮ ಸರ್ಕಾರ ಶೀಘ್ರದಲ್ಲೇ ಇದನ್ನು ಇನ್ನೂ ಹೆಚ್ಚಿನ ಬೆಳವಣಿಗೆ ಮಾಡಲು ಬೇಗ ಅಧಿಕೃತ ಭಾಷೆಯನ್ನಾಗಿ ಮಾಡಬೇಕಾಗಿದೆ ಎನ್ನತಕ್ಕ ಬಗ್ಗೆ ರಾಜ್ಯಪಾಲರು ಈ ಒಂದು ಸೂಚನೆಯನ್ನು ಕೊಟ್ಟ ಹಾಗಿದೆ. ಆದರೆ ಅನೇಕ ಜನರು ಮೈಸೂರು ಸರ್ಕಾರ ತನ್ನ ದೇಶದ ಆಡಳಿತವನ್ನು ಕನ್ನಡದಲ್ಲಿ ನಡೆಸತಕ್ಕ ಬಗ್ಗೆ ಎಷ್ಟು ಆಸಕ್ತಿಯನ್ನು ವಹಿಸಬೇಕೋ ಅಷ್ಟನ್ನು ವಹಿಸುತ್ತಿಲ್ಲವೆಂದು, ಅಷ್ಟು ಶ್ರದ್ಧೆಯಿಂದ ಇದಕ್ಕೆ ಗಮನ ಕೊಡುತ್ತಿಲ್ಲವೆಂದೂ ಅಪಾಧನೆಯನ್ನು ಮಾಡುತ್ತಿದ್ದಾರೆ. ಕನ್ನಡ ಭಾಷೆಯನ್ನು ತಕ್ಕ ರಾಜ್ಯದಲ್ಲಿ ರಾಜ್ಯಾಡಳಿತದ ಸೂತ್ರಗಳನ್ನು ಕನ್ನಡ ಭಾಷೆಯಲ್ಲೇ ನಡೆಸಬೇಕು, ಇದರ ಉಪಯೋಗ ಇಡೀ ಕನ್ನಡ ಜನತೆಗೆಲ್ಲಾ ಸಂಪೂರ್ಣವಾಗಿ ಮುಟ್ಟುವಂತಾಗಬೇಕು ಎಂಬುದನ್ನು ಇದು ಒತ್ತಿ ಸೂಚಿಸುತ್ತದೆ. ಇಂದು ರಾಜ್ಯಪಾಲರು ಕನ್ನಡದಲ್ಲಿ ಅಪ್ಪಣೆ ಕೊಡಿಸಿರತಕ್ಕ ಭಾಷಣವೇನಿದೆ ಅದು ಇಂಗ್ಲೀಷ್‌ನಿಂದ ಕನ್ನಡಕ್ಕೆ ಭಾಷಾಂತರ ಮಾಡಿದ್ದಾಗಿದೆ. ಆದರೆ ಇಂಗ್ಲೀಷ್ ಭಾಷೆ ನಮ್ಮ ಮಾತೃ ಭಾಷೆಯಲ್ಲ. ಆದರೆ ಅದೇ ನಮ್ಮ ಕನ್ನಡ ಭಾಷೆ ಅನ್ನುವುದಾಗಿದ್ದರೆ ಆಗ ಇದಿನ್ನೂ ಬಹಳ ರಿಪೇರಿಯಾಗಬೇಕೆಂದು ನಾನು ಹೇಳುತ್ತೇನೆ. ಇಂದು ಕನ್ನಡ ಭಾಷೆಯುಳ್ಳ ನಮ್ಮ ರಾಜ್ಯವೇನಿದೆ ಇದರಲ್ಲಿ ಈಗ ಐದು ಬೇರೆ ಬೇರೆ ಅಧಿಕಾರಕ್ಕೊಳಗಾಗಿದ್ದ ಕನ್ನಡ ಭಾಗಗಳು ಒಂದು ಗೂಡಿ ಒಂದು ವಿಶಾಲ ಕನ್ನಡ ರಾಜ್ಯವಾಗಿದೆ. ಈ ಹಿಂದೆ ಇದ್ದ ಕನ್ನಡ ಶಬ್ದಗಳು ಬಹಳ ಮಧುರವಾಗಿದ್ದು ವಿಶೇಷ ಅರ್ಥವನ್ನು ತೋರಿಸಿ ಕೊಡುತ್ತಿದ್ದವು. ಈ ಕನ್ನಡ ಶಬ್ದಗಳು ಅಷ್ಟು ಹೃದಯಂಗಮಯವಾಗಿದ್ದವು. ಇಲ್ಲಿಯೂ ವಾಕ್ಯಗಳು ಸಮನ್ವಯವಾಗಿ ಬಹಳ ಅಂದಮಯವಾಗಿ ಕಾಣುತ್ತವೆ. ಆದರೆ ಅರ್ಥವನ್ನು ಮಾತ್ರ ಕೊಡುತ್ತಿಲ್ಲ. ಈ ರೀತಿ ಕನ್ನಡ ಭಾಷೆಯನ್ನು ಬೆಳೆಸುವುದಾದರೆ ಇದೇನೂ ಅಷ್ಟು ಯೋಗ್ಯವಾದುದ್ದಲ್ಲ ಎಂದು ಹೇಳಬಯಸುತ್ತೇನೆ. ಹೀಗಾಗುವುದಾಗಿದ್ದರೆ ಈ ಐದು ಭಾಗಗಳೂ ಒಟ್ಟುಗೂಡದೆ ಇದ್ದಿದ್ದರೇನೇ ಚೆನ್ನಾಗಿತ್ತೇನೋ ಎಂದು ನನಗೆ ಅನಿಸುತ್ತದೆ. ಭಾಷೆಯಲ್ಲಿ ಮುಖ್ಯವಾಗಿರಬೇಕಾದ್ದು – ವೀರ್ಯ, "ಲಲಿತೆ ಹಾಗೂ ಮಾಧುರ್ಯ ಹೀಗಿದ್ದರೇ ನಮ್ಮ ಕನ್ನಡ ಭಾಷೆ ಜೀವಂತವಾಗಿದ್ದು ರಮಣೀಯವಾಗಿರುತ್ತದೆಂದು ನನಗನಿಸುತ್ತದೆ. ಇಂದು ಕನ್ನಡ ಭಾಷೆ ಹೀಗಾಗುತ್ತಿರುವುದನ್ನು ನೋಡಿ ಪರಭಾಷಾವ್ಯಮೋಹಿತರಾಗಿರತಕ್ಕ ಜನ ಇನ್ನು ಮುಂದಕ್ಕೋ ಆ ಇಂಗ್ಲಿಷ್ ಭಾಷೆಗೆ ಧಕ್ಕೆ ತಗಲುವುದಿಲ್ಲ ಎಂದು ಆ ಜನರು ಭಾವಿಸಿದ್ದಾರೆ. ಅಂಥ ಇಂಗ್ಲಿಷಿನ ವ್ಯಾಮೋಹವುಳ್ಳ ಜನರು ನಮ್ಮ ರಾಜ್ಯದಲ್ಲಿ ಅನೇಕರಿದ್ದಾರೆ. ಸ್ವತಂತ್ರ್ಯ ಪಕ್ಷಕ್ಕೇ ಸೇರಿರತಕ್ಕ ಜನಗಳೇನಿದ್ದಾರೆ ಅವರು ಇಂದಿನ ಕನ್ನಡದ ಸ್ವರೂಪವನ್ನು ನೋಡಿ ಈ ದೇಶದಲ್ಲಿ ಯಾವ ಕಾಲಕ್ಕೂ ಇಂಗ್ಲಿಷ್ ಶಾಶ್ವತವಾಗಿ ಉಳಿಯುತ್ತದೆಂದು ಲೆಕ್ಕ ಹಾಕಿದ್ದಾರೆ. ರಾಜಾಡಳಿತ ದೇಶದಲ್ಲಿರತಕ್ಕ ಎಲ್ಲ ಜನರನ್ನು ಮುಖ್ಯ ಬೇಕಾದರೆ ಜನರಾಡತಕ್ಕ ಭಾಷೆ ಚೆನ್ನಾಗಿ ಬೆಳೆದು ಅದು ಪರಿಶುದ್ಧವಾಗಬೇಕು. ಆದರೆ ಈಗಿರತಕ್ಕ ಭಾಷೆಯಲ್ಲಿ ವೀರ್ಯವಿಲ್ಲ. ಇದು ಪುಷ್ಟವಾಗಿ ಬೆಳೆದಿಲ್ಲ. ಪರಿಶುದ್ಧವಾಗಿಲ್ಲ. ಹೀಗೆ ಕೇವಲ

ಒಬ್ಬ ರಾಜ್ಯಪಾಲರಾಗಲೀ, ಒಬ್ಬ ಮಂತ್ರಿಗಳಾಗಲೀ ಕನ್ನಡದಲ್ಲಿ ಭಾಷಣ ಮಾಡಿದ ಮಾತ್ರಕ್ಕೆ ಕನ್ನಡ ಭಾಷೆ ಬೆಳೆಯುತ್ತದೆ ಎಂದು ಯಾರೂ ಭಾವಿಸಬಾರದು. ಇದಕ್ಕೆ ಮುಖ್ಯವಾಗಿ ಕನ್ನಡ ನಿಘಂಟಿನ ಕೆಲಸ ಬೇಗ ಆಗಬೇಕು. ಜನರಿಗೆ ಅರಿವಾಗಬೇಕು. ಆದರೆ ಈ ಕಾರ್ಯ ತ್ವರಿತವಾಗಿ ಆಗುತ್ತಿಲ್ಲ. ಗಜಗರ್ಭ 18 ವರ್ಷಕ್ಕೊಮ್ಮೆ ತಾಳಿದರೆ ಈ ನಿಘಂಟಿನ ಗರ್ಭವೇ ಇನ್ನು ತಾಳಿಲ್ಲ. ಆದಾಗ್ಯೂ ಈ ವಿಶ್ವಕೋಶದ ಕಾರ್ಯ ಬಹಳ ತ್ವರಿತವಾಗಿ ಆಗುತ್ತಿದೆಯೆಂದು ಹೇಳುತ್ತಿದ್ದಾರೆ. ಜೊತೆಗೆ ಈ ವಿಶ್ವಕೋಶದ ಕಾರ್ಯ ಎಷ್ಟು ಸವಿಸ್ತಾರವಾಗಿ ನಡೆಯಬೇಕೊ ಅಷ್ಟು ಸವಿಸ್ತಾರವಾಗಿ ನಡೆದಿಲ್ಲ. ವಿಧವಿಧವಾದ ಟಾಪಿಕ್‌ಗಳ ಮೇಲೆ ವಿಸ್ತಾರವಾದ ಬರವಣಿಗೆಯನ್ನು ಮಾಡಿಲ್ಲ. ಒಂದು ವೇಳೆ ಅಂಥ ಸವಿಸ್ತಾರವಾದ ಸಾಹಿತ್ಯವನ್ನು ಬರೆದು ಕಳುಹಿಸಿರತಕ್ಕ ವಿದ್ವಾಂಸರಿಗೆ ಯಾವ ಒಂದು ಸಂಭಾವನೆ ದೊರೆಯಬೇಕೋ ಅದು ಅವರಿಗೆ ದೊರೆತಿಲ್ಲ. ಇಂಥ ಒಂದು ಟಾಪಿಕಿನ ಬಗ್ಗೆ ಸಾಹಿತ್ಯ ಬರೆದು ಕಳುಹಿಸತಕ್ಕ ಶ್ರೀಮಾನ್ ಮೆ.ಬಿ. ಮಲ್ಲಾರಾಧ್ಯರಂಥವರಿಗೇ ಇನ್ನು ಯಾವ ಸಂಭಾವನೆ ಎಂದು ಹೇಳದಿದ್ದರೂ, ಅವರಿಗೆ ಕೊಡತಕ್ಕ ಕಾಣಿಕೆಯೇನಿದೆ ಅದಿನ್ನು ಅವರಿಗೆ ಸಿಕ್ಕಿಲ್ಲ. ಹೀಗೆ ಇನ್ನು ಎಷ್ಟೋ ಜನ ವಿದ್ವಾಂಸರಿಗೂ, ಶಾಸ್ತ್ರಿಗಳಿಗೂ ಅವರ ಸಂಭಾವನೆಗಳು ಪಾವತಿಯಾಗಿಲ್ಲ.

ಶ್ರೀ ಚೆ.ಬಿ. ಮಲ್ಲಾರಾಧ್ಯ – ನನಗೆ ಸಂಭಾವನೆ ಬಾರದಿರುವುದಿರಲಿ ನಾನು ಆ ಸಮಿತಿಗೆ ಒಬ್ಬ ಸದಸ್ಯ. ನಾನು ಆ ಕಮಿಟಿಗೆ ಹಾಜರಾದ್ದಕ್ಕೆ ಕೂಡ ನನಗೆ ಇಲ್ಲಿಯವರೆಗೂ ಒಂದು ಕಾಸು ಅಲೋಯನ್ಸನ್ನೂ ಸಹಾ ಕೊಟ್ಟಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ – ಅಲ್ಲಿರತಕ್ಕ ಸಂಸ್ಕೃತದ ಒಂದು ಉಪಸಮಿತಿಗೆ ಆ ಶಬ್ದಗಳನ್ನು ಬರೆದು ಅವುಗಳ ಅರ್ಥವನ್ನು ಬರೆಯತಕ್ಕಂಥ ನಾಲ್ಕು ಜನ ಲೇಖಕರು ಸಹ ದೊರೆತಿಲ್ಲ. ನಾನು ವ್ಯಕ್ತಿಶಃ ಹೇಳಬಾರದೆಂದು ತೀರ್ಮಾನ ಮಾಡಿದ್ದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಯಾವ ಧೈರ್ಯ ಸ್ಥೈರ್ಯಗಳಿಂದ, ಆಸಕ್ತಿಯಿಂದ ಈ ಕೆಲಸವನ್ನು ನಿರ್ವಹಣೆಗೆ ಮಾಡಬೇಕಿತ್ತೋ ಆ ರೀತಿಯಲ್ಲಿ ಕೆಲಸವನ್ನು ನಿರ್ವಹಣೆ ಮಾಡುತ್ತಿಲ್ಲ. ಇವತ್ತು ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯೆಂಬುದನ್ನು ತೆಗೆದು ಹಾಕಿದ್ದಾರೆ. ಆದರೆ ಆ ಇಲಾಖೆ ಅಧಿಕಾರಿಗಳು ಮಾತ್ರ ಹೋಗಿಲ್ಲ. ಈ ಇಲಾಖೆಯನ್ನು Department of Public Instruction ಶಿಕ್ಷಣ ಶಾಖೆಗೆ ಸೇರಿಸಿದ್ದಾರೆ. ಅದನ್ನು ನಿಜವಾಗಿ ತೆಗೆದು ಹಾಕಬಾರದೆಂಬುದೇ ನನ್ನ ಅಭಿಪ್ರಾಯ. ವಿಶ್ವಕೋಶದ ವಿಷಯ. ಕನ್ನಡ ನಿಘಂಟಿನ ಕೆಲಸ ಕನ್ನಡದಲ್ಲಿ ಶಾಸ್ತ್ರೀಯವಾದ ಗ್ರಂಥಗಳನ್ನು ಸೃಷ್ಟಿ ಮಾಡುವ ವಿಷಯ, ಶಬ್ದ ಸಂಗ್ರಹಗಳನ್ನು ಕ್ರೋಡೀಕರಿಸಿ ಶಬ್ದ ಕೋಶದ ರಚನೆ, ಆಡಳಿತ ದೃಷ್ಟಿಯಿಂದ ನಿರ್ಮಾಣ ಮಾಡುವ ಕೆಲಸ ಮತ್ತು ಸಮಾಜ ಶಾಸ್ತ್ರ ಬಲ್ಲವರು ಮಾಡುವ ಕೆಲಸ ಇವೆಲ್ಲವನ್ನು ರಾಜ್ಯ ಸರ್ಕಾರ ಮಾಡಬೇಕಾಗಿದೆ. ಸಾಧಾರಣವಾದ ಭಾಷೆಯನ್ನು ಉಪಯೋಗಿಸಿ ಗ್ರಂಥ ರಚನೆ ಮಾಡುವುದಕ್ಕೆ ಸಹಾಯಕವಾದ ನಿಘಂಟು ಮತ್ತು ವಿಶ್ವಕೋಶದ ಕೆಲಸವನ್ನು ಒಂದು ಆಧಾರದ ಮೇಲೂ ತಡ ಮಾಡಬಾರದೆಂಬ ಮಾತನ್ನು ಈ ಸಮಯದಲ್ಲಿ ನಾನು ಪ್ರಸ್ತಾಪ ಮಾಡುತ್ತಿದ್ದೇನೆ. ಈ ಒಂದು ವಿಷಯವನ್ನು ಮನನೊಂದು ಸಂಕಟಪಟ್ಟು ಮಾತಾನಾಡ ಬೇಕಾಗಿದೆ. ರಾಜ್ಯಭಾರ ನಡೆಸುವ ಜನ ರಾಜ್ಯಪಾಲರ ಭಾಷಣವನ್ನು ತಿಳಿಗನ್ನಡದಲ್ಲಿ ಎಲ್ಲರಿಗೂ ಸಾಮಾನ್ಯ ಜನಗಳಿಗೂ ಅರ್ಥವಾಗುವಂತಹ

ಕನ್ನಡ ಭಾಷೆಯ ಸುಲಭ ಶೈಲಿಯಲ್ಲಿರುವಂತೆ ವ್ಯವಸ್ಥೆ ಮಾಡಬೇಕಾಗಿತ್ತು. ಒಂದು ಕಡೆ ನಿರ್ಯಾತ, ಅಪ್ರಾಟವೆಂಬ ಸಂಸ್ಕೃತ ಪದಗಳನ್ನು ರಾಜ್ಯಪಾಲರ ಭಾಷಣದಲ್ಲಿ ಉಪಯೋಗಿಸಿದ್ದಾರೆ. ಯಾವ ಅಪೌಟವೋ ಯಾವ ಪ್ರಪಾಟವೋ ಗೊತ್ತಾಗಲಿಲ್ಲ. ರಸ್ತೆಗಳ ವಿಚಾರವಾಗಿ ಮಾತಾನಾಡುತ್ತಾ ಏಕ ಪರಿಮಾಣಾತ್ಮಕ ಅಳತೆಯ ಜಲಮಾರ್ಗವೆಂದು ಒಂದು ಕಡೆ ಹೇಳಿದ್ದಾರೆ. ಯಾವ ಪರಿಮಾಣವೋ, ಯಾವ ಪರಿಣಾಮವೋ ತಿಳಿಯಲಿಲ್ಲ. ಇನ್ನು 22ನೇ ಪುಟದಲ್ಲಿ ಶೀತಲವಾಗಿಟ್ಟು ಕೆಲವು ಉತ್ಪನ್ನಗಳನ್ನು ಎಂಬುದಾಗಿ ಉಪಯೋಗಿಸಿದ್ದಾರೆ. ಯಾವುದು ಶೀತಲವಾದ ಉತ್ಪನ್ನವೋ ತಿಳಿಯಲಿಲ್ಲ. ಇನ್ನೊಂದು ಕಡೆ "ನೆಲಗಡಲೆಯ ಸಾಗುವಳಿಗಾಗಿ ತತ್ಸಮಾನವಾದ ಒಂದು ಕಾರ್ಯಕ್ರಮವನ್ನು" ಎಂದು ಹೇಳಿದ್ದಾರೆ. ಇಂತಹ ವಾಕ್ಯಗಳು ಅನೇಕವಿದೆ. ಇಂತಹ ಭಾಷೆ ಬಹಳ ಶೀಘ್ರವಾಗಿ ಬದಲಾವಣೆಯಾಗಬೇಕೆಂದು ನಾನು ಸೂಚನೆ ಮಾಡುತ್ತೇನೆ.

ಎರಡನೆಯದಾಗಿ ರಾಜ್ಯಪಾಲರು ಸುಮಾರು 35 ಪುಟಗಳುಳ್ಳ ಕನ್ನಡ ಭಾಷಣವನ್ನು 55 ನಿಮಿಷಗಳಲ್ಲಿ ಓದಿ ಅದರಲ್ಲಿ ರಾಜ್ಯ ಸರ್ಕಾರ ಹಿಂದಿನ ಸಾಲಿನಲ್ಲಿ ನಡೆಸಿರುವ ಕಾರ್ಯಕ್ರಮವನ್ನು ಮತ್ತು ಮುಂದೆ ನಡೆಯಬೇಕಾದ ಕಾರ್ಯಕ್ರಮಗಳನ್ನು ಬಹಳ ಚೆನ್ನಾಗಿ ಅಮೂಲಾಗ್ರವಾಗಿ ಪರಿಶೀಲನೆ ಮಾಡಿದ್ದಾರೆಂಬುದಾಗಿ ನಾನು ಸೂಚನೆ ಮಾಡುತ್ತೇನೆ. ಮೊಟ್ಟ ಮೊದಲನೆಯದಾಗಿ ಯೋಗ್ಯವಾದ ರೀತಿಯಲ್ಲಿ ನಮ್ಮ ದೇಶದ ಪರಿಸ್ಥಿತಿಯನ್ನು ಭರತಖಂಡದ ಇನ್ನೊಂದು ರಾಷ್ಟ್ರದ ಪರಿಸ್ಥಿತಿಯನ್ನು ಬಹಳ ಸೂಕ್ಷ್ಮ ದೃಷ್ಟಿಯಿಂದ ಮತ್ತು ವಿಹಂಗಮ ದೃಷ್ಟಿಯಿಂದ ಹೇಳಿದ್ದಾರೆ. ನಮ್ಮ ದೇಶದಲ್ಲಿ ಉತ್ಕಟವಾದ ಪರಿಸ್ಥಿತಿ ಇದೆ ಎಂದೂ ಹೇಳಿದ್ದಾರೆ. ರಾಷ್ಟ್ರದ ಮೇಲೆ ದುರಾಕ್ರಮಣ ಒದಗಬಹುದಾದ ಪರಿಸ್ಥಿತಿ ಇನ್ನು ನೆಲಸಬಹುದಾಗಿದೆಯೆಂದೂ ಹೇಳಿದ್ದಾರೆ. ಇದು ಸತ್ಯವಾದ ಮಾತು. ಚೀಣಿಯರು ಭರತ ಖಂಡದ ಮೇಲೆ ದುರಾಕ್ರಮಣ ಮಾಡಿ ಭಾರತದ ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡರು. ಇತ್ತೀಚಿನ ಪರಿಸ್ಥಿತಿ ಕಾಣುತ್ತಿದೆ. ಈ ಪರಿಸ್ಥಿತಿಯಲ್ಲಿ ನಮ್ಮ ಹತ್ತಿರವೇ ಇರುವ ಮತ್ತು ಸುತ್ತಮುತ್ತಲಿರುವ ಕೆಲವರು ಕೆಲವು ವರ್ಷಗಳ ಹಿಂದೆ ಮನೆಯವರಾಗಿದ್ದ ಜನ ಇವತ್ತು ಶತೃಗಳಾಗಿದ್ದರೆಂಬ ಪರಿಸ್ಥಿತಿಯಲ್ಲಿ ಜನತೆ ಬಹಳ ಎಚ್ಚರವಾಗಿರುವುದು ಅತ್ಯಾವಶ್ಯಕ ಅದಕ್ಕಾಗಿ ಎಲ್ಲರೂ ತ್ಯಾಗ ಮಾಡುವುದು ಅತ್ಯವಶ್ಯ. ಕಾಲೇಜುಗಳಲ್ಲಿ ಮತ್ತು ಇತರ ಶಾಲೆಗಳಲ್ಲಿ ಎನ್.ಸಿ.ಸಿ. ಶಿಕ್ಷಣವನ್ನು ಕಡ್ಡಾಯವಾಗಿ ಮಾಡಿರುವುದು ಒಂದು ಸ್ತುತ್ಯವಾದ ಸಂಗತಿಯೆಂದು ನಾನು ಭಾವಿಸಿಕೊಂಡಿದ್ದೇನೆ. ತರುಣರಿಗೆ ಇಂತಹ ತರಪೇತನ್ನು ಕೊಟ್ಟರೆ ನಿಜವಾಗಿ ಅವರು ಎಂತಹ ಪರಿಸ್ಥಿತಿಯಲ್ಲಾದರೂ ಭರತ ಖಂಡದ ಸ್ವಾತಂತ್ರ್ಯವನ್ನು ಉಳಿಸುವುದಕ್ಕೆ ಬಹಳ ಯೋಗ್ಯರಾಗಿ ಇರುತ್ತಾರೆ.

ಇದಕ್ಕಾಗಿ ಮೈಸೂರು ರಾಜ್ಯ ಸರ್ಕಾರ ಎಷ್ಟೇ ವೆಚ್ಚ ಮಾಡಿದರೂ ಅದನ್ನು ವೆಚ್ಚವೆಂದು ಭಾವಿಸಬಾರದು. ಅದು ಸ್ವಾತಂತ್ರ್ಯವನ್ನು ಉಳಿಸುವ ಒಂದು ಸಂವಿಧಾನ, ಕಾರ್ಯಭಾರವೆಂದು ನಾನು ಭಾವನೆ ಮಾಡಿಕೊಂಡಿದ್ದೇನೆ. ಇನ್ನು 3–4 ವಿಚಾರಗಳಲ್ಲಿ ಮಾತ್ರ ಮಾತನಾಡಬೇಕೆಂದು ಭಾವಿಸಿಕೊಂಡಿದ್ದೇನೆ. ಸರ್ಕಾರ ಇವತ್ತು ಕೈಗೊಂಡಿರುವ ಪಂಚವಾರ್ಷಿಕ ಯೋಜನೆಗಳು ಫಲಪ್ರದವಾಗಿ ಆಗಬೇಕಾದರೆ ಅದರಲ್ಲಿ ಮುಖ್ಯವಾಗಿರತಕ್ಕ ಎರಡು ಅಂಶಗಳನ್ನು ಸಂಪೂರ್ಣವಾಗಿ

ಮತ್ತು ಉತ್ತಮವಾಗಿ ನಡೆಸಿಕೊಂಡು ಹೋಗಬೇಕು. ಮೊದಲನೆಯದಾಗಿ ಮೂರನೆಯ ಪಾಂಚಾವಾರ್ಷಿಕ ಯೋಜನೆಗೆ ಅನ್ವಯಿಸುವ ಮಾತನ್ನು ಹೇಳುವುದಾದರೆ ಎಲ್ಲಕ್ಕಿಂತಲೂ ಹೆಚ್ಚಿಗೆ ವ್ಯವಸಾಯಕ್ಕೆ ಮತ್ತು ವಿದ್ಯುಚ್ಛಕ್ತಿಗೆ ವಿಶೇಷವಾದ ಪ್ರಾಧ್ಯಾನ್ಯತೆಯನ್ನು ಈಗಿನ 3ನೇ ಪಾಂಚವಾರ್ಷಿಕ ಯೋಜನೆಯಲ್ಲಿ ಕೊಟ್ಟಿದ್ದಾರೆ. ಈ ರೀತಿಯಲ್ಲಿ ವಿದ್ಯುಚ್ಛಕ್ತಿ ಸೃಷ್ಟಿಯಾಗದೆ ಹೋದ ಪಕ್ಷದಲ್ಲಿ ಮೈಸೂರು ರಾಜ್ಯದಲ್ಲಿ ಯಾವ ರೀತಿಯಾದಂಥ ಕೈಗಾರಿಕೆಗಳ ಬೆಳವಣಿಗೆಯೂ ಆಗುವುದಿಲ್ಲವೆನ್ನುವುದನ್ನು ಸ್ಪಷ್ಟವಾಗಿ ತಿಳಿಯಬೇಕು. ಯಾವ ರಾಜ್ಯದಲ್ಲಿ ಕೈಗಾರಿಕೆ ಇತರ ರಾಜ್ಯಗಳಿಗಿಂತ ಮೊದಲೇ ಬೆಳೆಯುತ್ತಿರುವುದು ಕಂಡು ಬಂತೋ, ಅದು ಈಗ ಸ್ವಲ್ಪ ಹಿಂದಕ್ಕೆ ಹೋದಂತೆ ಅನ್ನಿಸಿದೆ. ಈ ಬಗ್ಗೆ ಈ ಸರ್ಕಾರದ ಮಂತ್ರಿಗಳು ಯಾವ ಅಂಕಿ ಅಂಶವನ್ನೂ ಹೇಳಲಿಲ್ಲ. ಸಾಮಾನ್ಯವಾಗಿ ಹಿಂದಿನಿಂದಲೂ ನಮ್ಮ ಈ ಮೈಸೂರು ರಾಜ್ಯ ಕೈಗಾರಿಕೆಗಳಲ್ಲಿ ಮೊದಲನೆಯ ಸ್ಥಾನವನ್ನು ಪಡೆದಿರತಕ್ಕ ದೇಶವಾಗಿದೆ. ಇವತ್ತು ನಮ್ಮ ರಾಜ್ಯದ ಕೈಗಾರಿಕೆಗಳ ಪ್ರಗತಿಯನ್ನು ಆಲೋಚನೆ ಮಾಡುವ ಜನ, ಅವರಲ್ಲೂ ನನ್ನಂತಹವರು, ಶ್ರೀಮಾನ್ ಮಲ್ಲಾರಾಧ್ಯರವರು, ತುಲನೆ ಮಾಡಿ ಮತ್ತು ಪರಿಶೀಲನೆ ಮಾಡಿ ನೋಡಿದ ಪಕ್ಷದಲ್ಲಿ ಮೈಸೂರು ರಾಜ್ಯದಲ್ಲಿ ಇರತಕ್ಕ ಪ್ರಕೃತಿದತ್ತವಾದ ಸಂಪತ್ತು, ಇಲ್ಲಿರುವ ಜನರ ಮೇಧಾವಿಶಕ್ತಿ, ಇತರ ಸಂಪತ್ತು, ಕೈಗಾರಿಕೆಗಳನ್ನು ಬೆಳೆಸಿಕೊಂಡು ಹೋಗುವುದಕ್ಕೆ ಇರತಕ್ಕ ಅಧಿಕಾರ ವರ್ಗದವರ ಸಂಪತ್ತು ಮುಖ್ಯಕಾರಣವೆಂದು ಹೇಳಬಹುದು. ಆದರೆ ವ್ಯವಸಾಯದೃಷ್ಟಿಯಿಂದ ಎಷ್ಟು ಪ್ರಗತಿಯನ್ನು ನಿರೀಕ್ಷಣೆ ಮಾಡಿದ್ದರೋ ಅಷ್ಟು ಆ ಬಾಬಿನಲ್ಲಿ ಆಗಲಿಲ್ಲ. ಆ ನೀರಿಕ್ಷಣೆ ರೀತಿ ಏಕೆ ಆಗಲಿಲ್ಲವೆಂದು ಕೇಳಿದರೆ ವಿದ್ಯುಚ್ಛಕ್ತಿ ಸಾಕಷ್ಟು ದೊರೆಯದೇ ಇರುವುದೇ ಮುಖ್ಯ ಕಾರಣ. ಅದಕ್ಕಿಂತಲೂ ಹೆಚ್ಚಿಗೆ ಇವತ್ತು ರಾಜ್ಯದ ಜನಗಳು ಸುಖವಾದ ಜೀವನವನ್ನು ನಡೆಸಬೇಕಾದರೆ ಈ ವ್ಯವಸಾಯ ಒಂದರಿಂದಲೇ ಸಾಧ್ಯವೆಂದು ನಾನು ಭಾವಿಸಿಕೊಂಡಿದ್ದೇನೆ ಇಡೀ ರಾಷ್ಟ್ರಕ್ಕೇ ಅನ್ವಯಿಸುವ ಹಾಗೆ ಭಾರತ ಸರ್ಕಾರ ಒಂದು ಯೋಜನೆಯನ್ನು ತಯಾರು ಮಾಡಿ ಈ ಮೂರನೆಯ ಪಾಂಚವಾರ್ಷಿಕ ಯೋಜನೆಯಲ್ಲಿ ವ್ಯವಸಾಯಕ್ಕೆ ವಿಶೇಷವಾದಂಥ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ. ಅದೇ ರೀತಿಯಲ್ಲಿಯೇ ಮೈಸೂರಿನಲ್ಲಿಯೂ ಈ ವ್ಯವಸಾಯಕ್ಕೆ ವಿಶೇಷವಾದಂಥ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ. ಸುಮಾರು 16 ಕೋಟಿ ರೂಪಾಯಿಗಳನ್ನು ಮೈನರ್ ಇರಿಗೇಷನ್ನಗೋಸ್ಕರ 3ನೇ ಪಾಂಚವಾರ್ಷಿಕ ಯೋಜನೆಯಲ್ಲಿ ತೆಗೆದಿಟ್ಟಿದ್ದಾರೆ. ಅದರಲ್ಲಿ ಸುಮಾರು 8$^{1}/_{2}$ ಕೋಟಿ ರೂಪಾಯಿಗಳನ್ನು ವ್ಯವಸಾಯ ಖಾತೆಗೆ ಸಂಬಂಧಪಟ್ಟ ಹಾಗೆ ಉಪಯೋಗ ಮಾಡಲಿಕ್ಕೆ ಇಟ್ಟಿದ್ದಾರೆ. ಆದರೆ ಈ 16 ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುವುದರಿಂದ, 8 ಕೋಟಿ ರೂಪಾಯಿಗಳನ್ನು ವ್ಯವಸಾಯ ಕ್ಷೇತ್ರದಲ್ಲಿ ವೆಚ್ಚ ಮಾಡುವುದರಿಂದ, ಮೊದಲನೆಯ ಮತ್ತು ಎರಡನೆಯ ಪಾಂಚವಾರ್ಷಿಕ ಯೋಜನೆಗಳಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚ ಮಾಡಿದುದರ ಪರಿಣಾಮವಾಗಿ, ಏನೇನು ಕಾರ್ಯಸಾಧನೆಗಳಾಗಿವೆ ಏನೇನು ಫಲಗಳು ಸೃಷ್ಟಿಸಿವೆ ಎಂಬುದನ್ನು ಪರೀಕ್ಷೆ ಮಾಡುವ ಕಾಲದಲ್ಲಿದ್ದೇವೆ. ಈ ಅಂಕಿ ಅಂಶಗಳನ್ನು ಪರಿಶೀಲನೆ ಮಾಡುವುದಾದರೆ ವ್ಯವಸಾಯಭಿವೃದ್ಧಿ ಯಾವ ರೂಪದಲ್ಲಿ ಬೆಳೆಯ ಬೇಕಾಗಿತ್ತೋ ಆ ರೂಪದಲ್ಲಿ ನಿಜವಾಗಿ ಬೆಳೆದಿಲ್ಲ ಎನ್ನುವುದು ಸ್ಪಷ್ಟವಾದ ಸಂಗತಿ. ಇದು ನ್ಯಾಷನಲ್ ಡೆವೆಲಪ್‌ಮೆಂಟ್ ಕೌನ್ಸಿಲ್ ಎಂಬ ಸಂಸ್ಥೆ ಏನಿದೆ ಅದಕ್ಕೆ ಸರಬರಾಜು ಮಾಡಿದಂತ

ಅಂಕಿ ಅಂಶಗಳಿಂದಲೂ ಸರಕಾರ ಇಲ್ಲಿ ಕೊಟ್ಟಿರತಕ್ಕ ಅಂಕಿ ಅಂಶಗಳಿಂದಲೂ ಸ್ಪಷ್ಟವಾಗಿ ನಮಗೆ ಗೊತ್ತಾಗುತ್ತದೆ. ವ್ಯವಸಾಯಕ್ಕೆ ವೆಚ್ಚ ಮಾಡುವ ಹಣ ಫಲಪ್ರದವಾಗಿ ಉಪಯೋಗವಾಗದೆ ಹೋದ ಪಕ್ಷದಲ್ಲಿ, ಆಹಾರೋತ್ಪತ್ತಿ ಅದರಿಂದಾಗಿ ವಿಶೇಷವಾಗಿ ಆಗದೆ ಹೋದರೆ ನಿಜವಾಗಿ ಜನರಲ್ಲಿ ಹಾಹಾಕಾರ ಉಂಟಾಗುತ್ತದೆ.

ಈವೊತ್ತು ವಾಸ್ತವಿಕವಾಗಿ ಇರತಕ್ಕಂಥ ಒಂದು ಪರಿಸ್ಥಿತಿಯನ್ನು ನಾವು ತಿಳಿಯಬೇಕಾದರೆ ಪ್ರೈಸ್ ಇಂಡೆಕ್ಸ್ ನೋಡಿದರೆ ಗೊತ್ತಾಗುತ್ತದೆ. ಅದರಲ್ಲಿ ಕೊಟ್ಟಿರತಕ್ಕ ಅಂಕಿ ಅಂಶಗಳನ್ನು ನೋಡಿದರೆ ಮಧ್ಯಮವರ್ಗದ ಸಂಸಾರಗಳು, ಕೆಳಮಟ್ಟದಲ್ಲಿರತಕ್ಕ ಸಂಸಾರಗಳು ಯಾವ ರೀತಿ ಜೀವನ ಮಾಡಿಕೊಂಡು ಹೋಗುತ್ತಿವೆ, ಅನ್ನದ ದಾಹ ಎಷ್ಟರ ಮಟ್ಟಿಗೆ ಇದೆ ಎಂಬುದು ಗೊತ್ತಾಗುತ್ತದೆ. ಈ ಅನ್ನದ ದಾಹವನ್ನು ತಡೆಗಟ್ಟಬೇಕಾದರೆ ಆಹಾರ ಸಾಮಗ್ರಿಗಳು ಸುಲಭವಾಗಿ ಎಲ್ಲಾ ಕಡೆಯು ಸಿಕ್ಕುವ ಹಾಗೆ ಮಾಡಬೇಕು. ಎರಡನೆಯದಾಗಿ ಈ ಆಹಾರದ ಬೆಲೆ ಏನಿದೆ ಅದು, ಮಧ್ಯಮ ವರ್ಗದ ಜನ ಏನಿದ್ದಾರೆಯೋ, ಅವರು ಜೀವನವನ್ನು ನಡೆಸಿಕೊಂಡು ಅವರು ಎರಡು ಹೊತ್ತಿನ ಊಟವನ್ನು ಮಾಡುವ ಪರಿಸ್ಥಿತಿಯಲ್ಲಿ ಇದ್ದಿರಬೇಕು. ಆ ರೀತಿ ಬೆಲೆಗಳನ್ನು ನಿಷ್ಕರ್ಷ ಮಾಡಬೇಕು. ನಮ್ಮ ದೇಶದಲ್ಲಿ ಎಷ್ಟು ಜನಗಳು ಇದ್ದಾರೆಯೋ ಅವರೆಲ್ಲರಿಗೂ ಎರಡು ಹೊತ್ತು ಊಟ ಮಾಡುವುದಕ್ಕೆ ಎಷ್ಟು ಆಹಾರ ಬೇಕೋ ಅಷ್ಟು ಆಹಾರವನ್ನು ಸರ್ಕಾರ ತನ್ನ ಕೈಯಲ್ಲಿ ಇಟ್ಟುಕೊಂಡಿರಬೇಕಾದದ್ದು ಅತ್ಯಗತ್ಯ ಎಂದು ನಾನು ಹೇಳುತ್ತೇನೆ. ಅದರ ಬಗ್ಗೆ ಕೆಲವು ಅಂಕಿ ಅಂಶಗಳನ್ನು ಕೊಟ್ಟಿದ್ದಾರೆ. ಹತ್ತಾರು ಕೋಟಿ ರೂಪಾಯಿಗಳನ್ನು ಇರಿಗೇಷನ್ನಿಗಾಗಿ, ನೀರಾವರಿ ಸೌಲಭ್ಯವನ್ನು ಒದಗಿಸುವುದಕ್ಕಾಗಿ ವೆಚ್ಚ ಮಾಡಿದ್ದಾರೆ. ಅದರ ಮೇಲೆ ಅವರು ವೆಚ್ಚ ಮಾಡಿರತಕ್ಕಂಥ ಹಣದ ಪ್ರಮಾಣ ಏನಿದೆಯೋ ಅದು ಯೋಗ್ಯವಾಗಿ ವೆಚ್ಚವಾಗಿದೆಯೇ ಎಂಬುದನ್ನು ಪರೀಕ್ಷೆ ಮಾಡಬೇಕು. ಆ ಅಂಕಿ ಅಂಶಗಳನ್ನು ಪರೀಕ್ಷೆ ಮಾಡಿದ ಪಕ್ಷದಲ್ಲಿ ವ್ಯವಸಾಯ ಎಷ್ಟು ತೀವ್ರಗತಿಯಿಂದ ನಡೆಯಬೇಕಾಗಿತ್ತೋ ಅಷ್ಟು ತೀವ್ರಗತಿಯಿಂದ ನಡೆದಿಲ್ಲ ಎಂಬುದು ಭಾಸವಾಗುತ್ತದೆ. ನಾಲ್ಕನೆಯ ಟೇಬಲ್ಲಿನಲ್ಲಿ The table shows production achievements under the principal crops during the First two years of the Third Five year Plan ಎಂದು ಹೇಳಿದ್ದಾರೆ. ಇದರಲ್ಲಿ 1961–62ನೇ ಸಾಲಿನಲ್ಲಿ ಸುಮಾರು 2410 ಎಕರೆಗಳಷ್ಟು ತರೀ ಜಮೀನಾಗಿದೆ. ಸೃಷ್ಟಿಯಾಗಿರತಕ್ಕ ತರೀ ಜಮೀನು 2410 ಎಕರೆಗಳು ಉತ್ಪಾದನೆಯಾಗಿರುವುದು 1314 ಸಾವಿರ ಟನ್.

1962–63ನೇ ಸಾಲಿನಲ್ಲಿ ನೋಡಿದರೆ 2410 ಸಾವಿರ ಎಕರೆ ಜೊತೆಗೆ 2047 ಎಕರೆಗಳಷ್ಟು ಜಮೀನನ್ನು ನೀರಾವರಿಗೆ ತಂದಿದ್ದಾರೆ. 16 ಕೋಟಿ ರೂಪಾಯಿಗಳ ವೆಚ್ಚದಲ್ಲಿ ಮೈನರ್ ಇರಿಗೇಷನ್ ಮುಖಾಂತರ ಅನೇಕ ಪಿಕ್ ಅಪ್‌ಗಳನ್ನು ಮಾಡಿದ್ದಾರೆ. 11 ಸಾವಿರ ಬಾವಿಗಳನ್ನು ನಿರ್ಮಾಣ ಮಾಡಿದ್ದಾರೆ. ಅದರ ಜೊತೆಗೆ ದೊಡ್ಡ ದೊಡ್ಡ ಜಲಾಶಯಗಳ ಕಾರ್ಯವನ್ನು ನಡೆಸುತ್ತಲೇ ಬಂದಿದ್ದಾರೆ. ಆದರೆ 1962 ಮತ್ತು 1963ನೇ ಸಾಲುಗಳಲ್ಲಿ ಆಹಾರ ಧಾನ್ಯಗಳು ಉತ್ಪನ್ನವಾಗಿರುವುದನ್ನು ನೋಡಿದರೆ ಮೊದಲನೇ ವರ್ಷಕ್ಕಿಂತ ಎರಡನೇ ವರ್ಷದಲ್ಲಿ ಉತ್ಪಾದನೆ ಕಡಿಮೆ ಆಗಿದೆ. ಇದರಿಂದ 1962 ಮತ್ತು

1963ನೇ ಇಸವಿಯಲ್ಲಿ ವಿಶೇಷವಾದ ರೀತಿಯಲ್ಲಿ ಹಣವನ್ನು ವೆಚ್ಚ ಮಾಡಿದ್ದರೂ ಕೂಡ ಅದರ ಪ್ರತಿ ಫಲ ದೊರೆಕಿಲ್ಲ ಎನ್ನುವುದು ಗೋಚರವಾಗುತ್ತದೆ. ಅಷ್ಟೊಂದು ಹಣವನ್ನು ವೆಚ್ಚ ಮಾಡಿದರೂ ಕೂಡ ಅದರಿಂದ ನಿರೀಕ್ಷಿಸದಷ್ಟು ಪ್ರತಿಫಲ ಏತಕ್ಕೆ ಬರಲಿಲ್ಲ ಎಂದರೆ ಅದಕ್ಕೆ ಮಳೆ ಬರಲಿಲ್ಲ ಎಂದು ಉತ್ತರವನ್ನು ಕೊಟ್ಟಿದ್ದಾರೆ. ಸಾಮಾನ್ಯವಾಗಿ ಇದರಿಂದ ನಾವು ಆಲೋಚನೆ ಮಾಡಬಹುದು, ಮನೆಯಲ್ಲಿ ಮಕ್ಕಳು ಸೂಸೂತ್ರವಾಗಿ ಬೆಳೆಯುತ್ತವೆ, ಆದರೆ ಭೂಮಿಯಲ್ಲಿ ಬಿತ್ತಿದ ಬೀಜ ಮೇಲೆ ಬರುವುದಿಲ್ಲ. ಒಂದು ಬೀಜದಿಂದ ಸಾವಿರ ಬೀಜವಾಗಬೇಕು. ಅದನ್ನು ಬಿತ್ತುವುದರಿಂದ ಮಕ್ಕಳ ಸಂಖ್ಯೆ ಬೆಳೆದಿದೆ. ಆದರೆ ಭೂಮಿಯಲ್ಲಿ ಬಿತ್ತಿದ ಬೀಜ ಮಾತ್ರ ಮೇಲೆ ಬರುವುದಿಲ್ಲ. ಇದಕ್ಕೆ ಕಾರಣವೇನು? ಬೀಜವನ್ನು ಸರಿಯಾದ ಕ್ಷೇತ್ರದಲ್ಲಿ ಬಿತ್ತಬೇಕು. ಎಲ್ಲಿ ತಪ್ಪು ಇದೆ ಎಂಬುದನ್ನು ಹುಡುಕಬೇಕು ಮತ್ತು ಅದನ್ನು ಸರಿಪಡಿಸಬೇಕು. ಜಮೀನಿನ ಪ್ರಮಾಣ ಬೆಳೆದ ಹಾಗೆ ಆಹಾರ ವಸ್ತುಗಳನ್ನು ಹೆಚ್ಚು ಹೆಚ್ಚಾಗಿ ಬೆಳೆಯುತ್ತಾ ಬರಬೇಕು. ಬೆಂಗಳೂರಿನಲ್ಲಿ ಅನೇಕರು ಅನುಭವಿಗಳಿದ್ದಾರೆ. ಎಲ್ಲಾ ಪ್ರದೇಶಗಳಿಗಿಂತಲೂ ವಿಶೇಷವಾದ ಕಷ್ಟ ಪರಿಸ್ಥಿತಿಯಲ್ಲಿರತಕ್ಕ ಇಲ್ಲಿನ ನೌಕರರು ಮತ್ತು ಮಾರ್ಕೆಟಿಂಗ್ ಡಿಪಾರ್ಟ್‌ಮೆಂಟಿನವರು ಈ ಆಹಾರ ಧಾನ್ಯಕ್ಕೆ ಸಂಬಂಧಪಟ್ಟ ಹಾಗೆ ಕೆಲವು ಅಂಕಿಅಂಶಗಳನ್ನು ಶೇಖರಿಸಿ ನಮಗೆ ಕೊಟ್ಟಿದ್ದಾರೆ. ಅವುಗಳನ್ನು ಓದಿ ಮಾನ್ಯ ಸದಸ್ಯರಿಗೆ ಬೇಸರ ಮಾಡತಕ್ಕ ಆಶೆ ನನಗೆ ಇಲ್ಲ. ರೈತಾಪಿ ಜನಗಳು ಬೆಳೆಸಿರತಕ್ಕ ಮಾಲುಗಳು ರೇಟು ಯಾವ ರೀತಿ ಇದೆ, ಅದನ್ನು ಇಂಡಿಯಾ ಸರ್ಕಾರದವರು ಯಾವ ರೀತಿ ಕೊಂಡುಕೊಂಡಿದ್ದಾರೆ ಎಂಬುದನ್ನು ನೋಡುವುದಾದರೆ ಹಿಂದಿನ ವರ್ಷಕ್ಕೆ 1962–63ನೇ ಸಾಲಿನಲ್ಲಿ ರೈತಾಪಿ ಜನಗಳಿಗೆ ಅವರು ಬೆಳೆದ ಮಾಲಿಗೆ ಹೆಚ್ಚು ರೇಟುಗಳು ದೊರೆತಿವೆ. ಹಾಗೆ ಅವರಿಗೆ ಹೆಚ್ಚು ರೇಟು ದೊರಕಿದ್ದರೂ ಕೂಡ ಗೃಹಸ್ಥರು, ಸಂಸಾರಸ್ಥರು ಪ್ರತಿ ದಿನದ ಜೀವನಕ್ಕೆ ಬೇಕಾದ ಸಾಮಾನುಗಳನ್ನು ಕೊಂಡುಕೊಳ್ಳತಕ್ಕ ರೇಟಿಗೂ ರೈತಾಪಿ ಜನಗಳು ಮಾರುಕಟ್ಟೆಯಲ್ಲಿ ಮಾರತಕ್ಕ ರೇಟಿಗೂ ಅಜಗಜಾಂತರ ವ್ಯತ್ಯಾಸವಿದೆ. ತಾವು ಬೆಳೆದಂತಹ ಪದಾರ್ಥಗಳನ್ನು ಮಾರಾಟ ಮಾಡತಕ್ಕ ರೈತನಿಗೂ, ಅದನ್ನು ಕೊಂಡುಕೊಳ್ಳತಕ್ಕ ಗೃಹಸ್ಥನಿಗೂ ಅದರಿಂದ ಪ್ರಯೋಜನವಾಗಿಲ್ಲ ಎಂಬುದನ್ನು ಈ ಕೆಳಗಡೆ ಕೊಟ್ಟಿರತಕ್ಕ ಅಂಕಿ ಅಂಶಗಳು ತಿಳಿಸುತ್ತವೆ.

ಬೆಂಗಳೂರು ನಗರದ ಪ್ರೈಜ್ ಇಂಡಕ್ಸನ್ನು ನೋಡುವುದಾದರೆ ಅದು 154 ಆಗಿದೆ. ಆಲ್ ಇಂಡಿಯಾ ಅವರೇಜಿಗಿಂತ 18 ಜಾಸ್ತಿ ಏರಿದೆ. 1950–51ನೇ ಇಸವಿಯ ಪ್ರಮಾಣಕ್ಕೂ ಇವೊತ್ತಿನ ಬೆಲೆಯ ಪ್ರಮಾಣಕ್ಕೂ ಆಲೋಚನೆ ಮಾಡಿದ ಪಕ್ಷದಲ್ಲಿ ಒಂದೂವರೆಯಷ್ಟು ಪ್ರಮಾಣ ಬೆಳೆದಿದೆ ಎನ್ನುವುದನ್ನು ನಾವು ಆಲೋಚನೆ ಮಾಡಬಹುದು. ಇವೊತ್ತು ಮಧ್ಯಮ ವರ್ಗದ ಜನ ಯಾರಿದ್ದಾರೆ, ಸಾಮಾನ್ಯ ವರ್ಗದ ಜನ ಯಾರು ಇದ್ದಾರೆ ಅವರು ಒಪ್ಪತ್ತು ಊಟ ಮಾಡುವ ಪರಿಸ್ಥಿತಿಯಲ್ಲಿ ಇಲ್ಲ. ಅನ್ನದ ದಾಹ ಅನ್ನದ ಹಾಹಾಕಾರ ರಾಜ್ಯದಲ್ಲಿ ಬರತಕ್ಕಂಥಾದ್ದನ್ನು ತಡೆಗಟ್ಟಬೇಕಾದ್ದು ಸರಕಾರದ ಕರ್ತವ್ಯ. ಜನತಾ ಸರ್ಕಾರದ ಕರ್ತವ್ಯ.

ಈ ವಿಷಯದಲ್ಲಿ ಸರ್ಕಾರ ಜಾಗ್ರತೆಯಾಗಿ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು ಎಂದು ನಾನು ಹೇಳುತ್ತೇನೆ. ವ್ಯವಸಾಯದ ಅಭಿವೃದ್ಧಿ ವಿಚಾರದಲ್ಲಿ ವೆಚ್ಚ ಮಾಡತಕ್ಕ ಹಣದ ಮೇಲೆ, ಸಣ್ಣಪುಟ್ಟ

ನೀರಾವರಿಗಳ ವಿಷಯದಲ್ಲಿ ವೆಚ್ಚಮಾಡತಕ್ಕ ಹಣದ ಮೇಲೆ ವ್ಯವಸಾಯ ಮಂತ್ರಿಗಳು ಮತ್ತು ರೆವಿನ್ಯೂ ಮಂತ್ರಿಗಳು ಕೂಡ ಪ್ರತಿದಿನವೂ ಎಷ್ಟು ಎಕರೆ ಹೆಚ್ಚಾಗಿ ವ್ಯವಸಾಯದಲ್ಲಿ ಬಂದಿದೆ ಎಷ್ಟು ಫಲ ಹೆಚ್ಚಾಗಿ ಬರುವುದಾಗಿದೆ, ಆ ಫಲದಿಂದ ರೈತನಿಗೆ ಎಷ್ಟು ನಫೆ ಬಂದಿದೆ, ಅದು ಸಾಮಾನ್ಯ ಪ್ರಜೆಗೆ ಹೇಗೆ ದೊರೆಯುತ್ತದೆ, ಎಂದು ಅದನ್ನು ನಿತ್ಯ ಸಂಧ್ಯಾವಂದನೆಯನ್ನಾಗಿ ಮಾಡಿಕೊಳ್ಳಬೇಕು. ಅದು ನಿತ್ಯ ಪ್ರಾರ್ಥನೆಯಾಗಬೇಕು, ಜನತಾ ಜನಾರ್ಧನನ ಸೇವೆವಾಡುವುದಕ್ಕೆ ಮಂತ್ರಿಗಳು ಇದನ್ನು ನಿತ್ಯ ಸಂಧ್ಯಾವಂದನೆಯಾಗಿ ಮಾಡುವ ಪಕ್ಷದಲ್ಲಿ ಅದರಿಂದ ಜನತೆಗೆ ಆಹಾರವನ್ನು ಸಂಪಾದನೆ ಮಾಡಿಕೊಟ್ಟು ಕೃತಾರ್ಥತೆಯನ್ನು ಪಡೆಯುತ್ತಾರೆ. ಜನತೆಯ ಕೃತಜ್ಞತೆಗೆ ಪಾತ್ರರಾಗುತ್ತಾರೆ. ಇದರಲ್ಲಿ ಸಂದೇಹವಿಲ್ಲ. ಇಂಥ ಉತ್ಕಟ ಪರಿಸ್ಥಿತಿ ನಮ್ಮ ದೇಶದಲ್ಲಿ ಒದಗುವುದನ್ನು ಮಾತ್ರ ನಾನು ಒತ್ತಿ ಹೇಳುತ್ತೇನೆ. ಇದು ತೀವ್ರವಾಗಿ ನಿವಾರಣೆಯಾಗಬೇಕು ಎನ್ನುವ ಆಸೆ ಅವರ ಮನಸ್ಸಿನಲ್ಲಿಯೂ ಇರುತ್ತದೆ. ವಾಸ್ತವವಾದ ಅಂಶಗಳನ್ನು ಅದೇ ಸ್ವರೂಪದಲ್ಲಿ ತಿಳಿಸಿ ಭಯೋತ್ಪಾದನೆ ಮಾಡಬೇಕೆಂದು ಯಾವ ಜನತಾ ಸರ್ಕಾರಕ್ಕೂ ಇಚ್ಛೆ ಇರುವುದಿಲ್ಲ. ಆದರೆ ಅದರ ತೀವ್ರತೆಯನ್ನು ಮನಸ್ಸಿನಲ್ಲಿ ಅರ್ಥ ಮಾಡಿಕೊಂಡು ಅದನ್ನು ತಡೆಗಟ್ಟಿ ಜನತೆಗೆ ಸಂತೋಷವನ್ನುಂಟುಮಾಡಬೇಕೆನ್ನುವುದು ಮಾತ್ರ ಅವರ ಕಾರ್ಯಸೂತ್ರವಾಗಬೇಕು ಎನ್ನುವುದನ್ನು ಈ ಸಮಯದಲ್ಲಿ ನಾನು ಹೇಳುತ್ತೇನೆ.

ವಿದ್ಯುಚ್ಛಕ್ತಿ ಉತ್ಪಾದನೆಯ ವಿಷಯ. ವಿದ್ಯುಚ್ಛಕ್ತಿ ಶರಾವತಿಯಿಂದ ಮಾತ್ರ ಹೆಚ್ಚಾಗಿ ಉತ್ಪನ್ನವಾದೀತು. ಈ ವರ್ಷದ ಕೊನೆಯೊಳಗೆ ಎರಡು ಯೂನಿಟ್ಟುಗಳು ಪ್ರಾರಂಭಿಕವಾಗಿ ನಮಗೆ ವಿದ್ಯುಚ್ಛಕ್ತಿ ದೊರೆಯುತ್ತದೆ. ಸುಮಾರು ನಾಲ್ಕು ವರ್ಷಗಳಲ್ಲಿ 8 ಸಾವಿರ ಮೆಗವಾಟ್ಸ್ ವಿದ್ಯುಚ್ಛಕ್ತಿ ನಮಗೆ ದೊರೆಯುತ್ತದೆ. ಈ ವಿದ್ಯುಚ್ಛಕ್ತಿಯು ಮೈಸೂರಿಗೆ ದೊರೆಯುತ್ತದೆ. ಆದರೆ ಅನೇಕ ಜನ ನಮ್ಮ ಸುತ್ತಮುತ್ತಲಿನ ಜನ ಇದನ್ನು ಹೊಡೆಯಬೇಕೆಂದು ಕಾದಿದ್ದಾರೆ. ಎತ್ತು ಏಳುವುದಕ್ಕೆ ಮೊದಲೇ ಹದ್ದು ಹಾರಿತು ಎಂದು ಕನ್ನಡದಲ್ಲಿ ಒಂದು ಗಾದೆ ಇದೆ, ಹಾಗೆ ಮತ್ತು ತರಗೆಲೆ ತಿನ್ನುವವನನ್ನು ಹಪ್ಪಳ ಕೇಳಿದರು ಎನ್ನುವ ರೀತಿಯಲ್ಲಿ ಮದ್ರಾಸ್, ಕೇರಳ ಮತ್ತು ಆಂಧ್ರರಾಜ್ಯಗಳವರುಸವರನ್ ಗ್ರಿಡ್ ಮಾಡಿಕೊಳ್ಳಬೇಕೆಂದು ಕಾತುರರಾಗಿದ್ದಾರೆ. ಮಹಾರಾಷ್ಟ್ರದವರು ಕೂಡ ಕೃಷ್ಣ ಗೋದಾವರಿ ನೀರಿನ ಪ್ರಶ್ನೆ ಬಂದಾಗಲೆಲ್ಲ ನಮಗೆ ವಿದ್ಯುಚ್ಛಕ್ತಿ ಇಲ್ಲ. ಈ ಕೃಷ್ಣೆ ಗೋದಾವರಿ ನೀರನ್ನು ಯಾರಾದರೂ ಮುಟ್ಟುವ ಪಕ್ಷದಲ್ಲಿ ನಮಗೆ ವಿದ್ಯುಚ್ಛಕ್ತಿ ಹಕ್ಕಿದೆ, ನಮ್ಮ ಜನರ ಬಾಯಿಂದಲೇ ವಿದ್ಯುಚ್ಛಕ್ತಿಯನ್ನು ನಿಮಗೆ ಕೊಡಿಸುತ್ತೇವೆ ಎನ್ನುವ ಮಾತನ್ನು ಅಡಿಸುವುದಕ್ಕೆ ಪ್ರಯತ್ನ ಪಟ್ಟರು. ಗೋವ ಕರ್ನಾಟಕ ರಾಜ್ಯವಾಗಿದ್ದು ಪರರಾಜ್ಯ ಆಗುತ್ತದೆಯೋ ಏನೋ ಎನ್ನುವ ಅಂಶಯ ಮೂಡಿರುವ ಕಾಲದಲ್ಲಿ 15 ಸಾವಿರ ಕಿಲೋವಾಟ್ಸ್ ವಿದ್ಯುತ್ತನ್ನು ಅವರು ಕೇಳುತ್ತಿದ್ದಾರೆ. ಇಂಥಾ ಪರಿಸ್ಥಿತಿಯಲ್ಲಿ ಮೈಸೂರು ರಾಜ್ಯದಲ್ಲಿ ನಿಷ್ಕರ್ಷಯಾಗಿರುವ ರೀತಿಯಲ್ಲಿ ಹತ್ತು ವರ್ಷಗಳ ಕಾಲದಲ್ಲಿ ಶರಾವತಿಯಿಂದ ಎಷ್ಟು ಕಿಲೋವಾಟ್ಸ್ ವಿದ್ಯುಚ್ಛಕ್ತಿ ಉತ್ಪನ್ನವಾಗುತ್ತದೆ, ಕಾಳಿನದಿ ಯೋಜನೆಯಿಂದ ಎಷ್ಟು ಉತ್ಪನ್ನವಾಗುತ್ತದೆ. ಮೈನರ್ ಸ್ಕೀಮುಗಳಿಂದ ಎಷ್ಟು ವಿದ್ಯುಚ್ಛಕ್ತಿ ಬಂದೀತು ಅದನ್ನೆಲ್ಲ ಯಾವ ಪ್ರಮಾಣದಲ್ಲಿ ಹಂಚುತ್ತೇವೆ, ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಎಷ್ಟು ಬೇಕಾಗುತ್ತದೆ, ಈಗ ಇರತಕ್ಕ ದೊಡ್ಡ ದೊಡ್ಡ ಕಾರ್ಖಾನೆಗಳಿಗೆ ವೇಗ ವಿಲೇ ಮಾಡುತ್ತೀರಿ, ಹೊಸ ಉದ್ಯಮಗಳಿಗೆ, ಹೊಸ ಕೈಗಾರಿಕೆಗಳಿಗೆ ಯಾವ ರೀತಿ

ವಿದ್ಯುಚ್ಛಕ್ತಿಯನ್ನು ಕೊಡುತ್ತೀರಿ ಎನ್ನುವುದಕ್ಕೆ ಹತ್ತಿಪ್ಪತ್ತು ವರ್ಷಕಾಲದ ಒಂದು ನಿಕೃಷ್ಟವಾದ ಯೋಜನೆಯನ್ನು ಹಾಕಿಕೊಳ್ಳಬೇಕು. ಮಾನ್ಯ ಮಿತ್ರರಾದ ಮಲ್ಲಾರಾಧ್ಯರು ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ 20 ವರ್ಷ ಕಾಲದ ಕೆಲವು ರೂಪರೇಖೆಗಳನ್ನು ತೋರಿಸತಕ್ಕ ಒಂದು ಯೋಜನೆಯನ್ನು ಹಾಕಿಕೊಳ್ಳಬೇಕು ಎಂದು ಹೇಳಿದರು. ಅದೇ ರೀತಿ ವಿದ್ಯುಚ್ಛಕ್ತಿ ವಿಷಯದಲ್ಲಿಯೂ ಅದರ ಉತ್ಪನ್ನ ಮತ್ತು ವಿಲೇವಾರಿಯು ವಿಷಯದಲ್ಲಿ ಯೋಗ್ಯವಾದ ರೀತಿಯಲ್ಲಿ ಹತ್ತು ವರ್ಷಕಾಲದಲ್ಲಿ ಅಥವಾ 20 ವರ್ಷ ಕಾಲದಲ್ಲಿ ಎಷ್ಟು ವಿದ್ಯುಚ್ಛಕ್ತಿಯನ್ನು ಉತ್ಪನ್ನ ಮಾಡುತ್ತೇವೆ, ಅದನ್ನು ಯಾವ ರೀತಿ ವಿಲೇ ಮಾಡಬೇಕು ಎನ್ನುವ ವಿಚಾರದಲ್ಲಿ ಒಂದು ಸಮಗ್ರ ಯೋಜನೆಯನ್ನು ತಯಾರಿಸಿದರೆ ಎಷ್ಟು ದೊಡ್ಡ ಕೈಗಾರಿಕೆಗಳು ನಮ್ಮಲ್ಲಿ ಬರುತ್ತವೆ, ಎಷ್ಟು ಸಣ್ಣ ಕೈಗಾರಿಕೆಗಳು ಬರುತ್ತವೆ, ಎಷ್ಟು ಮನೆಗಳ ಉಪಯೋಗಕ್ಕೆ ಬೇಕಾಗುತ್ತದೆ, ಎನ್ನುವುದು ನಮಗೆ ಗೊತ್ತಾಗುತ್ತದೆ. ಅಂಥ ಒಂದು ಬ್ಲೂಪ್ರಿಂಟ್ ಡ್ರಾಫ್ಟ್ ಎಂದು ಏನು ಹೇಳುತ್ತಾರೆ. ಆ ಒಂದು ಯೋಜನೆ ಏನಿದೆ ಅದು ಈ ಹೊತ್ತು ನಮ್ಮಲ್ಲಿಲ್ಲ. ಅಂಥ ಒಂದು ಯೋಜನೆಯನ್ನು ತಯಾರು ಮಾಡಿ ಆ ರೀತಿ ನಡೆದುಕೊಳ್ಳಬೇಕಾದ್ದು ಮತ್ತು ಅದು ಮೈಸೂರು ದೇಶದ ಅಧಿಕಾರ ವರ್ಗಕ್ಕೆ ಒಂದು ಗೈಡೆನ್ಸ್ ಆಗಿ ನಿಲ್ಲಬೇಕಾದ ಯೋಗ್ಯ ಎಂದು ನಾನು ತಿಳಿದುಕೊಂಡಿದ್ದೇನೆ.

ವ್ಯವಸಾಯ ಇಲಾಖೆಯವರು ಹೇಳಿದರು, ಸಾಮಾನ್ಯವಾಗಿ ನಮ್ಮಲ್ಲಿ ಮೇಜರ್ ಮತ್ತು ಮೀಡಿಯಂ ಕಾರ್ಯಕ್ರಮಗಳಿಂದ 98700 ಟನ್ನುಗಳಷ್ಟು ಆಹಾರ ಉತ್ಪತ್ತಿಯಾಗುತ್ತದೆ. ಮೂರನೆಯ ಪಂಚವಾರ್ಷಿಕ ಯೋಜನೆ ಮುಗಿಯುವ ವೇಳೆಗೆ 48 ಲಕ್ಷ ಟನ್ ಆಹಾರ ನಮ್ಮಲ್ಲಿ ಉತ್ಪನ್ನವಾಗಬೇಕು ಎಂದು ಟಾರ್‌ಗೇಟ್ ಎಂದು ಆದರೆ ಈ ಹೊತ್ತು ಕೇವಲ 37 ಲಕ್ಷ ಟನ್ ಉತ್ಪನ್ನವಾಗುತ್ತಿದೆ ಎಂದರೆ ಹತ್ತು ಲಕ್ಷ ಚಿಲ್ಲರೆ ಆಹಾರೋತ್ಪತ್ತಿ ಮೂರನೆ ಯೋಜನೆ ಮುಗಿಯುವ ವೇಳೆಗೆ ಆಗಬೇಕು. ಮೊದಲನೆ ಮತ್ತು ಎರಡನೆ ಪಂಚವಾರ್ಷಿಕ ಯೋಜನೆಗೆ ಪರಿಣಾಮವಾಗಿ ಮತ್ತು ಮೂರನೆಯ ಯೋಜನೆಯು ಎರಡು ವರ್ಷಗಳಲ್ಲಿ ಕೇವಲ ಎರಡೂವರೆ ಲಕ್ಷ ಟನ್‌ನಷ್ಟು ಹೆಚ್ಚು ಆಹಾರ ಉತ್ಪನ್ನವಾಗಿದೆ. ಮೈಸೂರು ರಾಜ್ಯದಲ್ಲಿ ಇನ್ನು ಉಳಿದಿರುವ ಒಂದೆರಡು ವರ್ಷಗಳಲ್ಲಿ ಏಳೂವರೆ ಲಕ್ಷ ಟನ್ ಉತ್ಪನ್ನವಾಗಬೇಕು. ಇದು ಹೇಗೆ ಆಗುತ್ತದೆ ಎಂದು ನಾನು ಪ್ರಶ್ನೆ ಮಾಡುತ್ತೇನೆ. ಬಿತ್ತಿದ ಬೀಜವೇ ಮೇಲೆ ಬಾರದೆ ಇರತಕ್ಕ ಸನ್ನಿವೇಶವೇ ಹೆಚ್ಚಾಗಿರುವ ಪ್ರಕರಣದಲ್ಲಿ ಏಳೂವರೆ ಲಕ್ಷ ಟನ್ ಏನಿದೆ ಅದು ಹೇಗೆ ಉತ್ಪನ್ನವಾಗುತ್ತದೆ.

ಸಿಲ್ಕ್ ಓವರ್ ಎಂದರೆ ಒಂದು ಗುರಿಯನ್ನು ಇಟ್ಟುಕೊಂಡಿರುತ್ತೇನೆ. ಆ ಗುರಿಯನ್ನು ಆ ವರ್ಷದ ಒಳಗಾಗಿ ಮುಟ್ಟುವುದಕ್ಕೆ ಆಗುವುದಿಲ್ಲ, ಆ ವರ್ಷದ ಒಳಗೆ ಆ ಕೆಲಸ ಮುಗಿಯುವುದಿಲ್ಲ. ಅದು ಮುಗಿಯದೆ ಇದ್ದು ಅಲ್ಪ ಸ್ವಲ್ಪ ಅದರ ಬಾಕಿ ಉಳಿದಿದ್ದರೆ ಅದನ್ನು ಮುಗಿಸಬೇಕು. ಆದರೆ ಒಂದನೆ ಯೋಜನೆಯ ಸ್ಪಿಲ್ ಓವರ್ ಮೂರನೆ ಯೋಜನೆಯಲ್ಲಿ ಬಂದಿರತಕ್ಕ ಪ್ರಕರಣಗಳು ಹತ್ತಾರು ಇವೆ. ಅದನ್ನು ನಾನು ಹೇಳಿದ್ದೇನೆ. ಅನೇಕ ಜನ ಸದಸ್ಯರು ಈ ಸಭೆಯಲ್ಲಿಯೂ ಇನ್ನೊಂದು ಸಭೆಯಲ್ಲಿಯೂ ಪ್ರಸ್ತಾಪ ಮಾಡಿದ್ದಾರೆ. ಅದನ್ನು ಸ್ಪಿಲ್ ಓವರ್ ಎಂದು ಯಾವ ರಾಜ್ಯವೂ

ಕರೆಯುವುದಿಲ್ಲ. ಮೂರನೆಯ ಪಂಚವಾರ್ಷಿಕ ಯೋಜನೆಯ ವೇಳೆಯಲ್ಲಿ, ಮೊದಲನೆಯ ಯೋಜನೆಯಲ್ಲಿ ನಾವು ಯಾವ ಗುರಿಯನ್ನು ಮುಟ್ಟಬೇಕಾಗಿತ್ತೋ ಯಾವ ಸಿದ್ಧಿಯನ್ನು ಪಡೆಯಬೇಕಾಗಿತ್ತೋ ಅದನ್ನು ಮಾತ್ರ ಪಡೆಯುತ್ತಿದ್ದೇವೆ. ಆ ರೀತಿ ಮಾಡಬಾರದು ಎಂದು ನಾನು ಈಗ ಪ್ರಸ್ತಾಪ ಮಾಡುತ್ತಿದ್ದೇನೆ.

ಈ ಹತ್ತು ಲಕ್ಷ ಟನ್ ಆಹಾರ ಬೇಕಾಗಿರುವುದು ತೀವ್ರವಾಗಿರತಕ್ಕ ವಿಚಾರ. ಆಹಾರ ಧಾನ್ಯಗಳ ಅಭಾವ ಪರಿಸ್ಥಿತಿ ದೇಶದಲ್ಲಿ ವಿಶೇಷವಾಗಿ ಒದಗಿರುವಾಗ ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚಮಾಡಿ ಭಾರತದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕಾಗಿರುವಾಗ ಭರತ ಖಂಡದಲ್ಲಿ ನಾವು ಆಹಾರ ಸಾಮಗ್ರಿಯಲ್ಲಿ ಸ್ವಯಂ ಪೂರ್ಣತೆಯನ್ನು ಪಡೆಯದೆ ಹೋದರೆ ರಾಜ್ಯ ಕುಂಠಿತವಾಗುತ್ತದೆ ಎಂದು ಮಾತ್ರ ಈ ಸಮಯದಲ್ಲಿ ಹೇಳುತ್ತೇನೆ. ವ್ಯವಸಾಯ ಅಭಿವೃದ್ಧಿ ಆಹಾರಧಾನ್ಯಗಳ ಉತ್ಪತ್ತಿ ವಿಶೇಷವಾದ ರೀತಿಯಲ್ಲಿ ನಡೆಯದೆ ಹೋದರೆ, ದೇಶದಲ್ಲಿ ನೀರಾವರಿಗಳ ಪ್ರಯೋಜನವು ಯೋಗ್ಯವಾದ ರೀತಿಯಲ್ಲಿ ನಡೆಯದೆ ಹೋದರೆ ಅದರಿಂದ ನಮ್ಮ ರಾಜ್ಯಕ್ಕೆ ಮಾತ್ರವಲ್ಲ ಇಡೀ ರಾಷ್ಟ್ರಕ್ಕೇ ತೊಂದರೆಯಾಗುತ್ತದೆ ಎಂದು ನಾವು ತಿಳಿದುಕೊಳ್ಳಬೇಕಾದ್ದು ಯೋಗ್ಯ.

ಈ ಮೂರನೆ ಪಂಚವಾರ್ಷಿಕ ಯೋಜನೆಯ ಮೂರನೆಯ ವರ್ಷದಲ್ಲಿ ನಾವು ಇದ್ದೇವೆ. ಮೂರನೆಯ ವರ್ಷವೂ ಕೊನೆಯಾಗುತ್ತಾ ಬಂತು. ಇನ್ನು ಎರಡು ವರ್ಷ ಮಾತ್ರ ಉಳಿದಿದೆ. ಈ ಕಾಲದಲ್ಲಿ ಕೆಲಸ ಬಹಳ ತೀವ್ರವಾಗಿ ಆಗಬೇಕು. ಅದರಲ್ಲಿ 98700 ಟನ್ನುಗಳಷ್ಟು ಆಹಾರವನ್ನು ಮೇಜರ್ ಮತ್ತು ಮೀಡಿಯಂ ಇರಿಗೇಷನ್ನಿನಿಂದ ಪಡೆಯಬೇಕು. ನಮ್ಮಲ್ಲಿ ಮೇಜರ್ ಮತ್ತು ಮೀಡಿಯಂ ಇರಿಗೇಷನ್ ಸ್ಕೀಮುಗಳು ಎಷ್ಟಿವೆ, ಎಷ್ಟು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡಿದ್ದೇವೆ. ಅದರ ಮೇಲೆ ಎಷ್ಟು ಸಾಲದ ಹೊರೆ ಇದೆ, ಅದಕ್ಕೆ ತೆರಬೇಕಾದ ಬಡ್ಡಿ ಯಾವ ರೀತಿ ವಿಷದ ರೂಪದಲ್ಲಿ ಏರುತ್ತಿದೆ ಎಂಬುದನ್ನು ನಾವು ಗಮನಿಸಬೇಕು. ಮೂರನೆಯ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ಮೈನರ್ ನೀರಾವರಿಯಿಂದ 25400 ಟನ್ನುಗಳು, ಮೇಜರ್ ನೀರಾವರಿಯಿಂದ 96400 ಟನ್ನುಗಳು ರಾಜ್ಯದಲ್ಲಿ ಉತ್ಪತ್ತಿಯಾದೀತು ಎನ್ನುವ ಆಶಯವನ್ನು ವ್ಯಕ್ತಪಡಿಸಿದ್ದುಂಟು. ಲ್ಯಾಂಡ್ ರಿಕ್ಲಮೇಷನ್‌ನಿಂದ 39900 ಟನ್, ಇಂಪ್ರೂವೆಡ್ ಸೀಡ್ಸ್‌ನಿಂದ 88000 ಟನ್, ಫರ್ಟಿಲೈಸರ್ಸ್‌ನಿಂದ 487000 ಟನ್, ಮೆನ್ಯೂರ್ಸ್‌ನಿಂದ 63000 ಟನ್, ಇಂಪ್ರೂವ್ಡ್ ಪ್ರಾಕ್ಟಿಸಸ್ ಅಂಡ್ ಅದರ ಮೇಷರ್ಸ್‌ನಿಂದ 207000 ಟನ್‌ನಷ್ಟು ಉತ್ಪತ್ತಿಯಾಗಬೇಕೆಂದಿತ್ತು ಇದನ್ನು ನಾವು ಪರ್ಯಾಲೋಚನೆ ಮಾಡಿದರೆ, ಫರ್ಟಿಲೈಸರುಗಳನ್ನು ಸಾಕಷ್ಟು ಒದಗಿಸಿದರೆ ಮಿಕ್ಕ ಐದಾರು ಬಾಬ್ತುಗಳಿಂದ ಆಗುವಷ್ಟು ಉತ್ಪತ್ತಿ ಇದೊಂದರಿಂದಲೇ ಆಗುತ್ತದೆ. ತಮಗೆ ಗೊತ್ತಿರುವ ಹಾಗೆ, ಮೂರನೆಯ ಪಂಚವಾರ್ಷಿಕ ಯೋಜನೆ ಕೊನೆಯೊಳಗಾಗಿ ಹತ್ತು ಲಕ್ಷ ಟನ್ ಉತ್ಪತ್ತಿ ಮಾಡಬೇಕು. ಇದರಲ್ಲಿ ಗೊಬ್ಬರವನ್ನೊದಗಿಸುವುದರಿಂದಲೇ ನಾಲ್ಕು ಲಕ್ಷದ ಎಂಭತ್ತೇಳು ಸಾವಿರ ಟನ್ ಉತ್ಪತ್ತಿಯಾಗುತ್ತದೆ. ಇಷ್ಟು ಫರ್ಟಿಲೈಸರು ತರಿಸಿಕೊಡುವುದು ಎಲ್ಲಿಂದ? ಮೈಸೂರು ರಾಜ್ಯದಲ್ಲಿ ಫರ್ಟಿಲೈಸರು ಕಾರ್ಖಾನೆ ಇದ್ದಿದ್ದರೆ, ಒಳ್ಳೆಯದೆಂದು ಮೊದಲನೆಯ ಪಂಚವಾರ್ಷಿಕ ಯೋಜನೆಯ

ಕಾಲದಿಂದಲೇ ಏರ್ಪಾಡು ಮಾಡಬಹುದಾಗಿತ್ತೆಂದು ಹೇಳುತ್ತಿದ್ದೆವು. ಈಗ ಇದರಿಂದ ನಾವು ನಿರೀಕ್ಷಿಸಿರುವಷ್ಟು ಸಾಧನೆಯಾಗುವುದಿಲ್ಲ. ಐದನೆಯ ಯೋಜನೆಯಲ್ಲಿ ಇದು ಅನ್ವಯವಾಗಬಹುದೇನೋ ಏನೋ. ಜನ ಸಂಖ್ಯೆ ಈ ದೇಶದಲ್ಲಿ ಏರುತ್ತಿವೆ. ದೇಶದ ಅಭಿವೃದ್ಧಿಯ ದೃಷ್ಟಿಯಿಂದ ಫರ್ಟಿಲೈಸರ್ ಕಾರ್ಖಾನೆಯನ್ನು ತೀವ್ರವಾಗಿ ಮೈಸೂರು ರಾಜ್ಯದಲ್ಲಿ ಸ್ಥಾಪನೆ ಮಾಡಬೇಕಾದುದು ಅತ್ಯಗತ್ಯ. ಏನೇ ಎಡರುತೊಡರುಗಳು ಬಂದರೂ ಪರಿಹಾರ ಮಾಡಿಕೊಂಡು ಇಂತಹ ಕಾರ್ಖಾನೆಯನ್ನು ಸ್ಥಾಪನೆ ಮಾಡಬೇಕಾದುದು.

ಶಿಕ್ಷಣದ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. ವೈದ್ಯ ಮತ್ತು ಜನಾರೋಗ್ಯದ ಬಗ್ಗೆ ನಾಲ್ಕು ಮಾತುಗಳನ್ನು ಹೇಳುತ್ತೇನೆ. ರಾಜ್ಯಪಾಲರು ಅಪ್ಪಣೆ ಕೊಡಿಸಿದ ಭಾಷಣದಲ್ಲಿ ಕನ್ನಡ ಪ್ರತಿಯ 25ನೆಯ ಪುಟದಲ್ಲಿ ಶಿಕ್ಷಣ ಪ್ರಗತಿಯ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. 1961–62 ನೇ ವರ್ಷದಲ್ಲಿ ಜಾರಿಗೆ ಬಂದ ಕಡ್ಡಾಯ ಪ್ರಾಥಮಿಕ ಶಿಕ್ಷಣ ಸಂಬಂಧವಾದ ಯೋಜನೆಯು ತೀವ್ರಗತಿಯಿಂದ ಪ್ರಗತಿ ಹೊಂದುತ್ತಿದೆ, ಸರಕಾರಿ ಪ್ರೋತ್ಸಾಹದಿಂದ ಖಾಸಗಿ ಶಾಲೆಗಳು ಹೆಚ್ಚಾಗಿವೆ ಎಂದು ಅಪ್ಪಣೆ ಕೊಡಿಸಿದ್ದಾರೆ. ತಾಂತ್ರಿಕ ವಿದ್ಯಾಭ್ಯಾಸದ ಸೌಕರ್ಯ ಹೆಚ್ಚು ಜನರಿಗೆ ಒದಗಿಸಲು ಏರ್ಪಾಡು ಮಾಡಿದ್ದೇವೆಂದು ಹೇಳಿದ್ದಾರೆ. ವಿಶ್ವವಿದ್ಯಾನಿಲಯದ ವಿಚಾರವನ್ನು ಕೂಡ ಪ್ರಸ್ತಾಪಿಸಿದ್ದಾರೆ. 1961–62ನೆಯ ವರ್ಷದಲ್ಲಿ ಆರಂಭವಾದ ಕಡ್ಡಾಯ ಪ್ರಾಥಮಿಕ ಶಿಕ್ಷಣ ಯೋಜನೆ ಯೋಗ್ಯ ಹಾಗೂ ಅಭಿನಂದನೀಯವಾದುದು. ಭರತಖಂಡದ ಇತರ ರಾಜ್ಯಗಳಲ್ಲೆಲ್ಲಿಯೂ ಪ್ರಾರಂಭ ಮಾಡದೇಯಿರುವ ಕಾಲದಲ್ಲಿ ನಮ್ಮ ಮೈಸೂರು ಸರಕಾರ ಐವತ್ತು ವರ್ಷಗಳ ಹಿಂದೆ ಕೀರ್ತಿಶೇಷರಾದ ವಿಶ್ವೇಶ್ವರಯ್ಯನವರು 1915ನೆಯ ಇಸವಿಯಲ್ಲಿ ಆಗಿನ ಪ್ರಜಾಪ್ರತಿನಿಧಿ ಸಭೆಯನ್ನು ಉದ್ದೇಶಿಸಿ ಮಾತನಾಡುವಾಗ ಎರಡು ತಾಲ್ಲೂಕುಗಳಲ್ಲಿ ಈ ಶಿಕ್ಷಣವನ್ನು ಪ್ರಾರಂಭಮಾಡುವುದಾಗಿ ಹೇಳಿದರು. ನಂತರ ಕಾರ್ಯಗತ ಮಾಡಿದರು. ಹಳೆಯ ಮೈಸೂರಿನಲ್ಲಿ ಐವತ್ತು ವರ್ಷಗಳ ಹಿಂದೆ ಇದ್ದ ಸ್ಫೂರ್ತಿಯುತವಾದ ಅಧಿಕಾರ ವರ್ಗದವರಿಂದ ಪ್ರಾರಂಭವಾಯಿತು. ಈ ಹೊತ್ತು ಇದು ಸಾರ್ವತ್ರಿಕವಾಗಿ ಪ್ರಾರಂಭವಾಗಿದೆ. ಇದು ಯಶಸ್ವಿಯಾಗಬೇಕಾದರೆ ಸೂಕ್ತ ರೀತಿಯಲ್ಲಿ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕಾದುದು ಯೋಗ್ಯ. ಇಷ್ಟು ಮಾತ್ರ ಹೇಳುತ್ತೇನೆ. ಕೇವಲ ವಿದ್ಯಾರ್ಥಿಗಳನ್ನು ಶಾಲೆಗೆ ತಂದು ಅವರನ್ನು ಅಲ್ಲಿ ಐದು ಗಂಟೆಗಳ ಕಾಲ ಕೂಡಿಸುವುದಕ್ಕೆ ಬದಲು ಎರಡು ಗಂಟೆಗಳ ಕಾಲ ಯೋಗ್ಯವಾದ, ಅಕ್ಷರಸನಾದ, ದಕ್ಷನಾದ ಉಪಾಧ್ಯಾಯನಿಂದ ಪಾಠ ಹೇಳಿಸಿದರೆ ಸಾಕೆಂದು ನನಗನಿಸುತ್ತದೆ. ಇಲ್ಲಿ ಕುಳಿತಿರುವ ಸದಸ್ಯರಲ್ಲಿ ಶಿಕ್ಷಣ ಶಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಮನ್ ಮಲ್ಲಾರಾಧ್ಯರು ಕೇವಲ ಎರಡು ಗಂಟೆಗಳ ಕಾಲ ದಿನದಲ್ಲಿ ಕನ್ನಡ ಪಾಠವನ್ನು ಕಲಿತು ಶುದ್ಧ ಕನ್ನಡವನ್ನು ಕಲಿತಿದ್ದಾರೆ. ಅಂತಹ ಶಿಕ್ಷಣ ಈಗ ಮಾಯವಾಗಿದೆ. ಸಂಖ್ಯೆ ಹೆಚ್ಚಾಗುತ್ತಿದೆ. ಆದರೆ ಗುಣ ಕಡಿಮೆಯಾಗುತ್ತಿದೆ. ಆದುದರಿಂದ ಸಂಖ್ಯೆಗಿಂತ ಗುಣಕ್ಕೆ ಹೆಚ್ಚಿನ ಗಮನ ಕೊಡಬೇಕಾಗಿದೆ. ಕ್ವಾಲಿಟೇಟಿವ್ ಇಂಪ್ರೂವ್‌ಮೆಂಟ್ ಆಗಬೇಕು. ಇಲ್ಲದಿದ್ದರೆ ಮುಂದಿನ ಜನ ಅಷ್ಟು ಸಂಸ್ಕೃತಿವಂತರಾಗುವುದಿಲ್ಲವೋ ಏನೂ ಎನ್ನುವ ಭಯ ಹಿಂದಿನ ಜನರಮನಸ್ಸಿನಲ್ಲಿ ಬರುವುದು ಸಹಜ. ಸೆಕೆಂಡರಿ ಶಾಲೆಗಳ ವಿಷಯವೂ ಅಷ್ಟೆ. ಯಾವ ಶಾಲೆಯಲ್ಲೇ ಆಗಲಿ ಅಲ್ಲಿರುವ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಅಧ್ಯಾಪಕರ ಸಂಖ್ಯೆ ಇರಬೇಕು. ಮುಖ್ಯ

ಉಪಾಧ್ಯಾಯರು ಆ ಶಾಲೆಯವಿದ್ಯಾರ್ಥಿಗಳನ್ನು ಹಿಡಿತದಲ್ಲಿ ಇಟ್ಟಿರಬೇಕು. ಈ ಹೊತ್ತು ಎರಡು ಸಾವಿರ ವಿದ್ಯಾರ್ಥಿಗಳಿರುವ ಶಾಲೆಗಳಿವೆ. 1500ಕ್ಕೆ ಕಡಿಮೆಯಿಲ್ಲದೆ ಸೆಕೆಂಡರಿ ಶಾಲೆಗಳು ನೂರಾರಿವೆ. ಒಂದು ಸಹಸ್ರ ವಿದ್ಯಾರ್ಥಿಗಳಿರುವ ಪ್ರಾಥಮಿಕ ಶಾಲೆಗಳಿವೆ. ಸರಕಾರಿ ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು ಬೆಂಗಳೂರಿನಲ್ಲಿರುವುದರಲ್ಲಿ 2300 ವಿದ್ಯಾರ್ಥಿಗಳಿದ್ದಾರೆ. ಇದನ್ನು ನೋಡಿದರೆ ಯಾವ ಅಧ್ಯಾಪಕರೂ ವಿದ್ಯಾರ್ಥಿಗ ವರದಿಯನ್ನು ಹೊಂದಿರುವಂತೆ ಕಾಣುವುದಿಲ್ಲ.

ಬೆಂಗಳೂರಿನಲ್ಲಿ ವಕೀಲ ವೃತಿಯಲ್ಲಿದ್ದವರು, ಕೋರ್ಟುಗಳಲ್ಲಿ ಆರ್ಗ್ಯೂ ಮಾಡಿ ದೊಡ್ಡ ಹೆಸರನ್ನು ಸಂಪಾದನೆ ಮಾಡಿದರು. ಅವರು ಮನೆಯಲ್ಲಿ ಹೊತ್ತು ಕಳೆಯುವುದಿಲ್ಲ. ಹೊತ್ತಿಗೆ ಮುಂಚೆ ಮನೆಯನ್ನು ಬಿಟ್ಟು ಹೋಗುತ್ತಾರೆ. ರಾತ್ರಿ ಮಕ್ಕಳು ಮಲಗಿದ ಮೇಲೆ ಮನೆಗೆ ಬರುತ್ತಾರೆ. ಒಂದು ದಿವಸ ಅವರು ಲೇಟಾಗಿ ಆಫೀಸಿಗೆ ಹೋಗಬೇಕಾಯಿತು, ಬೆಳಿಗ್ಗೆ ಮಕ್ಕಳು ಏಳುವವರೆಗೆ ಮನೆಯಲ್ಲಿದ್ದರು. ಅವರನ್ನು ನೋಡಿ ಅವರ ಮಗು ಅಮ್ಮನನ್ನು ಕೇಳಿತಂತೆ, ಅಮ್ಮ ಯಾರೋ ಹೊಸ ಮಾವ ಬಂದಿದ್ದಾರೆ. ಅವರು ಯಾರು ಎಂದು ಕೇಳಿತಂತೆ. ತಂದೆಯನ್ನು ಗುರುತಿಸದೇಯಿರುವ ಮಕ್ಕಳು ಇದ್ದಾರೆ. ಹೀಗೆ ಎರಡು ಮೂರು ಸಾವಿರ ವಿದ್ಯಾರ್ಥಿಗಳಿರುವ ಶಾಲೆಗಳೂ ನೂರು ಜನ ಅಧ್ಯಾಪಕರಿರುವ ಶಾಲೆಗಳೂ ಇವೆ. ನಾನು ಒಂದು ಪ್ರಮುಖ ಶಾಲೆಗೆ ಮುಖ್ಯೋಪಾಧ್ಯಾಯನಾಗಿದ್ದೇನೆ. ನನಗೆ ಅನುಭವವಿದೆ. ಉಪಾಧ್ಯಾಯರನ್ನು ವಿದ್ಯಾರ್ಥಿಗಳು ಗುರುತಿಸಬಹುದು. ಆದರೆ ಸಾವಿರ ವಿದ್ಯಾರ್ಥಿಗಳಿದ್ದರೆ ಒಂದು ಶಾಲೆಯಲ್ಲಿ ವಿದ್ಯಾರ್ಥಿಗಳು ಪರಿಚಯವನ್ನು ಉಪಾಧ್ಯಾಯರು ಪಡೆಯದೇಯಿರಬಹುದು. ವಿದ್ಯಾರ್ಥಿ ಮತ್ತು ಉಪಾಧ್ಯಾಯರಿಗೆ ಪರಸ್ಪರ ಪರಿಚಯವಿಲ್ಲದಿದ್ದರೆ ಅದು ಯಾವ ರೀತಿಯ ವಿದ್ಯಾಭ್ಯಾಸ? ಶಿಕ್ಷಕ ಮತ್ತು ವಿದ್ಯಾರ್ಥಿಯ ಸಂಬಂಧ ಹೇಗೆ ಬೆಳೆಯುತ್ತದೆ? ಪರಸ್ಪರ ಸಂಬಂಧವಿರಬೇಕು. ಅಂತಹ ವಿದ್ಯೆಯೇ ನಿಜವಾದ ವಿದ್ಯೆ ಎಂದು ಹೇಳುವಾಗ ಕೇವಲ ಸಂಖ್ಯಾ ಬಲದಿಂದ ಮಾತ್ರ ಶಾಲೆಗಳು ನಡೆಯುತ್ತವೆಯೆಂದರೆ, ಇದರ ಮೇಲೆ ಎಷ್ಟು ವೆಚ್ಚಮಾಡುತ್ತೇವೋ ಅದಕ್ಕೆ ತಕ್ಕ ಪ್ರಮಾಣದಲ್ಲಿ ಫಲ ದೊರಕುತ್ತಿಲ್ಲವೆಂದು ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಆದಕಾರಣ ಕ್ವಾಲಿಟಿ ಅಥವಾ ಗುಣವನ್ನು ಅಭಿವೃದ್ಧಿಮಾಡಬೇಕಾಗಿದೆ. ಇದು ಅತ್ಯಗತ್ಯ. ಶಿಕ್ಷಣ ಕ್ಷೇತ್ರದಲ್ಲಿ ಆಗಾಗ ಪ್ರಯೋಗಗಳನ್ನು ಮಾಡಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಶಿಕ್ಷಣ ತಜ್ಞರ ಅಥವಾ ಅ ಕಾರ, ವರ್ಗದವರ, ಆಡಳಿತವರ್ಗದವರ ಕೈಗೊಂಬೆಗಳಾಗಿ ವಿಕ್ಟಿಮೈಸ್ ಆಗುವುದನ್ನು ನಿಲ್ಲಿಸಬೇಕು. ಯಾವ ಶಿಕ್ಷಣವೇ ಆಗಲಿ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡತಕ್ಕಂಥವರ ಮಾತು ಕೊನೆಯದಾಗಬೇಕು. ಪಂಡಿತರು ಅನುಭವವುಳ್ಳ ಪ್ರತಿನಿಧಿಗಳ ಮಾತಿನಂತೆ ಒಂದು ಯೋಜನೆ ಹಾಕಿದ ಮೇಲೆ ಕಡ್ಡಾಯವಾಗಿ ಅದರಂತೆ ನಡೆಯಬೇಕು. ಅದರಲ್ಲಿ ಬದಲಾವಣೆ ಮಾಡಬಾರದು. ಹಾಗೆ ಮಾಡದೇ ಇದ್ದರೆ ಅಘಾತ ಉಂಟು ಮಾಡಿದಂತಾಗುತ್ತದೆಂದು ಹೇಳುತ್ತೇನೆ.

ಇನ್ನು ಟೆಕ್ನಿಕಲ್ ಮತ್ತು ಪಾಲಿಟೆಕ್ನಿಕ್ ಶಿಕ್ಷಣ ಕ್ಷೇತ್ರದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿದೆ ಎಂದು ರಾಜ್ಯಪಾಲರವರು ಹೇಳಿದ್ದಾರೆ. ಬರೀ ಸಂಖ್ಯೆ ಮಾತ್ರ ಬೆಳೆಯುತ್ತಿದೆಯೇ ಹೊರತು ವಿಧವಿಧವಾದ ಸಬ್ಜೆಕ್ಟ್ ಶಾಸ್ತ್ರಿಯ ವಿಷಯದಲ್ಲಿ ವ್ಯಾಸಂಗಕ್ಕೆ ಏರ್ಪಾಡು ಮಾಡಿಲ್ಲ ಬೊಂಬಾಯಿ

ಮದ್ರಾಸ್ ರಾಜ್ಯಗಳಲ್ಲಿ ಟೆಕ್ನಾಲಾಜಿಕಲ್ ಇನ್‌ಸ್ಟಿಟ್ಯೂಶನ್‌ಗಳಲ್ಲಿ ನಾಲ್ಕು ಜನ ಏಶಿಯನ್ ಪ್ರೊಫೆಸರ್ಸ್ ಇದ್ದಾರೆ, ಶಾಸ್ತ್ರೀಯ ವಿಷಯ ಕಲಿಸಲು ಬೇರೆ ಬೇರೆ ಪ್ರೊಫೆಸರ್ಸ್ ಇದ್ದಾರೆ. ಅಲ್ಲಿ 50 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಅಲ್ಲಿ ಶಿಕ್ಷಕರಿಗೆ ಯೋಗ್ಯ ಸಂಭಾವನೆ ಕೊಡುತ್ತಿದ್ದಾರೆ. ಆದರೆ ನಮ್ಮ ಮೈಸೂರು ರಾಜ್ಯದಲ್ಲಿ ತಾಂತ್ರಿಕ ಶಿಕ್ಷಣವೇ ಇಲ್ಲ. ಇಂಜಿನಿಯರಿಂಗ್ ಶಿಕ್ಷಣದಲ್ಲಿ ಬೇರೆ ಬೇರೆ ವಿಷಯಗಳನ್ನು ಕಲಿಸಲು ಏರ್ಪಾಡು ಇಲ್ಲ. ಆದರೆ ನಮ್ಮ ನೆರೆ ರಾಜ್ಯವಾದ ಮದ್ರಾಸ್ ಯೂನಿವರ್ಸಿಟಿಯಲ್ಲಿ ಏರ್ಪಾಡು ಮಾಡಿದ್ದಾರೆ. ಅಲ್ಲಿ ಅನೇಕ ವಿದ್ಯಾರ್ಥಿಗಳು ಇದ್ದಾರೆ. ಪ್ರತಿಭಾನ್ವಿತ ಅಧ್ಯಾಪಕರು ಇದ್ದಾರೆ. ಅದೇ ರೀತಿ ಇಲ್ಲಿಯೂ ಕೂಡ ಒಂದು ಒಳ್ಳೇ ಏರ್ಪಾಡು ಮಾಡಲಿಲ್ಲವಲ್ಲಾ ಎಂದು ವಿಷಾದಪಡಬೇಕಾಗಿದೆ.

ಇನ್ನು ಶ್ರೀಮಾನ್ ಕಟ್ಟೀಮನಿಯವರು ಮಾತನಾಡುತ್ತಾ ಒಂದು ವಿಷಯ ಪ್ರಸ್ತಾಪ ಮಾಡಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಚಾನ್ಸಲರ್ ಅವರ ಹುದ್ದೆಯನ್ನು ಭರ್ತಿ ಮಾಡುವ ಕಾಲದಲ್ಲಿ ಇತರರನ್ನು ತಂದಿರುವುದು ಯೋಗ್ಯ ಎಂದು ಅವರು ಹೇಳಿದ್ದಾರೆ. ಮೈಸೂರು ರಾಜ್ಯದಲ್ಲಿ ವೈಸ್ ಚಾನ್ಸಲರ್ ಹುದ್ದೆ ಮಾತ್ರವಲ್ಲದೆ ಬೇರೆ ಯಾವುದೇ ಅಧಿಕಾರದ ಉನ್ನತ ಸ್ಥಾನದಲ್ಲಿ ಕೆಲಸ ಮಾಡಲು ಯೋಗ್ಯ ರೀತಿಯಲ್ಲಿ ಕಾರ್ಯನಿರ್ವಹಣೆ ಮಾಡಲು ಶಕ್ತಿ ಸಾಮರ್ಥ್ಯ ಉಳ್ಳಂಥ ದಕ್ಷರಾದ ಅಧಿಕಾರಿಗಳು ಕನ್ನಡ ರಾಜ್ಯದಲ್ಲಿ ಇದ್ದಾರೆ. ಮೈಸೂರು ರಾಜ್ಯದಲ್ಲಿ ಇದ್ದಾರೆ. ಮೇಧಾ ಶಕ್ತಿ ಪಡೆದಂಥ ಯೋಗ್ಯ ಜನ ಇದ್ದಾರೆ. ಪ್ರತಿಭಾನ್ವಿತರಾದ ಪಂಡಿತರು, ದಿಗಂತಿಗಳು ಸಮರ್ಥ ರೀತಿಯಲ್ಲಿ ಆಡಳಿತ ನಡೆಸತಕ್ಕಂಥ ಅರ್ಹರು ಆದವರು ಅನೇಕರು ಚಾಕಚಕ್ಯತೆಯಿಂದ ಕೆಲಸ ಮಾಡತಕ್ಕಂಥವರು, ಯೋಗ್ಯ ಶೀಲ, ಶಕ್ತಿಯುಳ್ಳವರು ತಜ್ಞರು ನಮ್ಮ ರಾಜ್ಯದಲ್ಲಿ ಇದ್ದಾರೆ. ನಮ್ಮ ಮೈಸೂರು ಯೂನಿವರ್ಸಿಟಿಯು ಇಂಥ ಸ್ವರೂಪದಲ್ಲಿ ರೂಪರೇಖೆಯಲ್ಲಿ ಕಳೆದ 30 ವರ್ಷಗಳ ಕಾಲ ಸಮರ್ಪಕವಾದ ರೀತಿಯಲ್ಲಿ ಬೆಳೆದುಕೊಂಡು ಬಂದಿದೆ. ಇಂಥವರು ಇಂದು ನಮ್ಮ ಮೈಸೂರು ರಾಜ್ಯದಲ್ಲಿ ಇರಲಿಲ್ಲವೇ? ಎಂದು ಪ್ರಶ್ನೆ ಮಾಡುತ್ತೇನೆ. ಹೀಗೆ ನಗೆ ಪಾಟಿಲು ಮಾಡುವುದು ಸರಿಯಲ್ಲ. ಇತರ ಜನರನ್ನು ತಂದು ಸಂಸ್ಥೆ ಬೆಳೆಸುತ್ತೇವೆಂದು ಹೇಳುವುದು ಯೋಗ್ಯವಲ್ಲ. ರಾಜಸ್ತಾನದಲ್ಲಿ ಬೆಳೆದಂಥ ಸಸಿ ನಮ್ಮ ಮೈಸೂರಿನಲ್ಲಿ ಬೆಳೆದು ಫಲ ಕೊಡುತ್ತದೆ ಎಂದು ಹೇಳಲು ಬರುವುದಿಲ್ಲ. ಅದು ಸಾಧ್ಯವಿಲ್ಲ. ಯಾಕೆಂದರೆ ಅದು ಬರೀ ಊಹೆಯಾದೀತು. ಯೂನಿವರ್ಸಿಟಿ ವೈಸ್‌ಚಾನ್ಸಲರ್ ಹುದ್ದೆಗೆ ಅಂಥ ದೊಡ್ಡ ಶಾಸ್ತ್ರಜ್ಞರು ಬೇಕಾಗಿಲ್ಲ. ಸಿ.ವಿ. ರಾಮನ್‌ರವರಂಥ ದೊಡ್ಡ ಶಾಸ್ತ್ರಜ್ಞರು ಒಬ್ಬರೇ ಸಿಕ್ಕಬಹುದು. ರಾಧಾಕೃಷ್ಣನರವರಂಥ ಮೇಧಾವಿಗಳು ತತ್ವಜ್ಞಾನಿಗಳು ಒಬ್ಬರೇ ಸಿಕ್ಕಬಹುದು. ಸಿ.ಡಿ. ದೇಶಮುಖರಂಥಾ ತಜ್ಞರು ಒಬ್ಬರೇ ಸಿಕ್ಕಬಹುದು. ಇಂದು ನಮ್ಮ ಭಾರತ ದೇಶದಲ್ಲಿ 44 ಯೂನಿವರ್ಸಿಟಿಗಳು ಇವೆ. ಇನ್ನೂ ಹತ್ತಾರು ಯೂನಿವರ್ಸಿಟಿಗಳು ಪ್ರಾರಂಭವಾಗಬಹುದು. ವೈಸ್–ಚಾನ್ಸಲರ್ ಹುದ್ದೆಗೆ ಅಂಥಾ ದೊಡ್ಡ ತಜ್ಞರಾದಂಥರು ಬೇಕಾಗಿಲ್ಲ. ಪ್ರೊಫೆಸರ್ ಆಗಿರತಕ್ಕಂಥವರು, ಪಾಠಪ್ರವಚನ ಮಾಡತಕ್ಕಂಥವರು ಲ್ಯಾಬೊರೊಟರಿಯಲ್ಲಿ ರಿಸರ್ಚ್ ಮಾಡಿ ಸೈಟಿಫಿಕ್ ಡೆವಲಪ್‌ಮೆಂಟ್ ಮಾಡತಕ್ಕಂಥವರು ವಿಜ್ಞಾನ ಸಮಸ್ಯೆಯನ್ನು ತಿಳಿದುಕೊಂಡಿರತಕ್ಕಂಥವರು

ಯುವಕರನ್ನು ತಯಾರು ಮಾಡತಕ್ಕಂಥ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡಿರತಕ್ಕಂಥವರು ಬೇಕಾಗಿದ್ದಾರೆ. ಅಧಿಕಾರ ನಡೆಸತಕ್ಕಂಥವರು ಮೈಸೂರು ರಾಜ್ಯದಲ್ಲಿ ಅಭಿಮಾನವುಳ್ಳವರಾಗಿರಬೇಕು. ನಮ್ಮ ಮೈಸೂರು ರಾಜ್ಯದ ಮೇಲೆ ಪ್ರೇಮವಿಟ್ಟುಕೊಂಡಿರತಕ್ಕಂಥ ದೇಶಭಕ್ತಿಯುಳ್ಳವರು ಜನರು ನಮ್ಮ ರಾಜ್ಯದಲ್ಲಿ ನಿಮಗೆ ದೊರೆಯಲ್ಲಿವೇ ಎಂದು ಕೇಳುತ್ತೇನೆ. ಮೈಸೂರು ಯೂನಿವರ್ಸಿಟಿ ವೈಸ್-ಚಾನ್ಸರಲ್ ಹುದ್ದೆಗೆ ನಮ್ಮವರನ್ನು ಬಿಟ್ಟು ಹೊರಗಿನಿಂದ ಇತರರನ್ನು ತಂದು ಹಾಕುವುದು ಸಮಂಜಸವಲ್ಲ ಎಂದು ಹೇಳುತ್ತೇನೆ. ತಾಂತ್ರಿಕ ಕೆಲಸಕ್ಕೆ ಒಂದು ಸಮಯ ನಮ್ಮಲ್ಲಿ ಅದಕ್ಕೆ ಜನಇಲ್ಲವೇ ಹೋದರೆ ಇತರರನ್ನು ತರಬಹುದು. ಆದರೆ ಇಂಥ ಹುದ್ದೆಗೆ ಹೊರಗಿನಿಂದ ಜನ ತಂದರೆ ಯೂನಿವರ್ಸಿಟಿ ಸಂಸ್ಥೆ ಬೆಳೆಯುವುದಿಲ್ಲ. ಶೇಷಾದ್ರಿಯವರು ದಿವಾನರಾಗಿ ಮೈಸೂರಿನಲ್ಲಿ ಇದ್ದರು. ಕೃಷ್ಣಮೂರ್ತಿಯವರು ದಿವಾನರಾಗಿ ಕೆಲಸ ಮಾಡಿದ್ದಾರೆ. ಅನೇಕ ಜನ ಯೋಗ್ಯರಾದವರು. ನಮ್ಮ ರಾಜ್ಯದಲ್ಲಿ ಇದ್ದಾರೆ. ನಮ್ಮ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿರತಕ್ಕಂಥ ಈ ಸಂಸ್ಥೆಗೆ ಯುವಕರಾದವರೊಬ್ಬರಿಗೆ ಸೇವೆ ಸಲ್ಲಿಸಲು ಅವಕಾಶ ಕಲಿಸಿಕೊಡದೇ ನಮ್ಮ ರಾಜ್ಯಕ್ಕೆ ನಮ್ಮ ಜನರಿಗೆ ದ್ರೋಹ ಮಾಡಿದ್ದೀರಿ ಎಂದು ಅನ್ನಬೇಕಾಗುತ್ತದೆ.

ಮೈಸೂರು ಯೂನಿವರ್ಸಿಟಿ ಕೂಡ 30 ವರ್ಷಗಳ ಸಂಪ್ರದಾಯ ಇಟ್ಟುಕೊಂಡಿದೆ. ಭಾವೀ ಜನಾಂಗದ ಆಶೋತ್ತರಗಳನ್ನು ನೀವು ತಿಳಿದುಕೊಂಡಿದ್ದೀರಾ? ಮೈಸೂರಿನ ಹಿಂದಿನ ಮಹಾರಾಜರಾದ ಕೀರ್ತಿಶೇಷರಾದ ಶ್ರೀಮಾನ್ ಕೃಷ್ಣರಾಜ ಒಡೆಯರ ಕಾಲದಲ್ಲಿ ಸಾವಿರಾರು ಜನರು ನಮ್ಮ ಮೈಸೂರು ಸೇವೆಗಾಗಿ ಸಿದ್ಧರಾಗಿದ್ದರು. ಸರ್ ವಿಶ್ವೇಶ್ವರಯ್ಯರವರಂಥ ಮಹಾನುಭಾವರು ಈ ದೇಶದಲ್ಲಿ ಹುಟ್ಟಿದ್ದಾರೆ. ಸರ್.ಎಚ್.ವಿ. ನಂಜುಂಡಯ್ಯನವರಂಥವರು ಪ್ರತಿಭಾನ್ವಿತ ನ್ಯಾಯಾಧೀಶರು, ಫಸ್ಟ್ ಮೆಂಬರ್ ಆಪ್ ದಿ ಎಕ್ಸಕ್ಯೂಟಿವ್ ಕೌನ್ಸಿಲರ್ ಆಗಿದ್ದರು.

ಒಂದು ಪ್ರಾಂತ್ಯದಲ್ಲಿ ಗೋಧಿ ಬೆಳೆಯುವುದಿಲ್ಲ. ಇನ್ನೊಂದು ಪ್ರಾಂತ್ಯದಲ್ಲಿ ಕೂಶ್ಮಾಂಡಗಳು ಹೆಚ್ಚಾಗಿ ಬೆಳೆಯುತ್ತವೆ. ಮತ್ತೊಂದು ಪ್ರಾಂತ್ಯದಲ್ಲಿ ನವಣೆ ಬೆಳೆಯುತ್ತದೆ. ಇನ್ನೊಂದರಲ್ಲಿ ಹತ್ತಿ ಬೆಳೆಯುತ್ತದೆ. ಇದು ಭೂಗುಣ, ವಾತಾವರಣದ ಮೇಲೆ ಹೋಗುತ್ತದೆ ಮತ್ತು ಅಲ್ಲಿಗೆ ಬೇಕಾಗಿರತಕ್ಕಂಥ ಸಾಮಗ್ರಿಗಳ ಮೇಲೆ ಹೋಗುತ್ತದೆ. ಎಚ್.ವಿ. ನಂಜುಂಡಯ್ಯನವರು ಪ್ರತಿಭಾಶಾಲಿಗಳು ಕೀರ್ತಿಶೇಷರಾದ ಎನ್.ಎಸ್. ಸುಬ್ಬರಾಯರು ಪ್ರತಿಭಾಶಾಲಿಗಳು, ತಾವು ಆಲೋಚನೆ ಮಾಡಿದ ಪಕ್ಷದಲ್ಲಿ ವೈಸ್ ಚಾನ್ಸಲರ್‌ರಾಗಿದ್ದಂಥ ಶ್ರೀಮಾನ್ ಬ್ರಜೇಂದ್ರನಾಥ್ ಸೀಲ್‌ರವರನ್ನು ಕೆಲವು ಪರಿಸ್ಥಿತಿಗಳಿಂದ ಕರೆಸಿದರು. ಅವರ ತರುವಾಯ ಅವರ ಸ್ಥಳದಲ್ಲಿ ಮೈಸೂರಿನವರೇ ಇದ್ದರು. ಮೈಸೂರಿನ ವೈಸ್ ಚಾನ್ಸಲರು ಮೈಸೂರಿನವರಾಗಿದ್ದಾಗ ಪ್ರೊಫೆಸರ್ ಕೆ.ಟಿ. ಶಾರದರನ್ನು ಮೈಸೂರಿನ ಹೊರಗಡೆಯಿಂದ ತರಿಸಿದ್ದಾರೆ. ರಾಧಾಕೃಷ್ಣನ್‌ರವರು ಹೊರಗಡೆಯಿಂದ ಬಂದರು. ವಿ.ಆರ್. ವಾಡಿಯವರು ಹೊರಗಡೆಯಿಂದ ಬಂದರು; ರಾಧಾಕುಮುದ ಮುಖರ್ಜಿಯವರು ಹೊರಗಡೆಯಿಂದ ಬಂದರು. ವಿದ್ಯಾರ್ಥಿಗಳಿಗೆ ಪಾಠಬೋಧನೆ ಮಾಡಬೇಕೆಂದು ಬಂದರು. ಪ್ರಪಂಚದ ಯಾವುದೇ ಭಾಗದಲ್ಲಿರಲಿ, ಕರೆದುಕೊಂಡು ಬನ್ನಿ. ಹವಾನಿನಿಂದ ಕರೆದುಕೊಂಡು ಬನ್ನಿ,

ಫಿಲಿಫೈನ್ಸ್‌ನಿಂದ ಕರೆದುಕೊಂಡು ಬನ್ನಿ, ಅಮೇರಿಕದಿಂದ ಕರೆದುಕೊಂಡು ಬನ್ನಿ, ಟಿಂಬಟ್ಟುವಿನಿಂದ ಕರೆದುಕೊಂಡು ಬನ್ನಿ ಅಥವಾ ಅಫಘಾನಿಸ್ತಾನದಿಂದ ಕರೆದುಕೊಂಡು ಬನ್ನಿ. ಆದರೆ ಆಡಳಿತ ಸೂತ್ರಗಳನ್ನು ವಹಿಸತಕ್ಕಂಥ ಜನರಗಳನ್ನು ಕರೆಸುವಾಗ ದೇಶದ ಜನರ ಮತ್ತು ಅದರಲ್ಲಿಯೂ ತರುಣ ಜನಾಂಗದ ಅಪೋತ್ತರಗಳನ್ನು ತಮ್ಮ ಗಮನದಲ್ಲಿಟ್ಟುಕೊಂಡಿರಬೇಕು. ಹೊರಗಡೆ ಹೋಗಿ ವೈಸ್ ಚಾನ್ಸಲ್‌ರಾಗತಕ್ಕಂಥ ನಮ್ಮಂಥ ಜನಗಳಿರುವಾಗ ಇವರನ್ನು ಹೊರಗಡೆಯಿಂದ ಏಕೆ ತಂದಿರಿ?

ರಾಜ್ಯಪಾಲರು ಪ್ರಥಮಬಾರಿಗೆ ಕನ್ನಡದಲ್ಲಿ ಭಾಷಣಮಾಡಿ ನಮ್ಮ ರಾಜ್ಯಸರ್ಕಾರಕ್ಕೆ ಅವರಿಗೆ ಕನ್ನಡದ ಮೇಲೆ ಎಷ್ಟು ಅಭಿಮಾನವಿದೆಯೆಂಬುದನ್ನು ಸೂಚಿಸಿದ್ದಾರೆಂದು ನಾನು ಅಂದುಕೊಂಡಿದ್ದೇನೆ. ಈ ವಿಚಾರ ನನಗೆ ಬಹಳ ಸಂತೋಷವನ್ನುಂಟುಮಾಡಿದೆ. ನಮ್ಮ ರಾಜ್ಯಪಾಲರು ಅಪ್ಪಣೆ ಕೊಡಿಸಿದ ಭಾಷಣದ ಬಗ್ಗೆ ಅವರಿಗೆ ವಂದನಾರ್ಪಣೆ ಸಲ್ಲಿಸತಕ್ಕ ಬಗ್ಗೆ ಶ್ರೀ ಬದರಿನಾರಾಯಣ ರವರು ತಂದಿರತಕ್ಕ ವಂದನಾ ನಿರ್ಣಯದ ಬಗ್ಗೆ ಪ್ರಸ್ತಾಪ ಮಾಡುತ್ತಾ ನಾನು ನಮ್ಮ ರಾಜ್ಯದಲ್ಲಿರತಕ್ಕ ಶಿಕ್ಷಣ ವಿಚಾರವನ್ನು, ಕನ್ನಡ ಭಾಷಾ ಬೆಳವಣಿಗೆಯ ವಿಚಾರವನ್ನು ಪ್ರಸ್ತಾಪ ಮಾಡುತ್ತಿದ್ದೆನು. ಅಷ್ಟೇ ಅಲ್ಲದೆ ನಮ್ಮ ವಿಶ್ವವಿದ್ಯಾನಿಲಯದಲ್ಲಿ ನಡೆಯುತ್ತಿರುವ ಪಾಠಪ್ರವಚನಗಳು ಹಾಗೂ ಶಿಕ್ಷಣ ಕ್ರಮ, ಶಾಸ್ತ್ರೀಯವಾದ ವ್ಯಾಸಂಗ ಕ್ರಮ ಮತ್ತು ಪಾಠಪ್ರವಚನಗಳ ಬೋಧನಾ ಕ್ರಮ ಇತ್ಯಾದಿ ವಿಚಾರಗಳನ್ನು ಪ್ರಸ್ತಾಪಮಾಡುತ್ತಿದ್ದೆನು. ಆದರೆ ಇತ್ತೀಚೆಗೆ ಕೆಲವರು ನಮ್ಮ ವಿಶ್ವವಿದ್ಯಾನಿಲಯದ ಆಡಳಿತವನ್ನು ನಡೆಸುವುದಕ್ಕೆ ನಮ್ಮ ರಾಜ್ಯದವರಾದ ನಮ್ಮ ಕನ್ನಡಿಗರಾದ ಹಾಗೂ ಇದರ ಆಡಳಿತದಲ್ಲಿ ಚೆನ್ನಾಗಿ ಅರಿತು ನುರಿತಂಥ ಕನ್ನಡಿಗರನ್ನೇ ತರಬೇಕೆಂದೂ ಬೇರೆ ಯಾರನ್ನೂ ಹೊರಗಿನವರನ್ನೂ ತರಬಾರದು ಎಂದು ಹೇಳುತ್ತಿದ್ದಾರೆ. ಆದರೆ ಇಲ್ಲಿಗೆ 40–50 ವರ್ಷಗಳ ಹಿಂದೆ ನಮ್ಮಲ್ಲಿ ವಿಶ್ವವಿದ್ಯಾನಿಲಯ ಪ್ರಾರಂಭವಾಯಿತು. ಆಗ ನಮ್ಮ ದೇಶದವರು ಕೇವಲ ನಮ್ಮ ಇಂಡಿಯಾದೇಶದಲ್ಲಿರತಕ್ಕವರನ್ನೇ ಅಲ್ಲದೆ ಕೆಲವು ಪಾಶ್ಚಿಮಾತ್ಯ ವಿದ್ವಾಂಸರುವನ್ನು ಇಂಗ್ಲಿಷ್ ಪ್ರೊಫಸರ್‌ಗಳನ್ನು ಇಲ್ಲಿ ಪಾಠಪ್ರವಚನಗಳನ್ನು ಮಾಡುವುದಕ್ಕಾಗಿ ಇಂಗ್ಲಿಷ್ ಮತ್ತು ಸೈನ್ಸ್ ವಿಭಾಗದಲ್ಲಿ ಪಾಠಪ್ರವಚನಗಳನ್ನು ನಡೆಸಲು ಕೆಲವು ಮಂದಿತರಲಾಗಿತ್ತು. ಆದರೆ ಇತ್ತೀಚೆಗೆ ನಮ್ಮ ಮೈಸೂರು ರಾಜ್ಯದಲ್ಲೇ ರಾಜ್ಯಾಡಳಿತ ನಡೆಸಬಲ್ಲಂಥ ಲೀಡರುಗಳನ್ನು ಎಂದರೆ ದೇಶದ ಆಡಳಿತ ಸೂತ್ರವನ್ನು ಹಿಡಿಯಲು ದಕ್ಷರಾದಂಥ ಜನರನ್ನು ತಯಾರಿಸುವುದಕ್ಕೂ ಹೀಗೆ ಇನ್ನು ವಾಣಿಜ್ಯ, ಅಧ್ಯಾಪಕರು, ಒಳ್ಳೆಯ ವಿಜ್ಞಾನಿಗಳು ರಾಜಕೀಯ ಧುರೀಣರೂ ಇಂಥ ಜನರನ್ನು ತಯಾರಿಸತಕ್ಕ, ನಾಯಕರನ್ನು ತಯಾರಿಸತಕ್ಕ ಯಾವ ನಮ್ಮ ವಿಶ್ವವಿದ್ಯಾನಿಲಯುವಿದೆಯೋ ಅದರ ಆಡಳಿತವನ್ನು ನಡೆಸಲು ನಮ್ಮ ಮೈಸೂರಿನವರೇ ಆದವರೊಬ್ಬರನ್ನು ನೇಮಿಸಬೇಕೆಂದು ಹೇಳಿ ಹಿಂದೆ ಇದ್ದ ಕೀರ್ತಿಶೇಷರಾದ ನಾಲ್ವಡಿ ಕೃಷ್ಣರಾಜ ಒಡೆಯರವರೂ, ಮತ್ತು ಕೀರ್ತಿಶೇಷರಾದ ಸರ್.ಎಂ. ವಿಶ್ವೇಶ್ವರಯ್ಯನವರೂ ಒಬ್ಬರನ್ನು ಪ್ರಥಮಬಾರಿಗೆ ನೇಮಕ ಮಾಡಿದರು.

ಹೀಗೆ ನಮ್ಮ ವಿಶ್ವವಿದ್ಯಾನಿಲಯ ಬೆಳೆದುಬಂದಿದೆ. ಇವತ್ತು ಕೂಡ ಮೈಸೂರು ರಾಜ್ಯದಲ್ಲಿ ಅನೇಕ ಗಣ್ಯವ್ಯಕ್ತಿಗಳು ಅನೇಕರು ಅರಿತು ನುರಿತವರು ಮತ್ತು ದೇಶಕ್ಕೆ ನಾನಾ ರೀತಿಯಲ್ಲಿ ಸೇವೆ

ಸಲ್ಲಿಸಿದವರು ಇದ್ದಾರೆ. ಹೆಚ್ಚಿನ ಸಾಮರ್ಥ್ಯವಿರುವ ಜನ ಬೆಂಗಳೂರಿನಲ್ಲಿರುವಾಗ ಹೊರಗಡೆಯಿಂದ ಆಡಳಿತಗಾರರನ್ನು ತೆಗೆದುಕೊಂಡು ಬರುತ್ತೇವೆಂದು ಹೇಳುವುದು ಕನ್ನಡನಾಡಿನ ಜನತೆಗೆ ಸಂತೋಷ ಉಂಟುಮಾಡುವುದಿಲ್ಲ ಎಂಬುದಾಗಿ ನಾನು ಒತ್ತಿಹೇಳುತ್ತೇನೆ. ಮೇಧಾವಂತರಾದ ಜನಗಳಿಗೆ ಕ್ರಿಯವಂತಾರಾದ ಜನಗಳಿಗೆ ಮತ್ತು ಶೀಲವಂತರಾದ ಜನಗಳಿಗೆ ಮೈಸೂರು ರಾಜ್ಯದಲ್ಲಿಯೇ ಮನ್ನಣೆ ಸಿಕ್ಕುವುದಿಲ್ಲವೆಂದು ಹೇಳಿದರೆ ಹೇಗೆ? ಇದರಲ್ಲಿ ಯಾರೂ ಅಡ್ಡಿ ಬರಬಾರದೆಂಬುದನ್ನು ಶಿಕ್ಷಣ ಸಚಿವರು ಗಮನದಲ್ಲಿಡಬೇಕು. ವ್ಯಾಸಂಗ ಮಾಡತಕ್ಕ ವಿದ್ಯಾರ್ಥಿಗಳು ಮತ್ತು ವಿದ್ಯಾಬೋದನೆ ಮಾಡತಕ್ಕ ಪಂಡಿತವರ್ಗದವರು ಸಾಮರಸ್ಯದಿಂದ ಹೋಗಬೇಕು. ವಿದ್ಯಾರ್ಥಿಗಳನ್ನು ಒಂದು ಹತೋಟಿಯಲ್ಲಿರುವಂಥ ಜನ ಶೀಲವಂತರಾಗಬೇಕು, ಶ್ರದ್ಧಾವಂತರಾಗಬೇಕು, ನಿಷ್ಠಾವಂತರಾಗಬೇಕು. ಇದನ್ನು ಶಿಕ್ಷಣ ಮಂತ್ರಿಗಳು ಚೆನ್ನಾಗಿ ತಿಳಿಯಬೇಕು. ಶಿಕ್ಷಣದ ಮಟ್ಟದಲ್ಲಿ ಅನೇಕ ವಿಧವಾದ ಸಣ್ಣಪುಟ್ಟ ಕೆಲಸಗಳಿವೆ. ಬೇಕಾದಷ್ಟು ಆಗಬೇಕಾಗಿವೆ. ರಾಜ್ಯಪಾಲರು ಭಾಷಣದ ಮೇಲೆ ಮಾತನಾಡುತ್ತಾ ಎರಡು ವಿಷಯಗಳನ್ನು ಈ ಸಮಯದಲ್ಲಿ ಸರ್ಕಾರದವರು ಗಮನಕ್ಕೆ ತರಬೇಕೆಂದಿದ್ದೇನೆ. ಅದು ಒಂದು ಬಹಳ ಚಿಕ್ಕದಾದಂಥ ಕೆಲಸ. ಮೈಸೂರು ರಾಜ್ಯದಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆ ನಡೆಯುತ್ತಿದೆ 1963ನೇ ಇಸವಿಯಿಂದ ಹೊಸರೀತಿಯ ಪರೀಕ್ಷೆ ಹೊಸಯೋಜನೆಯ ಪ್ರಕಾರ ನಡೆಯುತ್ತಿದೆ, ಹೊಸರೀತಿಯಲ್ಲಿ ಪರೀಕ್ಷಕರನ್ನು ನೇಮಿಸುತ್ತಿದ್ದಾರೆ. ಪ್ರಶ್ನೆಪತ್ರಿಕೆಗಳನ್ನು ಕೊಡತಕ್ಕಂಥ ಮತ್ತು ಉತ್ತರ ಪತ್ರಿಗಳನ್ನು ವ್ಯಾಲ್ಯೂಯೇಷನ್ ಮಾಡುವ ಜನ ಏನಿದ್ದಾರೆ ಅವರಿಗೆ ಕೊಡಬೇಕಾದ ರೆಮ್ಯೂನರೇಷನ್ ವಿಚಾರವನ್ನು ಇವತ್ತಿನವರೆಗೂ ತೀರ್ಮಾನಮಾಡಲಿಲ್ಲ. 1963ನೇ ವರ್ಷದ ಪ್ರಶ್ನೆ ಪತ್ರಿಕೆ ತಯಾರು ಮಾಡುವ, ಉತ್ತರ ಪತ್ರಿಕೆಗಳನ್ನು ವ್ಯಾಲ್ಯುಮಾಡುವ ಜನಗಳಿಗೆ ಇನ್ನೂ ರೆಮ್ಯೂನರೇಷನ್ ಸಿಕ್ಕದೆ ಪುನಃ 1964ನೇ ಇಸವಿಯ ಪರೀಕ್ಷೆ ಬರುತ್ತಿದೆ. 1964ನೇ ಇಸವಿಯಲ್ಲಿ ನಡೆಯುವ ಪರೀಕ್ಷೆಯಲ್ಲಿ ಪರೀಕ್ಷಕರಿಗೆ ಏನು ಸಂಭಾವನೆ ದೊರೆಯುತ್ತದೆಂಬುದನ್ನು ಇನ್ನೂ ಅವರಿಗೆ ಗೊತ್ತಿಲ್ಲ. ಇಂತಹ ಪರಿಸ್ಥಿತಿ ಇರುವಾಗ ಆಡಳಿತ ಬಹಳ ಸುಸೂತ್ರವಾಗಿ ನಡೆಯುತ್ತಿದೆಯೆಂದು ಹೇಳುವುದರಲ್ಲಿ ಸ್ವಲ್ಪ ಸಂಶಯವಿದೆಯೆಂದು ನಾನು ಭಾವಿಸಿ ಕೊಂಡಿದ್ದೇನೆ. ಅದರ ಜೊತೆಗೆ ಮೊಟ್ಟಮೊದಲನೆಯದಾಗಿ ಇದಕ್ಕೆ ಸಂಬಂಧಪಟ್ಟಂತೆ ಒಂದು ಸ್ಟ್ಯಾಚೂಟರಿ ಬೋರ್ಡನ್ನು ರಚನೆ ಮಾಡಬೇಕು. ಬೊಂಬಾಯಿ ಸರ್ಕಾರದವರು ಈಗಾಗಲೇ ಎಸ್.ಎಸ್.ಎಲ್.ಸಿ. ಪರೀಕ್ಷೆಗಾಗಿ ಒಂದು ಬೋರ್ಡನ್ನು ರಚನೆಮಾಡಿದ್ದಾರೆ. ಇವತ್ತೂ ಇದರಿಂದ ಅವರು ಸ್ಥಾಪನೆ ಮಾಡಿದಂಥ ನಫೆಯಲ್ಲಿ 6 ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ಅವರ ಆಡಳಿತ ಶಾಖೆಯವರು ಅನೇಕ ಶಾಲಾಕಟ್ಟಡಗಳನ್ನು ಕಟ್ಟಿಕೊಟ್ಟಿದ್ದಾರೆ. ಅದರಿಂದ ಬರತಕ್ಕ ಉತ್ಪತ್ತಿಯನ್ನು ನೌಕರರುಗಳ ಸಂಬಳ ಸಾರಿಗೆಗಳಿಗಾಗಿ ವಿನಿಯೋಗ ಮಾಡುತ್ತಿದ್ದಾರೆ. ನಮ್ಮಲ್ಲಿ ಶಿಕ್ಷಣ ಶಾಖೆಗೆ ಪರೀಕ್ಷೆಗಳಿಂದ ಬರತಕ್ಕ ಶುಲ್ಕ ಏನಿದೆಯೋ ಅದನ್ನೆಲ್ಲಾ ಜನರಲ್ಲಿ ರೆವಿಇನ್ಯೂ, ಐಟಂಗೆ ತೆಗೆದುಕೊಳ್ಳುತ್ತಾರೆ. ರಕ್ಷಣ ಶಾಖೆಗೂ ನವ್ಯ ಶಾಖೆಗೂ ಒಂದು ರೀತಿಯ ಹೊಂದಾಣಿಕೆಯಿರಬೇಕು. ನಮ್ಮ ಮೈಸೂರು ರಾಜ್ಯದಲ್ಲಿ ಎಷ್ಟು ಸುಸೂತ್ರವಾಗಿ ಪರೀಕ್ಷೆ ಶಾಖೆ ಕೆಲಸ ಮಾಡಬೇಕೋ ಅಷ್ಟು ಮಾಡಲು ಅವಕಾಶ ದೊರಕಲಿಲ್ಲ. ಇದಕ್ಕಾಗಿ ಕೂಡಲೇ ಒಂದು ಸ್ಟಾಚೂಟರಿ ಬೋರ್ಡನ್ನು ರಚನೆ ಮಾಡುವುದು ಅತ್ಯಗತ್ಯವೆಂದು ನಾನು ಭಾವನೆ

ಮಾಡಿಕೊಂಡಿದ್ದೇನೆ. ಶಿಕ್ಷಣ ಸಚಿವರಾದ ಶ್ರೀಮಾನ್ ಕಂಠಿಯವರು ಕೆಲವು ವಿಚಾರಗಳನ್ನು ಇಟ್ಟುಕೊಂಡಿದ್ದಾರೆ. ಮೈಸೂರು ರಾಜ್ಯದಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಂಬಂಧಪಟ್ಟ ಹಾಗೆ ಸುಮಾರು 28 ಅಫಿಲಿಯೇಟ್ ಕಾಲೇಜುಗಳಿವೆ. ಕರ್ನಾಟಕ ಯೂನಿವರ್ಸಿಟಿಗೆ ಸಂಬಂಧಪಟ್ಟವಾಗೆ 18–19 ಅಫಿಲಿಯೇಟೆಡ್ ಕಾಲೇಜುಗಳಿವೆ. 1963–64ರಲ್ಲಿ ಇನ್ನೂ ಹೆಚ್ಚಾಗಿರಬಹುದು. ಇದಕ್ಕೆಲ್ಲಾ ಏಕರೂಪವಾದ ಸಹಾಯ ದ್ರವ್ಯವನ್ನು ಒದಗಿಸಬೇಕು. ಇಡೀ ಕರ್ನಾಟಕದಲ್ಲಿಯೇ ಏಕರೂಪವಾದ ಕಾನೂನು ಇರಬೇಕು ಎಂದು ಹೇಳುವಾಗ ಕಾಲೇಜುಗಳನ್ನು ನಡೆಸುವ ವಿಶ್ವವಿದ್ಯಾನಿಲಯಕ್ಕೆ ನಿಜವಾಗಿ ಏಕರೂಪವಾದ ಸಹಾಯ ದ್ರವ್ಯವನ್ನು ಕೊಡಬೇಕು ಎನ್ನುವುದು ನಿರ್ವಿವಾದವಾದ ವಿಷಯ. ಮೈಸೂರು ಯೂನಿವರ್ಸಿಟಿಗೆ ಒಂದು ರೀತಿ ಕರ್ನಾಟಕ ಯೂನಿವರ್ಸಿಟಿಗೆ ಇನ್ನೊಂದು ರೀತಿಯಾಗಿ ಸಹಾಯದ್ರವ್ಯ ಕೊಡಬಾರದು. ಅಫಿಲಿಯೇಟೆಡ್ ಕಾಲೇಜು ಮತ್ತು ಪ್ರೈವೇಟ್ ಕಾಲೇಜುಗಳ ಮ್ಯಾನೇಜ್‌ಮೆಂಟನ್ನು ಪ್ರತಿನಿಧಿಗಳು ಎಲ್ಲರೂ ಸೇರಿ ಏಕರೂಪತೆಯನ್ನು ಈಗಲೇ ಅನುಸರಿಸಬೇಕು ಮತ್ತು ಈಗ ಕೊಡತಕ್ಕ ಗ್ರಾಂಟ್–ಇನ್–ಏಡ್ ಮತ್ತು ಗ್ರಾಸ್ ಎಕ್ಸ್‌ಪೆಂಡಿಚರ್ ಮೇಲೆ ಕೊಡತಕ್ಕ ಗ್ರಾಂಟು ಇವೆರಡನ್ನು ಬಿಟ್ಟು ಬೊಂಬಾಯಿ ಪ್ರಾಂತದಲ್ಲಾ ಅಫಿಲಿಯೇಟೆಡ್ ಕಾಲೇಜುಗಳಿಗೆ ಗ್ರಾಂಟು ಕೊಡಲು ಯಾವ ನಿಯಮವನ್ನು ಹಾಕಿಕೊಂಡಿದ್ದಾರೋ ಅದನ್ನು ಅನುಸರಿಸಬೇಕೆಂದು ಸರ್ವಾನುಮತದಿಂದ ತೀರ್ಮಾನ ಮಾಡಿ ಆ ರೀತಿ ಒಂದು ನಿರ್ಣಯವನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟು ಒಂದೂವರೆ ವರ್ಷಗಳಾಗಿವೆ. ಈ ಸಭೆಯಲ್ಲೂ ಈ ವಿಷಯ ಎರಡು ಮೂರು ಸಾರಿ ಚರ್ಚೆಯಾಗಿದೆ. ಆದರೆ ಸಹಾಯ ದ್ರವ್ಯದಲ್ಲಿ ಏಕರೂಪವಾದ ಕಾನೂನಾಗಲೀ ಸರ್ಕಾರದ ಹುಕುಂ ಆಗಲೀ ಇದುವರೆಗೂ ಬರಲಿಲ್ಲ. ಇಂತಹ ಸಣ್ಣಪುಟ್ಟ ಕೆಲಸಗಳು ವಿಶೇಷವಾಗಿ ಶಿಕ್ಷಣ ಶಾಖೆಯಲ್ಲಿ ಉಳಿದಿವೆ. ಇವನ್ನು ಜಾಗ್ರತೆಯಾಗಿ ತೀರ್ಮಾನ ಮಾಡಿದರೆ ಬಹಳ ಒಳ್ಳೆಯದಾಗುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸಮಾಡುವ ಜನಗಳಿಗೆ ಸಕಾಲದಲ್ಲಿ ಒಂದು ಉತ್ತೇಜನ ದೊರೆತರೆ ಶಿಕ್ಷಣ ಸುಗಮವಾಗಿ ನಡೆಯುತ್ತದೆ. ಗ್ರಾಸ್‌ಎಕ್ಸಪೆಂಡಿಚರ್‌ನಲ್ಲಿ ಶೇ. 33ರಷ್ಟು ಮಹಾರಾಷ್ಟ್ರ ಸರ್ಕಾರದವರು ಕೊಡುತ್ತಾರೆ. ನಮ್ಮ ರಾಜ್ಯ ಸರ್ಕಾರ ಆರ್ಥಿಕ ಸಹಾಯವನ್ನು ಶೇ. 30ರಷ್ಟು ಕೊಡಬೇಕೆಂದು ತೀರ್ಮಾನಮಾಡಿ ಈಗ ಆ ಬಗ್ಗೆ ಶಿಫಾರಸ್ಸು ಮಾಡಿದ್ದಾರೆ. ಇವನ್ನು ಈ ಸರಕಾರದವರು ಒಪ್ಪಿಕೊಂಡರೆ ಇದರ ಮೇಲೆ ಏನು ಈಗ ವೆಚ್ಚಮಾಡುತ್ತಿದ್ದಾರೋ ಅದಕ್ಕಿಂತಲೂ ಹೆಚ್ಚಿಗೆ ವೆಚ್ಚವಾಗಲಾರದು. ಇದನ್ನು ಜಾಗ್ರತೆ ಕೊಟ್ಟರೆ ಪ್ರೈವೇಟ್ ಮ್ಯಾನೇಜ್‌ಮೆಂಟಿನವರು ಯಾರು ಇದ್ದಾರೆಯೋ ಅವರಿಗೆ ಸಂತೋಷ, ಉತ್ತೇಜನ ಸಿಕ್ಕಿದಂತಾಗುತ್ತದೆಂದು ಮಾತ್ರ ನಾನು ಹೇಳುತ್ತಿದ್ದೇನೆ.

ಇನ್ನು ಮೈಸೂರು ಯೂನಿವರ್ಸಿಟಿಗೆ ಸಂಬಂಧಪಟ್ಟ ಹಾಗೆ ಸೆಂಟ್ರಲ್ ಕಾಲೇಜಿನಲ್ಲಿ ಇದ್ದಕ್ಕಿದ್ದ ಹಾಗೆ ಸ್ನಾತಕೋತ್ತರ ಶಿಕ್ಷಣದ ಬಗ್ಗೆ ಕೆಲವರು ಡಿಗ್ರಿಕೋರ್ಸುಗಳು ಸೃಷ್ಟಿ ಯಾವುದು. ಇದರಲ್ಲಿ ಫಂಡಮೆಂಟಲ್, ಸೈನ್ಸ್, ಫಿಜಿಕಲ್ ಸೈನ್ಸ್, ನ್ಯಾಚುರಲ್ ಸೈನ್ಸ್, ಎಂ.ಎ. ಮತ್ತು ಎಂ.ಎಸ್.ಸಿ. ಡಿಗ್ರಿ ಕೋರ್ಸುಗಳಲ್ಲಿ ವಿದ್ಯಾರ್ಥಿಗಳನ್ನು ತಯಾರು ಮಾಡಲು ತರಗತಿಗಳನ್ನು ತೆಗೆದರು. ಅವನ್ನು ತೆರೆದಾಗ ಅನೇಕ ವಿದ್ಯಾರ್ಥಿಗಳು ಮುಂದೆ ಬಂದರು. ಬೆಂಗಳೂರಿನಲ್ಲಿ ಅಂತಹ ಅರ್ಹತೆ ಹೊಂದಿರುವವರು ಅನೇಕರಿದ್ದಾರೆ. ಆದರೆ ಎಲ್ಲಾ ಶಿಕ್ಷಣದಲ್ಲೂ ಸ್ನಾತಕೋತ್ತರ ಶಿಕ್ಷಣ ಇರಬೇಕೆಂಬುದೇ ನಿರ್ವಿವಾದವಾದ

ವಿಷಯ. ಸೈನ್ಸ್ ಪಾಠಗಳನ್ನು ಉನ್ನತಮಟ್ಟದಲ್ಲಿ ಹೇಳಿಕೊಡುವುದು ಯೋಗ್ಯವಾದುದು ಮತ್ತು ಸರ್ಕಾರಕ್ಕೆ ಅಭಿನಂದನೀಯವಾದುದು. ಸರ್ಕಾರ ಈ ಶಿಕ್ಷಣಕ್ಕೆ ಬೇಕಾದ ಪಾಠಪ್ರವಚನಗಳನ್ನು ಯೋಗ್ಯವಾದ ಜನಗಳಿಂದ, ಸಮರ್ಥರಾಗಿರತಕ್ಕವರಿಂದ, ಪರಿಣಿತರಾಗಿರತಕ್ಕವರಿಂದ ಮಾಡಿಸಬೇಕು. ಅಂತಹ ಜನಗಳನ್ನು ಬೋಧಕರನ್ನಾಗಿ ನೇಮಿಸಬೇಕು. ಬಿ.ಎ, ಬಿ.ಎಸ್ಸಿ, ಬಿ.ಇ. ಪಾಸ್ ಆಗಿರುವವರನ್ನು ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಂಡು ಹಾಕಿದರೆ ಯಾವ ರೀತಿ ಅವರಿಗೆ ಸ್ಟಾಂಡರ್ಡ್‌ನ್ನು ಮೆಂಟೇನ್ ಮಾಡುವುದಕ್ಕೆ ಸಾಧ್ಯವಾದೀತು. ಅಂತಹ ನಮ್ಮ ವಿದ್ಯಾರ್ಥಿಗಳು ಇಡೀ ಭಾರತ ಖಂಡದ ಯಾವ ಮೂಲೆಗೆ ಹೋಗಿ ವಿದ್ಯಾರ್ಜನೆ ಮಾಡಬಹುದಾದರೂ ಅವರಿಂದ ಯಾವ ರೀತಿ ಪ್ರಯೋಜನವಾದೀತೆಂದು ನಾನು ಕೇಳುತ್ತೇನೆ. ಇದು ಅರ್ಥವತ್ತಾದ ಮಾತೆಂದು ನಾನು ಕೇಳುತ್ತೇನೆ. ಅಲ್ಲದೆ ಶಾಸ್ತ್ರವ್ಯಾಸಂಗ ಹೆಚ್ಚಿಗೆ ಮಾಡದೆ ಇರತಕ್ಕ ಅನುಭವ ಇಲ್ಲದೆ ಇರತಕ್ಕ ಮತ್ತು ಸಾಮರ್ಥ್ಯ ಸಾಕಷ್ಟು ಇಲ್ಲದೆ ಇರತಕ್ಕ ಜನರನ್ನು ತಂದು ಇಲ್ಲಿ ಹಾಕಿದರೆ ಎಷ್ಟರ ಮಟ್ಟಿಗೆ ಈ ಶಿಕ್ಷಣ ಕ್ಷೇತ್ರದಲ್ಲಿ ಪ್ರಯೋಜನವಾದೀತೆಂದು ಕೇಳುತ್ತೇನೆ.

ಕೆಲವು ಪೋಸ್ಟುಗಳನ್ನು ಬದಲಾವಣೆ ಮಾಡಿದರು. ಕೆಲವರು ಸೀನಿಯರ್ ಲೆಕ್ಚರರ್ ಆಗಿರುವವರು ರೀಡರ್ಸ್ ಆಗಬೇಕು. ರೀಡರ್ಸ್ ಆಗಿರುವವರು ಪ್ರೊಫೆಸರ್ ಆಗಬೇಕು. ಅಂಥಾ ಸಂದರ್ಭದಲ್ಲಿ ಪ್ರೊಫೆಸರ್ ಪ್ಲೇಸನ್ನೂ ಮತ್ತು ರೀಡರ್ಸ್ ಪ್ಲೇಸನ್ನೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗಾವಣೆ ಮಾಡಿದರು. ಆ ಪೈಕಿ ಎಕನಾಮಿಕ್ಸ್ ಮತ್ತು ಮ್ಯಾಥ್‌ಮ್ಯಾಟಿಕ್ಸ್ ಪ್ಲೇಸುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗಾವಣೆ ಮಾಡಿದರು. ಎಲ್ಲೆಲ್ಲಿ ವರ್ಗಾವಣೆ ಮಾಡಬೇಕಾಗಿತ್ತೋ ಆಯಾ ಸ್ಥಳಗಳಲ್ಲಿ ವರ್ಗಾವಣೆ ಮಾಡಿದರು. ಯಾರು ಯಾರು ಎಲ್ಲೆಲ್ಲಿ ಇರಬೇಕಾಗಿತ್ತೋ ಅವರನ್ನು ಉಳಿಸಿಕೊಂಡರು. ಯಾರು ಸಮರ್ಥರಾಗಿ ಅನುಭವಿಗಳಾಗಿದ್ದು ಸುಮಾರು 23 ವರ್ಷಗಳ ಕಾಲ ಲೆಕ್ಚರರ್ ಆಗಿ ಕೆಲಸ ಮಾಡಿದವರನ್ನು ಹಿಂದಕ್ಕೆ ಹಾಕಿದ್ದಾರೆ. ಈ ವಿಷಯದಲ್ಲಿ ನಾನು ಒಂದು ಮಾತನ್ನು ಹೇಳುತ್ತೇನೆ. ಹಿಸ್ಟರಿ ಲೆಕ್ಚರರ್ ಆಗಿದವರೊಬ್ಬರಿಗೆ ಸುಮಾರು 23 ವರ್ಷ ಸರ್ವೀಸ್ ಆಗಿತ್ತು. ಅವರನ್ನು ತುಮಕೂರಿಗೆ ವರ್ಗ ಮಾಡಿದರು. ಎಕನಾಮಿಕ್ಸ್ ರೀಡರ್ಸ್ ಪೋಸ್ಟ್ ಮತ್ತು ಮ್ಯಾಥಮ್ಯಾಟಿಕ್ಸ್ ರೀಡರ್ ಪೋಸ್ಟ್‌ನ್ನು ಚಿತ್ರದುರ್ಗದಲ್ಲಿ ಇದ್ದದ್ದನ್ನು ಬೆಂಗಳೂರಿಗೆ ಬದಲಾವಣೆ ಮಾಡಿದರು. ಆ ಹಿಸ್ಟರಿ ಲೆಕ್ಚರರ್ ಆಗಿದ್ದವರು ಹೇಳುತ್ತಾರೆ ನಾನು ಎರಡು ವರ್ಷಕಾಲ ಸ್ನಾತಕೋತ್ತರ ಶಿಕ್ಷಣ ವಿಭಾಗದಲ್ಲಿ ಪಾಠವನ್ನು ಬೋಧನೆ ಮಾಡುತ್ತಿದ್ದೇನೆ. ದೊಡ್ಡ ಕೆಲಸವನ್ನು ಮಾಡಬೇಕೆಂಬ ಆಸೆ ನನಗೆ ಇದೆ, ಉತ್ಸಾಹ ಇದೆ. ಭಗವಂತ ನನಗೆ ಶಕ್ತಿಯನ್ನು ಕೊಟ್ಟಿದ್ದಾನೆ. ನನಗೆ ರೀಡರ್‌ಷಿಪ್ ಹೋದರೂ ಹೋಗಲಿ ನಾನು ಇಲ್ಲಿಯೇ ಇರುತ್ತೇನೆ ಎಂದು ಹೇಳುತ್ತಾರೆ. ಅದಕ್ಕೆ ಸರ್ಕಾರದವರು ಏನು ಹೇಳುತ್ತಾರೆಂದರೆ 23 ವರ್ಷಗಳು ಸರ್ಕಾರದಲ್ಲಿ ಕೆಲಸ ಮಾಡಿದ್ದೀರಿ ಎಂದು ಹೇಳುತ್ತೀರಿ. ಆದ್ದರಿಂದ ನಿಮ್ಮನ್ನು ಲೆಕ್ಚರರ್ ಆಗಿ ಇಲ್ಲಿ ಇಡುವುದಕ್ಕೆ ಸಾಧ್ಯವಿಲ್ಲ. ರೀಡರ್‌ಷಿಪ್ ಕೊಡುವುದಕ್ಕೆ ಎಂದು ಹೇಳುತ್ತಾರೆ. ಈ ರೀತಿ ಸರ್ಕಾರದಲ್ಲಿ ನಡೆಯುತ್ತಿದೆ. ಆದ್ದರಿಂದ ಶಿಕ್ಷಣ ಸುಗಮವಾಗಿ ನಡೆದುಕೊಂಡು ಹೋಗುವುದಕ್ಕೆ ಶಿಕ್ಷಣ ಸಂಸ್ಥೆಗಳು ಚೆನ್ನಾಗಿ ನಡೆದುಕೊಂಡು ಹೋಗುವುದಕ್ಕೋಸ್ಕರ ಸರ್ಕಾರ ಪ್ರೋತ್ಸಾಹ ಮಾಡಬೇಕಾದ್ದು ಅತ್ಯಗತ್ಯ. ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್

ಅವರು ರೀಡರ್‌ಷಿಪ್ ಅನ್ನೂ ಇಟ್ಟುಕೊಳ್ಳುತ್ತೇನೆ, ಅವರನ್ನೂ ಇಟ್ಟುಕೊಳ್ಳುತ್ತೇನೆ ಎಂದು ಹೇಳುತ್ತಾರೆ. ಕೋಲಿಜಿಯೇಟ್ ಡೈರೆಕ್ಟರು ಮತ್ತು ಸೆಕ್ರೆಟೇರಿಯಟ್ ಕ್ಲಾರ್ಕ್ ಅದು ಬೇಡ ಎಂದು ಹೇಳುತ್ತಾರೆ. ಮಂತ್ರಿಗಳು ಸೆಕ್ರೆಟೇರಿಯಟ್ ಕ್ಲಾರ್ಕ್ ಹೇಳಿದ್ದನ್ನು ಒಪ್ಪಿ ಆಡಳಿತವನ್ನು ನಡೆಸಿದ ಪಕ್ಷದಲ್ಲಿ ಶಿಕ್ಷಣ ಇಲಾಖೆಯಲ್ಲಿ ಇಂಥಾ ಸಣ್ಣಮಟ್ಟ ಸಮಸ್ಯೆಗಳು ಹಲವಾರು ಇವೆ. ಅವುಗಳನ್ನು ಮಾನ್ಯ ಶಿಕ್ಷಣ ಮಂತ್ರಿಗಳು ಗಮನಿಸಬೇಕಾದ್ದು ಅಗತ್ಯ ಎಂದು ನಾನು ತಿಳಿದುಕೊಂಡಿದ್ದೇನೆ.

ಆಮೇಲೆ ಬೆಂಗಳೂರಿನಲ್ಲಿ ಲಾ ಕಾಲೇಜು ಇದೆ. ಇದರಲ್ಲಿ ಈಗ್ಗೆ 5 ವರ್ಷಗಳ ಹಿಂದೆ ಮಾಸ್ಟರ್ ಡಿಗ್ರಿ ಇನ್ ಲಾ ಎಂದು ಪ್ರಾರಂಭ ಮಾಡಿದ್ದಾರೆ. ಮಾಸ್ಟರ್ ಡಿಗ್ರಿಗೆ ಶಿಕ್ಷಣವನ್ನು ಕೊಡಬೇಕಾಗಿದ್ದರೆ ಇದರಲ್ಲಿ ನುರಿತವರಾಗಿರಬೇಕು. ಅನುಭವಿಗಳಾಗಿರತಕ್ಕವರು ಆಗಿರಬೇಕು ಅಥವಾ ಸರ್ಕಾರದ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿದ್ದು ನಿವೃತ್ತರಾಗಿದ್ದವರು ಅವರಿಗೆ ಶಿಕ್ಷಣವನ್ನು ಕೊಡಬಹುದು ಅಥವಾ ಶಾಸ್ತ್ರಗಳಲ್ಲಿ ವಿಫುಲವಾದ ಜ್ಞಾನವನ್ನು ಪಡೆದಿರತಕ್ಕವರು ಶಿಕ್ಷಣವನ್ನು ಕೊಡಬಹುದು. ಇದಕ್ಕೆ ಏನು ಮಾಡಿದರು ಎಂದರೆ ಫುಲ್‌ಟೈಮ್ ಉಪಾಧ್ಯಾಯರನ್ನು ನೇಮಕ ಮಾಡಿದರೆ ಯಾರು ಬರುವುದಿಲ್ಲ ಎಂದು ಒಬ್ಬರನ್ನು ಪಾರ್ಟ್‌ಟೈಮ್ ಅಸಿಸ್ಟೆಂಟ್ ಪ್ರೊಫೆಸರ್ ಎಂದು ನೇಮಕ ಮಾಡಿಕೊಂಡಿದ್ದಾರೆ. ಏತಕ್ಕೆಂದರೆ 500–600–700–800 ರೂಪಾಯಿಗಳ ಸಂಬಳಕ್ಕೆ ಯಾವ ನ್ಯಾಯವಾದಿ ತಾನೆ ಫುಲ್‌ಟೈಮ್ ವರ್ಕರ್ ಆಗಿ ಲಾ ಕಾಲೇಜಿನಲ್ಲಿ ಕೆಲಸ ಮಾಡಲು ಬರುತ್ತಾರೆ? ಇದರ ಸಂಬಂಧದಲ್ಲಿ ಶಿಕ್ಷಣ ಇಲಾಖೆಯವರು ಏನೊಂದು ಸರ್ಕ್ಯುಲರ್ ಹೊರಡಿಸಿದ್ದರು ಎಂಬುದನ್ನು ನಾನು ತಿಳಿದುಕೊಂಡಿದ್ದೇನೆ. 55 ವರ್ಷದಿಂದ 58 ವರ್ಷಗಳ ವಯಸ್ಸಿನವರನ್ನು ಮಾತ್ರ ಆ ಕೆಲಸಕ್ಕೆ ನೇಮಿಸಿಕೊಳ್ಳುತ್ತೇವೆಂದರೆ, ಯಾವ ವಿಶ್ವವಿದ್ಯಾನಿಲಯದಲ್ಲೂ ಕೂಡ ಇಂಥ ಪದ್ಧತಿಯನ್ನು ಅನುಸರಿಸುತ್ತಿಲ್ಲ. 50 ವರ್ಷಗಳಾಗಲೀ 60 ವರ್ಷವಾಗಲೀ ಅಥವಾ 70 ವರ್ಷವಾಗಲೀ ನಮಗೆ ಬೇಕಾಗಿರತಕ್ಕದ್ದು ಅವರಿಗೆ ಮೇಧಾಶಕ್ತಿ ಇದ್ದಿರಬೇಕು, ಬೋಧನಾಶಕ್ತಿ ಇದ್ದಿರಬೇಕು. ಅಂಥಾ ಒಂದು ಯೋಗ್ಯತೆಯನ್ನು ಸಂಪಾದನೆ ಮಾಡಿರಬೇಕೆಂದು, ಆದ್ದರಿಂದ ಈಗ ಲಾ ಕಾಲೇಜಿನಲ್ಲಿ ಬೋಧನೆ ಮಾಡುವುದಕ್ಕೆ ಪಾರ್ಟ್‌ಟೈಮ್ ಪ್ರೊಫಸರ್ ಮತ್ತು ಅಸಿಸ್ಟೆಂಟ್ ಪ್ರೋಫೆಸರುಗಳನ್ನು ನೇಮಕ ಮಾಡಬಾರದು. ಯಾರು ಇದನ್ನು ಸೆಲೆಕ್ಟ್ ಮಾಡಿದ್ದಾರೆ. ಯಾವ ರೀತಿ ಇದನ್ನು ಮಾಡಿದ್ದಾರೆ ಎಂಬುದನ್ನು ಪರಿಶೀಲನೆ ಮಾಡಿ ಅದನ್ನು ಸರಿಪಡಿಸಬೇಕು. ಯಾವ ಕ್ಷೇತ್ರದಲ್ಲಿ ಯಾರಿಗಾದರೂ ಯಾವ ಕೆಲಸಗಳನ್ನು ಕೊಟ್ಟರೂ ಆಗುತ್ತದೆ. ಆದರೆ ಶಿಕ್ಷಣ ವೈದ್ಯಕೀಯ ಕ್ಷೇತ್ರದಲ್ಲಿ ಮಾತ್ರ ಅರ್ಹರಾದವರಿಗೆ ಕ್ವಾಲಿಫಿಕೇಷನ್ ಇರುವವರಿಗೆ ಯೋಗ್ಯತೆ ಇರತಕ್ಕಂಥವರಿಗೆ ಕೆಲಸಗಳನ್ನು ಕೊಡಬೇಕು. ಮುಂದಿನ ಜನಾಂಗವನ್ನು ಉಳಿಸುವವರು, ಆಳಿಸುವವರು ಆರೋಗ್ಯ ಇಲಾಖೆಯವರು ಮತ್ತು ಶಿಕ್ಷಣ ಇಲಾಖೆಯವರು. ಆದ್ದರಿಂದ ಶಿಕ್ಷಣ ಕ್ಷೇತ್ರದಲ್ಲಿ ಮತ್ತು ವೈದ್ಯಕೀಯ ಕ್ಷೇತ್ರದಲ್ಲಿ ಮಾತ್ರ ಸಂಪೂರ್ಣವಾಗಿ ಯಾರಿಗೆ ಶಾಸ್ತ್ರಜ್ಞಾನ ಇದೆ, ಯಾರಿಗೆ ಮೇಧಾಶಕ್ತಿ ಇದೆ, ಯಾರು ಮುಂದಿನ ಪೀಳಿಗೆಯನ್ನು ಚೆನ್ನಾಗಿ ಉಳಿಸಿ ಯಾರು ತಮ್ಮ ವಿದ್ಯೆಯನ್ನು ಇನ್ನೊಬ್ಬರಿಗೆ ಧಾರೆ ಎರೆಯಿರುತ್ತಾರೆಯೋ ಅಂಥವರನ್ನು ಆ ಕೆಲಸಗಳಿಗೆ ನೇಮಿಸಬೇಕು ಎಂದು ನಾನು ಈ ಸಮಯದಲ್ಲಿ ಕಳಕಳಿಯಿಂದ ನಿವೇದನೆ ಮಾಡಿಕೊಳ್ಳುತ್ತೇನೆ. ಕರ್ನಾಟಕ ಏಕೀಕರಣದಲ್ಲಿ

ಅಭಿಮಾನವುಳ್ಳವನು ನಾನು. ಇದರಲ್ಲಿ ಒಂದು ವಿಷಯ ನನಗೆ ಬಹಳ ಸಂತೋಷವಾಯಿತು. ಅದು ಏನೆಂದರೆ ಶ್ರೀಮಾನ್ ಕಂಠಿಯವರು ಸುಮಾರು ಒಂದೂ ಅಥವಾ ಒಂದೂವರೆ ವರ್ಷದಲ್ಲಿ ಬೆಂಗಳೂರಿನಲ್ಲಿ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡಬೇಕೆಂದು ಪ್ರಯತ್ನ ನಡೆಸುತ್ತಿರುವುದು. ಇದು ವಿಶೇಷವಾಗಿ ಅಭಿನಂದನೀಯವಾದ ವಿಷಯ. ಈ ಕನ್ನಡ ನಾಡಿನ ಕೇವಲ ಬೆಂಗಳೂರು ಮಂದಿ ಮಾತ್ರವಲ್ಲ. ಇಡೀ ಭರತ ಖಂಡದ ಜನ ಈ ವಿಶ್ವವಿದ್ಯಾನಿಲಯ ಸ್ಥಾಪನೆಗಾಗಿ, ಈ ವಿಶ್ವವಿದ್ಯಾನಿಲಯ ಕನ್ನಡ ಜನತೆಗೆ ಸಹಾಯವನ್ನು ಮಾಡಿ, ಇಡೀ ಭರತ ಖಂಡದ ಸೇವೆಯನ್ನು ಸಲ್ಲಿಸಿದ್ದಾದರೆ ಇಡೀ ಭರತ ಖಂಡದ ಕೃತಜ್ಞತೆಗೆ ಪಾತ್ರರಾಗುತ್ತಾರೆ. ಇಂಥ ದೊಡ್ಡ ಕೆಲಸವನ್ನು ಮಾಡಿದ್ದಾರೆ ಶಿಕ್ಷಣ ಶಾಖೆಯಲ್ಲಿ ಅಲ್ಪಸ್ವಲ್ಪ ಸಮಸ್ಯೆಗಳಿದ್ದರೂ ಕೂಡ ಅದನ್ನು ಮುಚ್ಚತಕ್ಕ ಕೆಲಸವಾಗಿದೆ, ಇದು ಶಿಕ್ಷಣ ಶಾಖೆಯಲ್ಲಿರುವ ಸಮಸ್ಯೆಗಳನ್ನು ಹಾಗೆಯೇ ಬಿಡಬೇಕೆಂದು ನಾನು ಹೇಳುತ್ತಿಲ್ಲ. ಅದನ್ನು ಜಾಗ್ರತೆಯಾಗಿ ಪರಿಹಾರ ಮಾಡಬೇಕು. ಇದು ಬಹಳ ಯೋಗ್ಯವಾಗಿರತಕ್ಕ ವಿಷಯ.

ಬೆಂಗಳೂರು ನಗರದಲ್ಲಿ ಏಕೆ ವಿಶ್ವವಿದ್ಯಾನಿಲಯವಾಗಬೇಕು ಎನ್ನುವ ಪ್ರಶ್ನೆಯನ್ನು ಕೇಳುವವರಿದ್ದಾರೆ. 50 ವರ್ಷಗಳ ವಿಶ್ವವಿದ್ಯಾನಿಲಯಗಳ ಚರಿತ್ರೆಯಲ್ಲಿ ಅನೇಕ ವಿಧವಾದ ಬದಲಾವಣೆಗಳಾಗಿವೆ. ಅನೇಕ ವಿಧವಾದ ತಜ್ಞರ ಸಮಿತಿಗಳಾಗಿವೆ. ಮೊಟ್ಟಮೊದಲು ನಮ್ಮ ಇಂಡಿಯಾ ದೇಶದಲ್ಲಿ ಅಫ್ಲಿಯೇಂಟಿಂಗ್ ಟೈಪ್ ಆಫ್ ಯೂನಿವರ್ಸಿಟಿಸ್ ಆದದ್ದು 1915–16 ರಲ್ಲಿ, ಈ ತರಹ ಯೂನಿವರ್ಸಿಟಿಗಳು ಯೂನಿಟರಿ ಟೈಪ್ ಅಫ್ ಯೂನಿವರ್ಸಿಟಿಸ್, ರೆಸಿಡೆನ್ಷಿಯಲ್ ಟೈಪ್ ಆಫ್ ಯೂನಿವರ್ಸಿಟಿಸ್, ಟೀಚಿಂಗ್ ಟೈಪ್ ಅಫ್ ಯೂನಿವರ್ಸಿಟಿಸ್ ಆಗಬೇಕು ಎನ್ನತಕ್ಕ ಅಭಿಪ್ರಾಯ ಶಿಕ್ಷಣ ತಜ್ಞರಲ್ಲಿತ್ತು. ಈ ದೆಸೆಯಿಂದ ಆಲಿಘರ್‌ನಲ್ಲಿ ಮುಸ್ಲಿಂ ವಿಶ್ವವಿದ್ಯಾನಿಲಯ ವಾರಣಾಸಿಯಲ್ಲಿ ಹಿಂದು ವಿಶ್ವವಿದ್ಯಾನಿಲಯ, ಮೈಸೂರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಟೀಚಿಂಗ್ ಯೂನಿವರ್ಸಿಟಿ ಆಗಿ ಯೂನಿಟರಿ ಟೈಪ್ ಆಫ್ ಯೂನಿವರ್ಸಿಟಿಸ್ ಆದುವು. ಕೆಲವು ಯೂನಿವರ್ಸಿಟಿಗಳು ಟೀಚಿಂಗ್ ಮತ್ತು ಅಫ್ಲಿಯೇಟಿಂಗ್ ಎರಡು ರೀತಿಯೂ ಆದುವು. ಈ ಐವತ್ತು ವರ್ಷಗಳ ಕಾಲದ ಚರಿತ್ರೆಯನ್ನು ನಾವು ನೋಡಿದರೆ 1902ನೇ ಮೇ 13ನೇ ತಾರೀಖು ಲಾರ್ಡ್‌ಕರ್ಜನ್ ಇಂಟರ್ ಯೂನಿವರ್ಸಿಟಿ ಚಾರ್ಟರ್ ಕಟ್ಟಬೇಕೆನ್ನುವ ಉದ್ದೇಶ ಮಾಡಿ ಸಿಮ್ಲಾದಲ್ಲಿ ಸ್ಥಾಪನೆ ಮಾಡಿದ. ಆಗ ಆತ ಏನು ಹೇಳಿದನೆಂದರೆ ಇನ್ ದಿ ಯೂನಿವರ್ಸಿಟಿಸ್ ಹಟ್ ಕೆಕ್ಸಿಸ್ಟ್ ಇನ್ ಅವರ್ ಕಂಟ್ರಿ ದಿ ಗ್ರೇನ್ ಈಸ್ ಕೆಪ್ಟ್ ಔಟ್ ಇಟ್ ಈಸ್ ದಿ ಹಸ್ಕ್ ದಟ್ ಈಸ್ ಬೀಯಿಂಗ್ ಯೂಸ್ಡ್ ಎಂದರೆ ಮೇಲಿನ ಹೊಟ್ಟನ್ನು ಮಾತ್ರ ನಾವು ಉಪಯೋಗ ಮಾಡಿಕೊಂಡು ಒಳಗಿರುವ ಸಂಪೂರ್ಣವಾದ ಕಾಳನ್ನೂ ಹೊರಗೆ ಹಾಕುತ್ತಿದ್ದೇವೆ. ಇದನ್ನು ಹೇಳಿದಾಗ ಪ್ರತಿಯೊಂದು ವಿಶ್ವವಿದ್ಯಾನಿಲಯದಲ್ಲಿಯೂ ಕೂಡ ಆಯಾಯ ಪರಿಸ್ಥಿತಿಗೆ ತಕ್ಕಂತೆ ಅಲ್ಲಿರುವ ಗುಣಕ್ಕೆ ತಕ್ಕಂತೆ ಇಡೀ ರಾಷ್ಟ್ರದ ಅಭಿವೃದ್ಧಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಸತ್ವಪೂರ್ಣವಾಗಿ ಬೆಳೆಸಿಕೊಂಡು ಬರಬೇಕು. ಪ್ರೊಟೋಟೈಪ್ ಎಂದರೆ ಬ್ರಿಟಿಷ್ ಯೂನಿವರ್ಸಿಟಿ ಮಾದರಿಯ ಮೇಲೆ ಮಾಡಬೇಕು ಎಂದು ಅರ್ಥವಲ್ಲ ಎಂದು ಮಾತನಾಡಿದ್ದು ಇವತ್ತೂ ಅರ್ಥವತ್ತಾಗಿದೆ. ಫೆಡರಲ್ ಟೈಪ್

ವಿಶ್ವವಿದ್ಯಾನಿಲಯ ಬೆಂಗಳೂರಿನಲ್ಲಿ ಮಾಡಬೇಕೆಂದು ಯೋಚಿಸಿದ್ದು ಯೋಗ್ಯವಾದುದು. ಇಂಥದ್ದು ಎಲ್ಲಿದೆ ಎಂದರೆ ಅಲ್ಪಸ್ವಲ್ಪವಾದ ರೂಪದಲ್ಲಿ ಡೆಲ್ಲಿಯಲ್ಲಿದೆ. ಇನ್ನು ಯಾವ ಭಾಗದಲ್ಲಿಯೂ ಕೂಡ, ಇಂಡಿಯಾ ದೇಶದಲ್ಲಿ ಫೆಡರಲ್ ಟೈಪ್ ಇಲ್ಲ. ಬೊಂಬಾಯಿಯಲ್ಲಿ ಫೆಡರಲ್ ಟೈಪ್ ಯೂನಿವರ್ಸಿಟಿಯನ್ನು ಅಲ್ಲಿರುವ ವಿಶ್ವವಿದ್ಯಾನಿಲಯಕ್ಕೆ ಅಲ್ಲಿರುವ ಕಾಲೇಜುಗಳಿಗೆ ಅಲ್ಲಿ ಬೆಳೆದು ಬಂದಿರುವ ಸಂಪ್ರದಾಯಕ್ಕೆ ಅನುಸರಿಸಿಕೊಂಡು ಬದಲಾವಣೆಯನ್ನು ಮಾಡಬೇಕೆಂಬ ಪ್ರಯತ್ನ ಬೊಂಬಾಯಿನಲ್ಲಿ ನಡೆಯುತ್ತಿದೆ. ಇಂಡಿಯಾ ದೇಶದ ಹೊರಗಡೆ ನೋಡಿದರೆ ಲಂಡನ್ ಆಕ್ಸ್‌ಫರ್ಡ್ ಕೇಂಬ್ರಿಡ್ಜ ಡೆರ್ಹಾನ್ ಫಡರಲ್ ಯೂನಿವರ್ಸಿಟಿಯಾಗಿವೆ. ಆ ಯೂನಿವರ್ಸಿಟಿ ಎನ್ನತಕ್ಕ ಸಂಸ್ಥೆಗೆ ಕಾಲೇಜುಗಳೆಲ್ಲವೂ ಒಂದು ಕ್ಷೇತ್ರದಲ್ಲಿದ್ದು ಆ ಕಾಲೇಜುಗಳಲ್ಲಿ ಸ್ಟ್ಯಾಂಡರ್ಡ್ ಮೆಂಟೇನ್ ಮಾಡುವುದಕ್ಕೆ ಅಲ್ಲಿನ ವಿದ್ಯಾರ್ಥಿಗಳನ್ನು ಪರೀಕ್ಷೆ ಮಾಡುವುದಕ್ಕೆ ಅವರ ಮೇಲೆ ಅಧಿಕಾರವನ್ನಿಟ್ಟುಕೊಂಡಿರುವುದಕ್ಕೆ ಇರತಕ್ಕ ಸಂಬಂಧವೇನಿದೆ, ಅಫ್ಲಿಯೇಟಿಂಗ್ ಯೂನಿವರ್ಸಿಟಿಗಳಲ್ಲಿರತಕ್ಕ ಸಂಬಂಧ ಫೆಡರಲ್ ಯೂನಿವರ್ಸಿಟಿಗಳಲ್ಲಿರುವುದಿಲ್ಲ. ಇದರಲ್ಲಿ ವಿಶಿಷ್ಟವಾಗಿರತಕ್ಕ ರೀತಿ ಏನು ಎಂದರೆ ಎಲ್ಲ ಕಾಲೇಜುಗಳೂ ಸೇರಿ ಯೂನಿವರ್ಸಿಟಿಯಾಗುತ್ತದೆ. ಆದುದರಿಂದಲೇ ಸಂಯುಕ್ತ ನಮೂನೆಯ ವಿಶ್ವವಿದ್ಯಾನಿಲಯ ಅಫ್ಲಿಯೇಟಿಂಗ್ ಯೂನಿವರ್ಸಿಟಿಯಲ್ಲಿರುವ ಕಾಲೇಜು ಮತ್ತು ವಿಶ್ವವಿದ್ಯಾನಿಲಯ ಸಂಬಂಧವೇನಿದೆ, ಸ್ವಾಮಿ ಭೃತ್ಯದ ಸಂಬಂಧವೇನಿದೆ ಅದು ಈ ವಿಶ್ವವಿದ್ಯಾನಿಲಯದಲ್ಲಿರುವುದಿಲ್ಲ. ಯಾವ ಯಾವ ಖಾಸಗಿ ಮತ್ತು ಸರ್ಕಾರಿ ಕಾಲೇಜುಗಳಿವೆ. ಅಲ್ಲಿ ವಿದ್ವಾಂಸರು ಅಥವಾ ಪರಿಣತರು ಇದ್ದ ಪಕ್ಷದಲ್ಲಿ ಅವರೆಲ್ಲರೂ ಕೂಡ ಈ ವಿಶ್ವವಿದ್ಯಾನಿಲಯದ ಅಧ್ಯಾಪಕನೂ, ಪ್ರಾಧ್ಯಾಪಕರೂ ಆಗುತ್ತಾರೆ. ಆತ್ಮೀಯವಾಗಿರತಕ್ಕ ಮತ್ತು ನಿಕಟವಾಗಿರತಕ್ಕ ಸಂಪರ್ಕವನ್ನಿಟ್ಟುಕೊಳ್ಳಲು ಬೆಂಗಳೂರಿನಲ್ಲಿ ಫೆಡರಲ್ ಯೂನಿವರ್ಸಿಟಿಯನ್ನೂ ಸ್ಥಾಪನೆ ಮಾಡುತ್ತಾರೆ.

ಈ ವಿಶ್ವವಿದ್ಯಾನಿಲಯದ ವಾತಾವರಣ ಯೂನಿವರ್ಸಿಟಿ ಅಟ್‌ಮಾಸ್‌ಫಿಯರ್ ಏನಿದೆ ಅದನ್ನು ವರ್ಣನೆ ಮಾಡುವುದು ಕಷ್ಟ. ಅನುಭವ ಮಾಡುವುದು ಸುಲಭ. ಈ ವಿಶ್ವವಿದ್ಯಾನಿಲಯದ ವಾತಾವರಣ ಬೆಳೆಯಬೇಕು, ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಲೇ ಇರಬೇಕು ಕಾಲೇಜುಗಳೆಲ್ಲ ಹತ್ತಿರದಲ್ಲಿಯೇ ಇರಬೇಕು, ಹತ್ತಿರವಿರುವುದರ ಜೊತೆಗೆ ಪೋಸ್ಟ್ ಗ್ರಾಜುಯೇಟ್ ಮಾಡುವುದಕ್ಕೆ ರಿಸರ್ಚ್ ಮಾಡುವುದಕ್ಕೆ ಸುತ್ತಮುತ್ತಲ ವಾತಾವರಣ ಬಹಳ ಚೆನ್ನಾಗಿರಬೇಕು. ಬೆಂಗಳೂರಿನಲ್ಲಿ ಟ್ರೇಡ್, ಇಂಡಸ್ಟ್ರೀಸ್ ಅಂಡ್ ಕಾಮರ್ಸ್ ಬೆಳೆಯುತ್ತಿದೆ. ಡಿಫೆನ್ಸ್ ಇಂಡಸ್ಟ್ರೀಸ್ ಬೇಕಾದಷ್ಟಿವೆ. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ವಿಶೇಷ ರೀತಿಯ ವಿದ್ಯಾಪೀಠವಾಗಿ 40 ವರ್ಷಗಳ ಕಾಲ ಬೆಳೆದು ಬಂದಿದೆ. ಏರಿಯೋಟಿಕ್ಸ್, ಕೆಮಿಸ್ಟ್ರಿ, ಬೈಯೋ ಕೆಮಿಸ್ಟ್ರಿ ಇಂಥ ಪ್ರಾಯೋಗಿಕ ಶಾಲೆಗಳನ್ನು ಉಪಯೋಗಿಸಿಕೊಂಡು ಇವೆಲ್ಲದರ ಸಾಮರ್ಥ್ಯ ಶಕ್ತಿ ಸಲಕರಣೆಗಳನ್ನು ಲ್ಯಾಬೋರೇಟರಿ ಇವೆಲ್ಲವನ್ನೂ ಕೂಡ ಉಪಯೋಗ ಮಾಡಿಕೊಂಡು ಈ ವಿಶ್ವವಿದ್ಯಾನಿಲಯವನ್ನು ಕರ್ನಾಟಕ ಗೌರವಕ್ಕೆ ಮಾತ್ರ ಪಾತ್ರವಾದುದಲ್ಲ, ಇಡೀ ಭರತ ಖಂಡದ ಗೌರವಕ್ಕೆ ಪಾತ್ರವಾಗುವ ರೀತಿಯಲ್ಲಿ ನಡೆಸಬೇಕೆಂಬ ಉದ್ದೇಶ ಬಹಳ ಯೋಗ್ಯವಾದುದು, ಮಹತ್ತರವಾದುದು, ಅದಕ್ಕೆ ಜನ ಪುಷ್ಟಿ ಕೊಡಬೇಕು, ಉತ್ತೇಜನ ಕೊಡಬೇಕು ಎಂದು ನಾನು ನಮ್ರತೆಯಿಂದ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈಗಾಗಲೇ ಬೆಂಗಳೂರು ನಗರದಲ್ಲಿ ಆಗುವ ಅಗ್ರಿಕಲ್ಚರಲ್ ಯೂನಿವರ್ಸಿಟಿಯಲ್ಲಿ ಬರಬಹುದಾದ ವೆಟರಿನರಿ ಕಾಲೇಜು ಮತ್ತು ಅಗ್ರಿಕಲ್ಚರಲ್ ಕಾಲೇಜು ಇವರೆಡನ್ನೂ ಬಿಟ್ಟ ಪಕ್ಷದಲ್ಲಿ 24 ಕಾಲೇಜುಗಳಿವೆ. 9 ಫಾಕುಲಟಿಸ್ ಇವೆ. ಆರ್ಟ್ಸ್, ಸೈನ್ಸ್, ಇಂಜನೀಯರಿಂಗ್, ಮೆಡಿಸನ್, ಲಾ ಎಜುಕೇಷನ್ ಕಾಮರ್ಸ್ ಹೀಗೆ ಸುಮಾರು 9 ಫಾಕಲ್ಟಿಸ್ ಆಗಲೇ ಇವೆ. 21 ಕಾಲೇಜುಗಳಿಂದ 25 ಸಾವಿರ ವಿದ್ಯಾರ್ಥಿಗಳ ಸಂಖ್ಯೆ ಇದೆ. ಇದುವರೆಗೆ ಸೆಂಟ್ರಲ್ ಕಾಲೇಜಿನಲ್ಲಿ 50 ವರ್ಷಗಳ ಕಾಲದ ಸಂಪ್ರದಾಯ ಸ್ನಾತಕ್ಕೋತ್ತರ ಶಿಕ್ಷಣ ಬೆಳೆದು ಬಂದಿದೆ. ಈ ವಿಶ್ವವಿದ್ಯಾನಿಲಯ ಬೆಂಗಳೂರಿನಲ್ಲಿ ಸ್ಥಾಪನೆಯಾಗುವುದರಿಂದ ನಮ್ಮಲ್ಲಿರುವ ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳು ಕೂಡ ಬಹಳ ಯೋಗ್ಯವಾದ ರೀತಿಯಲ್ಲಿ, ದಕ್ಷವಾದ ರೀತಿಯಲ್ಲಿ ಕೆಲಸ ಮಾಡುವುದಕ್ಕೆ ಸಹಾಯಕವಾಗುತ್ತದೆ ಎನ್ನುವುದಕ್ಕೆ ಕೂಡ ತಿಳಿಯಬೇಕು. ಫೆಡರಲ್ ಯೂನಿವರ್ಸಿಟಿ ಆದಮೇಲೆ ಅದನ್ನು ಸೆಂಟ್ರಲ್ ಯೂನಿವರ್ಸಿಟಿ ಆಗಿ ಪರಿವರ್ತನೆ ಮಾಡಬೇಕಾದ್ದು ಯೋಗ್ಯವೆಂದು ನಾನು ಭಾವಿಸಿಕೊಂಡಿದ್ದೇನೆ. ಸೆಂಟ್ರಲ್ ಯೂನಿವರ್ಸಿಟಿ ಆಗಿ ಪರಿವರ್ತನೆ ಮಾಡಬೇಕಾದ್ದು ಯೋಗ್ಯವೆಂದು ನಾನು ಭಾವಿಸಿಕೊಂಡಿದ್ದೇನೆ. ಸೆಂಟ್ರಲ್ ಯೂನಿವರ್ಸಿಟಿ ಆಗಿ ಪರಿವರ್ತನೆ ಮಾಡುವುದರಿಂದ ಅನೇಕ ವಿಧವಾದ ಸೌಕರ್ಯಗಳು ದೊರೆಯುತ್ತವೆ. ಆಲ್ ಇಂಡಿಯಾ ಇಂಟರೆಸ್ಟ್ ಬೆಳೆದು ಬರುತ್ತದೆ. ಸಾಮಾನ್ಯವಾಗಿ ಇಂಟಿಗ್ರೇಷನ್ ಎನ್ನುವುದು ಫಲಕಾರಿಯಾಗಬೇಕಾದರೆ ಇಂಥ ಸಂಸ್ಥೆಗಳಿಂದ.

ಮದ್ರಾಸಿನಲ್ಲಾಗಲೀ, ಕೇರಳದಲ್ಲಾಗಲೀ, ಆಂಧ್ರದಲ್ಲಾಗಲಿ ಇಂಥ ವಿಶ್ವವಿದ್ಯಾನಿಲಯವನ್ನು ತೆಗೆದುಕೊಳ್ಳಬೇಕೆನ್ನುವ ಪ್ರಯತ್ನಗಳನ್ನು ಇದುವರೆಗೆ ಮಾಡಿದ್ದಾರೆ. ಬೆಂಗಳೂರಿನಲ್ಲಿ ವಿಶ್ವವಿದ್ಯಾನಿಲಯವನ್ನು ಸ್ಥಾಪನೆ ಮಾಡಬೇಕೆನ್ನುವುದು ಕೇವಲ ಬೆಂಗಳೂರು ಜನರ ಪ್ರಯತ್ನದಲ್ಲಿ ಅಥವಾ ಶ್ರೀಮಾನ್ ಎಸ್.ಆರ್. ಕಂಠಿಯವರು ಪ್ರಯತ್ನವಲ್ಲ. ಯೂನಿವರ್ಸಿಟಿ ಗ್ರಾಂಟ್ಸ್ ಕಮೀಷನ್ನಿನಲ್ಲಿ ಒಂದು ಸಬ್ ಕಮಿಟಿಯನ್ನು ಮಾಡಿ ಇಂಡಿಯಾ ದೇಶದಲ್ಲಿ ಹೊಸ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾಗಬೇಕಾಗಿದ್ದರೆ ಎಲ್ಲೆಲ್ಲಿ ಇರಬೇಕು ಎಂದು ಅವರನ್ನು ಕೇಳಿದಾಗ, ಅವರು ಕೂಲಂಕುಷವಾಗಿ ವಿಮರ್ಶೆ ಮಾಡಿ ಅತ್ಯಗತ್ಯವಾಗಿ ಬೆಂಗಳೂರಿನಲ್ಲಿ ವಿಶ್ವವಿದ್ಯಾನಿಲಯವಾಗತಕ್ಕದ್ದು ಎನ್ನುವಂಥ ಮಾತನ್ನು ಅವರು ಆಡಿದ್ದಾರೆ.

ಇಲ್ಲಿಂದ ಕೆಲವು ಸದಸ್ಯರು ಡೆಲ್ಲಿಗೆ ಹೋಗಿದ್ದು ಯೂನಿವರ್ಸಿಟಿ ಗ್ರಾಂಟ್ಸ್ ಕಮೀಷನ್ ಚೇರ್‌ಮನ್‌ರನ್ನು ನೋಡಿದಾಗ ಶಿಕ್ಷಣ ಖಾತೆಯ ಮಂತ್ರಿಗಳನ್ನು ನೋಡಿದಾಗ, ಡೆಲ್ಲಿ ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರ್ ದೇಶ್‌ಮುಖಿ ಅವರನ್ನು ನೋಡಿದಾಗ, ಇಂಥ ವಿಶ್ವವಿದ್ಯಾನಿಲಯವನ್ನು ಇಲ್ಲಿ ಜಾಗ್ರತೆ ಮಾಡಬೇಕಾದ ಅಗತ್ಯವಿದೆ ಎನ್ನುವ ಮಾತನ್ನು ಅವರು ಹೇಳಿದ್ದಾರೆ ಇಂಥ, ವಿಶ್ವವಿದ್ಯಾನಿಲಯ ಸೆಂಟ್ರಲ್ ಯೂನಿವರ್ಸಿಟಿ ಆಗುವ ಪಕ್ಷದಲ್ಲಿ ಅದಕ್ಕೆ 100 ಪರ್ಸೆಂಟ್ ಗ್ರಾಂಟ್ ಸಿಕ್ಕುತ್ತದೆ. ಆರ್ಥಿಕ ದೃಷ್ಟಿಯಿಂದಲೂ ಶೈಕ್ಷಣಿಕ ದೃಷ್ಟಿಯಿಂದಲೂ ಬೆಂಗಳೂರಿನಲ್ಲಿ ಸೆಂಟ್ರಲ್ ಯೂನಿವರ್ಸಿಟಿ ಮಾಡಬೇಕಾದ್ದು ಅಗತ್ಯ. ಇದಕ್ಕೆ ಮೂಲಕಾರಣರಾದ ಶ್ರೀಮಾನ್ ಕಂಠಿ ಯವರು ಅಭಿನಂದನಾರ್ಹರು ಎನ್ನುವ ಮಾತನ್ನು ಆಡುತ್ತೇನೆ. ಜನ ಇದಕ್ಕೆ ಸಂಪೂರ್ಣವಾದ

ಬೆಂಬಲ, ಸಹಾಯ, ಸಲಹೆಗಳನ್ನು ಕೊಡಬೇಕೆಂದು ಈ ಸಮಯದಲ್ಲಿ ನಾನು ನಿವೇದನೆ ಮಾಡುತ್ತಿದ್ದೇನೆ. ಇಂತಹ ಶಿಕ್ಷಣ ವಿದ್ಯಾಲಯ ಬಂದಾಗ ಮೈಸೂರು ರಾಜ್ಯದಲ್ಲಿ ಯಾರು ವಿದ್ವಾಂಸರಿದ್ದಾರೋ, ಪಂಡಿತರಿದ್ದಾರೋ, ತಜ್ಞರಿದ್ದಾರೋ, ಅನುಭವಿಗಳಿದ್ದಾರೋ ಅಂಥವರ ಶಕ್ತಿಯನ್ನೂ ಸಾಮರ್ಥ್ಯವನ್ನೂ ಸ್ನಾತಕೋತ್ತರ ಶಿಕ್ಷಣಕ್ಕೆ ಉಪಯೋಗ ಮಾಡಿಕೊಳ್ಳಬೇಕೆಂದು ನಿವೇದನೆ ಮಾಡಿಕೊಳ್ಳುತ್ತಿದ್ದೇನೆ.

ಇನ್ನೆರಡು ವಿಷಯಗಳನ್ನು ಮಾತ್ರ ಪ್ರಸ್ತಾಪ ಮಾಡಬೇಕೆಂದಿದ್ದೇನೆ. ವೈದ್ಯಕೀಯ ಸೇವೆಗಳ ವಿಷಯವನ್ನು ಪ್ರಸ್ತಾವಿಸಬೇಕೆಂದಿದ್ದೇನೆ. ರಾಜ್ಯಪಾಲರ ಭಾಷಣದ 29ನೆಯ ಪುಟದಲ್ಲಿ ರಾಜ್ಯದಲ್ಲಿಯ ವೈದ್ಯಕೀಯ ಸಂಸ್ಥೆಗಳನ್ನು ನಡೆಸುವುದಕ್ಕೆ ಬೇಕಾದ ಹೆಚ್ಚು ಜನ ವೈದ್ಯರ ಅವಶ್ಯಕತೆಯನ್ನು ಪೂರೈಸಲು ಹಾಗೂ ರಕ್ಷಾದಳಗಳ ಅವಶ್ಯಕತೆಗಳನ್ನು ಪೂರೈಸಲು ಸಹಕಾರೀ ವೈದ್ಯಕೀಯ ಕಾಲೇಜುಗಳಲ್ಲಿ ಇನ್ನೂ 225 ಮಂದಿ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶಗಳನ್ನು ಹೆಚ್ಚಿಸಲಾಗಿದೆ. ಎನ್ನುವ ಮಾತನಾಡಿದ್ದಾರೆ. ವೈದ್ಯರು ಸಾಕಷ್ಟು ನಮ್ಮಲಿಲ್ಲ, ಆಸ್ಪತ್ರೆಗಳಿವೆ ಎಂದು ಅರ್ಥವಾಗುತ್ತದೆ. ಸರಕಾರದವರು ಬೇಕಾದಷ್ಟು ಆಸ್ಪತ್ರೆಗಳನ್ನು ಕಟ್ಟಿಸುತ್ತಾರೆ. ರೋಗಿಗಳು ಸಿದ್ಧವಾಗಿದ್ದಾರೆ. ಆದರೆ ವೈದ್ಯರಿಲ್ಲ, ಅಗತ್ಯವಾದ ಸಲಕರಣೆಗಳಿಲ್ಲ. ಆಸ್ಪತ್ರೆಗಳಲ್ಲೆಲ್ಲಿವೆಯೋ ಅಲ್ಲಿ ಸರಿಯಾದ ವೈದ್ಯರನ್ನು ನೇಮಕ ಮಾಡಬೇಕು. ಯಾವ ಯಾವ ಔಷಧಗಳು ಬೇಕೋ ಅವುಗಳನ್ನು ಸಲಕರಣೆಗಳನ್ನೂ ಒದಿಗಸಬೇಕು. ಆರೋಗ್ಯ ಮಂತ್ರಿಗಳಿಂದ ಒಂದು ಸರ್ಕ್ಯುಲರ್ ಬಂದಿದೆ. ತಜ್ಞರಾದ ಡಾಕ್ಟರುಗಳಿಲ್ಲವೆಂದು ಉತ್ತರ ಹೇಳುತ್ತಾರೆ.

ಹೇಳಿದುದನ್ನೇ ಹೇಳುತ್ತಾರೆ. 225 ಸೀಟುಗಳನ್ನು ಮೆಡಿಕಲ್ ಕಾಲೇಜುಗಳಲ್ಲಿ ಹೆಚ್ಚು ಮಾಡಿದ್ದೇವೆಂದು ಹೇಳುತ್ತಾರೆ. ಅವರು ಇದನ್ನು ಕಾರ್ಯಗತಮಾಡಿ, ಅಲ್ಲಿನ ವಿದ್ಯಾರ್ಥಿಗಳು ಶಿಕ್ಷಣವನ್ನು ಪಡೆದು ಬರುವವರೆಗೂ ರೋಗಿಗಳು ಕಾದಿರುತ್ತವೆಯೇ? ಅವರು ಹೊರಬರಬೇಕಾದರೆ ಕನಿಷ್ಟ ಇನ್ನು ಐದು ವರ್ಷಗಳಾಗುತ್ತವೆ. ಸಮಗ್ರ ಯೋಜನೆ ಹಾಕಿಕೊಳ್ಳುವುದಾದರೆ ಅನುಕೂಲವಾಗುತ್ತದೆ. ನಮ್ಮಲ್ಲಿ ವೈದ್ಯ ಅರ್ಹತೆ ಪಡೆಯುವುದಕ್ಕೆ ಎಲ್.ಎಂ.ಪಿ. ಗಳನ್ನು ಎಂ.ಬಿ.ಬಿ.ಎಸ್ ಗಳಾಗಿ ಮಾಡಬೇಕೆಂದು ಒಂದು ಯೋಜನೆ ಇದೆ. ಇದಕ್ಕಾಗಿ ಕಂಡೆನ್ಸ್ಡ್ ಕೋರ್ಸ್ ಮಾಡಬೇಕೆಂದು ಯೋಚಿಸಿ ಪ್ರತಿ ವರ್ಷವೂ 100 ಜನರನ್ನು ಈ ಕೋರ್ಸಿಗೆ ಸೇರಿಸಿದರೆ ಅವರು ಮೂರು ವರ್ಷಗಳಲ್ಲಿ ಶಿಕ್ಷಣ ಪಡೆದು ಬರುತ್ತಾರೆ. ಆಗ ನಮಗೆ ಬೇಕಾದಷ್ಟು ಜನ ವೈದ್ಯರು ಸಿಕ್ಕುತ್ತಾರೆ ಎಂದು ಮಾಡಿದ್ದೀರಿ. ಒಂದು ವರ್ಷ 25 ಜನರನ್ನು ತರಪೇತು ಮಾಡಿದರು. ಇನ್ನೊಂದು ವರ್ಷ ಬಿಟ್ಟರು. ಹೀಗಾದರೆ ಕ್ವಾಲಿಫೈಡ್ ಡಾಕ್ಟರುಗಳು ದೊರಕುವ ಸಂಭವಿದೆಯೇ? ಇನ್ನು ಕ್ವಾಲಿಫೈಡ್ ಡಾಕ್ಟರುಗಳನ್ನು ತಯಾರು ಮಾಡುವ ವೈದ್ಯ ಕಾಲೇಜುಗಳಲ್ಲಿ ಪಾಠಗಳನ್ನು ಬೋಧನೆ ಮಾಡುವುದಕ್ಕೆ ಎಷ್ಟು ಜನ ಅಧ್ಯಾಪಕರು ಇರಬೇಕೆಂದು ಆಲ್ ಇಂಡಿಯಾ ಮೆಡಿಕಲ್ ಕೌನ್ಸಿಲ್‌ನವರು ನಿಗಧಿ ಮಾಡಿದ್ದಾರೆ. ಅವರ ಪ್ರಕಾರ ಲೀಡರುಗಳನ್ನು, ಲೆಕ್ಚರರುಗಳನ್ನು, ಅಸಿಸ್ಟಂಟ್ ಪ್ರೊಫೆಸರುಗಳನ್ನು, ಪ್ರೊಫೆಸರುಗಳನ್ನೂ ಇಡದೇ ಹೋದರೆ ರೆಕಗ್ನಿಷನ್ ಸಿಕ್ಕುವುದಿಲ್ಲ. ಮೈಸೂರು ಮೆಡಿಕಲ್ ಕಾಲೇಜಿನಲ್ಲಿ ಉತ್ತೀರ್ಣರಾಗಿರುವ ವೈದ್ಯ ಪದವೀದರರುಗಳಿಗೆ ರೆಕಗ್ನಿಷನ್ ಸಿಕ್ಕಿಲ್ಲ.

ಬೇರೆ ದೇಶಗಳಿವೆ ಇವರು ಎಂ.ಆರ್.ಸಿ.ಪಿ.ಎಫ್.ಆರ್.ಸಿ.ಎಸ್ ಮುಂತಾದ ಹೆಚ್ಚಿನ ಶಿಕ್ಷಣಗಳಿಗೆ ಹೋದರೆ ಅಲ್ಲಿ ಒಂದು ವರ್ಷ ಹೆಚ್ಚು ವ್ಯಾಸಂಗ ಮಾಡಬೇಕಾಗಿದೆ. ಶ್ರೀಮಾನ್ ನಾಗಪ್ಪ ಆಳ್ವ ಅವರು ಇಲ್ಲಿ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾ ವೈದ್ಯಕೀಯ ಕಾಲೇಜುಗಳಲ್ಲಿ 421 ಶಿಕ್ಷಕರ ಸ್ಥಾನಗಳು ಇವೆ. ಅವುಗಳಲ್ಲಿ ಸುಮಾರು 125 ಸ್ಥಾನಗಳನ್ನು ಭರ್ತಿ ಮಾಡಿಲ್ಲ. ಸುಮಾರು 172 ಸ್ಥಾನಗಳಿಗೆ ನಿಗಧಿಯಾದ ಕ್ವಾಲಿಫಿಕೇಷನ್ ಇಲ್ಲದೇ ಇರುವವರನ್ನು ನೇಮಕ ಮಾಡಿದ್ದೇವೆ ಎಂದು ಹೇಳಿದರು. ಎಂದರೆ ಸುಮಾರು ಇನ್ನೂರು ಜನರನ್ನು ನೇಮಕ ಮಾಡಿಲ್ಲ. ಕಾಲು ಭಾಗಅನರ್ಹ ಶಿಕ್ಷಕರಿದ್ದಾರೆ. ಒಂದು ಸಾರಿ ಹೇಳುತ್ತಾರೆ ಅಖಿಲಭಾರತ ಮೆಡಿಕಲ್ ಕೌನ್ಸಿಲ್‌ರವರು ನಿಗದಿ ಮಾಡಿರುವಂತೆ ಎಂ.ಬಿ.ಬಿ.ಎಸ್ ಪಾಸು ಮಾಡಿರುವವರನ್ನು ಅದೇ ತರಗತಿಗೆ ಪಾಠ ಹೇಳುವುದಕ್ಕೆ ನೇಮಕ ಮಾಡಬಾರದೆಂದು, ಹಾಗೆ ಮಾಡುವುದಿಲ್ಲ ಎಂದು. ಇನ್ನೊಂದು ಕಡೆ ಕ್ವಾಲಿಫಿಕೇಷನ್ ಒಂದೇ ಅಲ್ಲ, ಸರ್ವಿಸ್ ಕೂಡ ನೋಡಬೇಕೆಂದು ಹೇಳುತ್ತಾರೆ. ಈ ಕಣ್ಣುಮುಚ್ಚಾಲೆ ಆಟದಲ್ಲಿ ಈ ಕಾಲೇಜುಗಳಲ್ಲಿ ಕೆಲಸ ಮಾಡುತ್ತಿರುವ ಜನರೂ ಬಿಟ್ಟು ಹೋಗುತ್ತಿದ್ದಾರೆ. ಈಗ ಎರಡು ಕೆಲಸ ಮಾಡಬೇಕಾಗಿದೆ. ಮೆಡಿಕಲ್ ಕಾಲೇಜಿನಲ್ಲಿರುವವರು ವೈದ್ಯಕೀಯ ವೃತ್ತಿಯನ್ನು ಅವಲಂಬನೆ ಮಾಡಿದರೆ ಅವರಿಗೆ ಹೆಚ್ಚು ವರಮಾನ ದೊರಕುತ್ತದೆ. ಅದನ್ನು ದೃಷ್ಟಿಯಲ್ಲಿಟ್ಟುಕೊಂಡು ಅವರ ಸಂಬಳಗಳನ್ನು ಗೊತ್ತು ಮಾಡಬೇಕು. ಇಲ್ಲದಿದ್ದರೆ ಡಾಕ್ಟರುಗಳಿಗೆ ಸಿಕ್ಕುವಷ್ಟು ವರಮಾನ ಬೋಧಕನಿಗೆ ಸಿಕ್ಕುವುದಿಲ್ಲ. ಅಖಿಲ ಭಾರತ ಮೆಡಿಕಲ್ ಕೌನ್ಸಿಲ್‌ನವರು ಏನು ಕ್ವಾಲಿಫಿಕೇಷನ್ ಗೊತ್ತು ಮಾಡಿದ್ದಾರೋ ಅದನ್ನು ಹೊಂದಿರುವವರನ್ನು ಮಾತ್ರ ನೇಮಕ ಮಾಡಬೇಕು. ಬೆಂಗಳೂರು ಮೆಡಿಕಲ್ ಕಾಲೇಜಿನಲ್ಲಿ, ಹೆಲ್ತ್ ಇಲಾಖೆಯಲ್ಲಿದ್ದು ನಾಲ್ಕು ವರ್ಷ ಸರ್ವಿಸ್ ಮಾಡಿರುವವರನ್ನು ಪ್ರೊಫೆಸರಾಗಿ ನೇಮಕ ಮಾಡಿದ್ದಾರೆ. ಅದೇ ಇಲಾಖೆಯಲ್ಲಿದ್ದು ವಿದೇಶ ಉಚ್ಚ ಶಿಕ್ಷಣ ಪಡೆದಿರುವವರನ್ನು ನೇಮಕ ಮಾಡಿಲ್ಲ. ಬಳ್ಳಾರಿಯ ಕಾಲೇಜಿನಲ್ಲಿ ಅಖಿಲಭಾರತ ಮೆಡಿಕಲ್ ಕೌನ್ಸಿಲ್‌ನವರು ಯಾವ ಯಾವ ಇಲಾಖೆಗಳನ್ನು ಪ್ರಾರಂಭ ಮಾಡಬೇಕೆಂದು ಹೇಳಿದರೋ ಅದನ್ನು ಪ್ರಾರಂಭ ಮಾಡಿಲ್ಲ. ತಮಗೆ ಬೇಕಾದವರನ್ನು ನೇಮಕ ಮಾಡಬೇಕಾದ ಇಲಾಖೆಗಳನ್ನು ಪ್ರಾರಂಭ ಮಾಡಿದ್ದಾರೆ. ಯಾವ ಯಾವ ಇಲಾಖೆಗಳಲ್ಲಿ ಎಷ್ಟೆಷ್ಟು ಪ್ರೊಫೆಸರುಗಳಿರಬೇಕೆಂದು ತೀರ್ಮಾನವಾಗಿದೆಯೋ ಅದಕ್ಕಿಂತ ಕಡಿಮೆ ಜನರಿದ್ದಾರೆ. ಮತ್ತೆ ಕೆಲವು ಕಡೆ ಹೆಚ್ಚಾಗಿದ್ದಾರೆ. ಇದಕ್ಕೇನು ಕಾರಣ? ನಮ್ಮ ಮೆಡಿಕಲ್ ಕಾಲೇಜುಗಳಲ್ಲಿ ಮತ್ತು ಆಸ್ಪತ್ರೆಗಳಲ್ಲಿ ಕೆಲಸ ಮಾಡತಕ್ಕ ಎಂ.ಡಿ. ಮತ್ತು ಎಫ್.ಆರ್.ಸಿ.ಎಸ್ ಮಾಡಿಕೊಂಡಿರುವ ಡಾಕ್ಟರುಗಳು ಮೂರು ನಾಲ್ಕು ವರ್ಷ ಸರ್ವಿಸ್ ಆಗಿದ್ದರೂ ಇನ್ನೂ ಹಂಗಾಮಿಯೇ ಆಗಿದ್ದಾರೆ. ಅದೇ ವೈದ್ಯಕೀಯ ಸೆಕ್ರೆಟರಿಯಟ್‌ನಲ್ಲಿ ದಲಾಯತ್ ಆಗಿರುವವರು, ಮಂತ್ರಿಗಳ ಮನೆಯಲ್ಲಿ ಕೆಲಸ ಮಾಡುವವರು ಖಾಯಂ ಆಗಿದ್ದಾರೆ. ಇದು ಬಹಳ ಅಸಮರ್ಪಕವಾಗಿರುವ ವಿಚಾರ. ಬಹಳ ಒಳ್ಳೆಯವರು ವೈದ್ಯಕೀಯ ಇಲಾಖೆಯ ಆಡಳಿತವನ್ನು ಕೈಯಲ್ಲಿ ಹಿಡಿದಿದ್ದಾರೆ. ಕೆಲವು ಇಲಾಖೆಗಳು ಕೆಲವು ಕೆಲಸಗಳು ನಿಂತುಹೋಗಿವೆ. ಇದನ್ನು ಪರಿಹಾರ ಮಾಡದೇ ಹೋದರೆ ಬಹಳ ಅಪಾಯ. ಜನರಿಗೆ ತೊಂದರೆಯಾಗುತ್ತದೆ. ಇದರಿಂದ ನಮ್ಮಲ್ಲಿರತಕ್ಕ ಮೈಸೂರು ದೇಶದ ಜನರು, ನಮ್ಮ ದೇಶದ ಜನರ ಕೆಲಸ ಮಾಡುವುದಕ್ಕೆ ಸಿದ್ಧರಾಗಿರುವ ಜನರು ನಮ್ಮನ್ನು ಬಿಟ್ಟು ಹೋಗುತ್ತಾರೆ, ಆಗ ವೈದ್ಯರ ಅಭಾವ ಇನ್ನೂ ಹೆಚ್ಚಾಗುತ್ತದೆ.

ಇನ್ನೊಂದು ವಿಷಯ ಹೇಳುವುದಾದರೆ ವೈದ್ಯಕೀಯ ಇಲಾಖೆಯಲ್ಲಿ ಟೀಚಿಂಗ್ ಡಿಪಾರ್ಟ್‌ಮೆಂಟ್‌ನಲ್ಲಿ ಡಾಕ್ಟರುಗಳಿಗೆ ಪ್ರೈವೇಟ್ ಪ್ರಾಕ್ಟೀಸ್ ಮಾಡಕೂಡದು ಎಂದು ಇರಬಾರದು. ಬೆಂಗಳೂರು ನಗರದಲ್ಲಿ ಕೆಲಸ ಮಾಡತಕ್ಕಂಥ ಡಾಕ್ಟರುಗಳಿಗೆ ಕನ್‌ಸೆಲ್ಟಿಂಗ್ ಇಟ್ಟುಕೊಳ್ಳುವುದಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಈ ಅನುಕೂಲ ಒದಗಿಸಿ ಕೊಡದೇ ಹೋದದ್ದರಿಂದ ಕೆಲವು ಪ್ರಖ್ಯಾತ ಡಾಕ್ಟರಗಳು ಅದರಲ್ಲಿಯೂ ಡಾಕ್ಟರ್ ಲೋಕನಾಥನ್‌ರವರಂಥವರು ಕೆಲಸ ಬಿಟ್ಟು ಹೋಗಬೇಕೆಂದು ಮಾಡಿದ್ದರು. ಒಬ್ಬರಿಗೆ ಒಂದು ಅನ್ವಯಿಸುವುದು ಇನ್ನೊಬ್ಬರಿಗೆ ಮತ್ತೊಂದು ರೀತಿ ಅನ್ವಯಿಸುವುದು ಸರಿಯಲ್ಲ ಇಂಥ ಬದಲಾವಣೆ ಮಾಡಬೇಕಾದರೆ ಅದಕ್ಕೆ ವಿಶೇಷ ಕಾರಣ ಇರಬೇಕು. ಎಲ್ಲರಿಗೂ ಏಕ ನೀತಿ ಅನುಸರಿಸಬೇಕು ಎಂದು ನಾನು ಹೇಳುತ್ತೇನೆ.

ಕೊನೆಯದಾಗಿ ಒಂದು ವಿಷಯ ಪ್ರಸ್ತಾಪ ಮಾಡಬೇಕಾಗಿದೆ. ಮೆಡಿಕಲ್ ಡಿಪಾರ್ಟ್‌ಮೆಂಟ್ ಮತ್ತು ಹೆಲ್ತ್ ಡಿಪಾರ್ಟ್‌ಮೆಂಟ್ ಎರಡನ್ನೂ ಸೇರಿಸಿ ಇಂಟಿಗ್ರೇಟ್ ಮಾಡಬೇಕು. ಎಂಬ ಒಂದು ಪ್ರಸ್ತಾಪ ಇದೆ. ಡಿಲ್ಲಿಯಿಂದ ಯಾರಾದರೂ ಕೇಂದ್ರ ಸರಕಾರದ ಮಂತ್ರಿಗಳು ಇಲ್ಲಿಗೆ ಬಂದಾಗ್ಗೆ ಇಂಥ ವಿಚಾರದ ಬಗ್ಗೆ ಕೂಡಲೇ ಹೆಚ್ಚು ಕಾವು ಇರುತ್ತದೆ. ಈ ರೀತಿ ಇಂಟಿ ಗ್ರೇಟ್ ಮಾಡುವುದು ಕೇವಲ ಪ್ರಾಯೋಗಿಕವಾಗಿ ಮಾತ್ರ ಮಾಡುತ್ತೇವೆ ಎಂದು ಹೇಳಲಾಗುತ್ತಿದೆ. ಆದರೆ ಮೈಸೂರು ರಾಜ್ಯದ ದೃಷ್ಟಿಯಿಂದ ಮಾತನಾಡುವುದಾದರೆ ಮೈಸೂರು ರಾಜ್ಯದ ಆರೋಗ್ಯ ಶಾಖೆ ಕಳೆದ 40 ವರ್ಷಗಳಿಂದ ಬೆಳೆದುಕೊಂಡು ಬಂದಿದೆ. ನನಗೆ ನೆನಪು ಇರುವ ಹಾಗೆ ಡಾಕ್ಟರ್ ಕರ್ವೆ ಎಂಬ ಹೆಸರುಳ್ಳ ಡೈರಕ್ಟರ್ ಆಫ್ ಹೆಲ್ತ್ ಎಂದು ಮೊಟ್ಟ ಮೊದಲನೇ ಅಧಿಕಾರಿಗಳಾಗಿದ್ದರು. ಇತ್ತೀಚೆಗೆ ಡೈರಕ್ಟರ್ ಆಫ್ ಹೆಲ್ತ್ ಎಂದು ಮೊಟ್ಟ ಮೊದಲನೇ ಅಧಿಕಾರಿಗಳಾಗಿದ್ದರು. ಇತ್ತೀಚೆಗೆ ಡೈರಕ್ಟರ್ ಆಫ್ ಮೆಡಿಕಲ್ ಸರ್ವಿಸಸ್ ಎಂದು ಹೆಸರುಳ್ಳ ಹುದ್ದೆ ನಿರ್ಮಾಣ ಮಾಡಲಾಗಿದೆ. ಮೆಡಿಕಲ್ ಮತ್ತು ಹೆಲ್ತ್ ಡಿಪಾರ್ಟ್‌ಮೆಂಟ್‌ಗಳ ಕೆಲಸ ಏನೆಂದರೆ ಒಂದು ಇಲಾಖೆಯಲ್ಲಿ ಆರೋಗ್ಯ ರಕ್ಷಣೆ ಮಾಡಲಾಗುತ್ತದೆ ಇನ್ನೊಂದು ಇಲಾಖೆಯಲ್ಲಿ ರೋಗ ನಿವಾರಣೆ ಕೆಲಸ ಇರುತ್ತದೆ. ಈ ಎರಡೂ ಶಾಖೆಗಳನ್ನು ಒಟ್ಟುಗೂಡಿಸಿದರೆ ಇದರ ಪ್ರತಿಕ್ರಿಯೆ ಉಂಟಾಗಿ ಅಪಘಾತವಾಗುತ್ತದೆ ಎಂದು ನಾನು ಹೇಳುತ್ತೇನೆ. ಮೈಸೂರು ರಾಜ್ಯ ಇಂಟಿಗ್ರೇಶನ್ ಆಗಿ ಎಂಟು ವರ್ಷಗಳಾಗಿದ್ದರೂ ಕೂಡ ಇನ್ನೂವರೆಗೆ ಅನೇಕ ಇಲಾಖೆಗಳಲ್ಲಿ ಸೀನಿಯಾರಿಟಿ ಲಿಸ್ಟ್ ಫೈನಲಾಗಿ ತಯಾರಾಗದೆ ಹಾಗೆಯೇ ಕೆಲಸ ನಡೆಸಲಾಗುತ್ತಿದೆ. ಅನೇಕ ರಿಟ್ ಅರ್ಜಿಗಳು ಹೈಕೋರ್ಟಿನಲ್ಲಿ ಬಂದಿವೆ. ಸೀನಿಯಾರಿಟಿ ಬಗ್ಗೆ ಹೋರಾಟ ನಡೆದಿದೆ. ಈ ಪರಿಸ್ಥಿತಿಯಲ್ಲಿ ಹೆಲ್ತ್ ಮತ್ತು ಮೆಡಿಕಲ್ ಡಿಪಾರ್ಟ್‌ಮೆಂಟ್ ಸೇರಿಸಿ ಒಂದು ಇಲಾಖೆ ಮಾಡಿದರೆ ಈ ಹೋರಾಟ ಇನ್ನೂ ಹೆಚ್ಚಾಗುತ್ತದೆ. ಹೆಲ್ತ್ ಡಿಪಾರ್ಟ್‌ಮೆಂಟ್ ಇರುವುದು ಶುಚಿತ್ವಕ್ಕಾಗಿ, ಮಲೇರಿಯಾ ನಿವಾರಣೆಗಾಗಿ, ಫ್ಯಾಮಿಲಿ ಪ್ಲಾನಿಂಗ್ ಮುಂತಾದವುಗಳಿಗಾಗಿ ಔಷಧ ಕೊಡುವುದಕ್ಕಾಗಲಿ ಕತ್ತಿ ಹಿಡಿದು ಶಸ್ತ್ರ ಚಿಕಿತ್ಸೆ ಮಾಡುವುದಕ್ಕೆ ಅಲ್ಲ. ಈಗ ಅವರು ಈ ಕೆಲಸ ಮಾಡಲು ಪ್ರಾರಂಭಿಸಿದರೆ ಜನ ಹೆದರಿ ಓಡಿ ಹೋಗುತ್ತಾರೆ. ಯಾಕೆಂದರೆ ಅವರು ಶಿಕ್ಷಣ ಪಡೆಯುವಾಗ ಮಾತ್ರ ಈ ಕೆಲಸ ಮಾಡಿದವರು. ಮದ್ರಾಸಿನಲ್ಲಿ ಈ ಸ್ಕೀಂ ಕೈಬಿಟ್ಟಿದ್ದಾರೆ. ಬೊಂಬಾಯಿನಲ್ಲಿ ಈ ಸ್ಕೀಂ ಇಲ್ಲ. ಕೇರಳದಲ್ಲಿ

ಮಾತ್ರ ಒಂದು ರೀತಿ ಪ್ರಯೋಗ ಮಾಡುತ್ತಿದ್ದಾರೆ. ಯಾವ ರಾಜ್ಯದಲ್ಲಿಯೂ ಇದು ಯಶಸ್ವಿಯಾಗಿ ನಡೆದಿಲ್ಲ. ಸದ್ಯದ ಪರಿಸ್ಥಿತಿಯಲ್ಲಿ ರೋಗಿಗಳಿಗೆ ಸರಿಯಾದ ರೀತಿಯಲ್ಲಿ ಔಷಧ ದೊರೆಯುತ್ತಿಲ್ಲ ಆರೋಗ್ಯ ರಕ್ಷಣೆ ಮತ್ತು ರೋಗ ನಿವಾರಣೆಗೋಸ್ಕರ ಏರ್ಪಾಡು ಮಾಡಿಕೊಂಡು ಬಂದಿರತಕ್ಕ ಈ ಇಲಾಖೆ ಉದ್ದೇಶ ಭಂಗಗೊಳಿಸಿದಂತಾಗುತ್ತದೆ. ಹೆಲ್ತ್ ಡಿಪಾರ್ಟ್‌ಮೆಂಟಿಗಿಂತ ಮೆಡಿಕಲ್ ಡಿಪಾರ್ಟ್‌ಮೆಂಟಿಗೆ ಹೆಚ್ಚು ಹಣ ಖರ್ಚು ಮಾಡಲಾಗುತ್ತಿದೆ. ಯಾಕೆಂದರೆ ಇದರ ಕಾರ್ಯಕ್ಷೇತ್ರ ವಿಶಾಲವಾಗಿದೆ. ಆದುದರಿಂದ ಈ ಅಂಶವನ್ನು ಸರಕಾರ ಗಮನದಲ್ಲಿ ಇಟ್ಟುಕೊಳ್ಳಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಕೊನೆಯದಾಗಿ, ಮಾನ್ಯ ಸಭಾಪತಿಗಳವರೇ, ರಾಜ್ಯಪಾಲರವರ ಭಾಷಣದ 33ನೇ ಪುಟದಲ್ಲಿ ಪ್ರಸ್ತಾಪ ಮಾಡಿರತಕ್ಕಂಥ ಸುಖೀ ರಾಜ್ಯದ ಸ್ಥಾಪನೆಯ ಉದ್ದೇಶದ ಸಂಬಂಧದಲ್ಲಿ ಮಾತ್ರ ಮಾತನಾಡಿ ನನ್ನ ಮಾತು ಮುಗಿಸುವುದಕ್ಕೆ ತಮ್ಮ ಅಪ್ಪಣೆ ಬೇಡುತ್ತೇನೆ. ರಾಜ್ಯಪಾಲರು ಈ ರೀತಿ ಹೇಳಿದ್ದಾರೆ.

ಸುಖೀ ರಾಜ್ಯದ ಸ್ಥಾಪನೆಯ ಉದ್ದೇಶಕ್ಕೆ ಅನುಸಾರವಾಗಿ ಸಾಮಾಜಿಕವಾಗಿ ತೊಂದರೆಗೊಳಗಾಗಿರುವುದರಿಂದ ಸ್ತ್ರೀಯರು ಮತ್ತು ಮಕ್ಕಳ ದೈಹಿಕವಾಗಿ ತೊಂದರೆಗೊಳಗಾಗಿರುವ ವ್ಯಕ್ತಿಗಳ ಮರು ವಸತಿಗೆ ಸಂಬಂಧಪಟ್ಟ ಯೋಜನೆಗಳನ್ನು ನಮ್ಮ ಸರ್ಕಾರದವರು ಸೂಕ್ಷ್ಮವಾಗಿ ಗಮನಿಸುತ್ತಿದ್ದಾರೆ. ಸಾಮಾಜಿಕ ಶಾಸನಗಳ ಮೇರೆಗೆ ಸಂಸ್ಥೆಗಳ ಸೇವೆಯನ್ನು ಹಾಗೂ ಸಂಸ್ಥೆಯಿಂದ ಬಿಡುಗಡೆಯಾದ ತರುವಾಯದ ಎಚ್ಚರಿಕೆ ಕಾರ್ಯಕ್ರಮಗಳನ್ನು ಮುಂದುವರಿಸಲಾಗುತ್ತಿದೆ ಮುಂಬರುವ ವರ್ಷಗಳಲ್ಲಿ, ವಯಸ್ಸಾದವರ, ಮಕ್ಕಳ ಮತ್ತು ನಿರಾಶ್ರಿತ ಸ್ತ್ರೀಯರ ಕಲ್ಯಾಣಕ್ಕಾಗಿ ಕ್ರಮಗಳನ್ನು ಕೊಳ್ಳುವುದರ ಮೂಲಕ, ಇಲ್ಲಿಯವರೆಗೆ ನಡೆಯುವುದಕ್ಕಿಂತ ಹೆಚ್ಚಿನ ಕ್ಷೇತ್ರದಲ್ಲಿ ಸಮಾಜ ಕಲ್ಯಾಣ ಚಟುವಟಿಕೆಗಳ ವಿಸ್ತರಣೆಗೆ ಪ್ರಾಧ್ಯಾನತೆಯನ್ನು ಕೊಡಲಾಗುವುದೆಂದು ನಂಬುತ್ತೇವೆ.

ಈ ವಿಚಾರದಲ್ಲಿ ಸಮಾಜ ಕಲ್ಯಾಣ ಶಾಖೆ ಮಂತ್ರಿಗಳು ಒಂದು ಮಾತು ತಿಳಿಸಬೇಕು. ವಯಸ್ಸಾದವರ, ಮಕ್ಕಳ ಮತ್ತು ನಿರಾಶ್ರಿತ ಸ್ತ್ರೀಯರ ಕಲ್ಯಾಣಕ್ಕಾಗಿ ಯಾವ ಕ್ರಮ ಯಾವ ರೀತಿಯಾಗಿ ತೆಗೆದುಕೊಳ್ಳಲಾಗಿದೆ. ಹಾಗೇನೇ ಹಿಂದುಳಿದ ವರ್ಗದವರ ಕಲ್ಯಾಣ ಕ್ರಮ ಕೈಗೊಳ್ಳಬೇಕಾಗುತ್ತದೆ. ಅನುಸೂಚಿತ ಜಾತಿ ಪಂಗಡದ ಉಮೇದುವಾರರಿಗೆ ಐ.ಎ.ಎಸ್ ಮತ್ತು ಐ.ಪಿ.ಎಸ್ ತರಬೇತಿ ಕೊಡುವುದಕ್ಕೆ ಅನುಕೂಲ ಮಾಡಿಕೊಟ್ಟಿರುವುದು ಸಂತೋಷಕರ. ಪ್ರಜಾಪ್ರಭುತ್ವದಲ್ಲಿ ಸಮಾಜ ಕಟ್ಟಬಾರದು. ಹಿಂದುಳಿದವರ ಕಲ್ಯಾಣ ಸಾಧನೆ ಮಾಡಬೇಕಾದುದು ತೀವ್ರ ನಡೆಯಬೇಕು. ಇದಕ್ಕಾಗಿ ಕೋಟ್ಯಾಂತರ ರೂಪಾಯಿ ವೆಚ್ಚ ಮಾಡಬೇಕಾದುದು ಅಗತ್ಯ. ಹಣ ಯೋಗ್ಯ ರೀತಿಯಲ್ಲಿ ವೆಚ್ಚಮಾಡಿ ಫಲಕಾರಿಯಾಗುವ ರೀತಿಯಲ್ಲಿ ಆಗಬೇಕು. ಹಾಸ್ಟೆಲ್ ಮಾಡಿದೆ, ವಿದ್ಯಾರ್ಥಿವೇತನ ಪುಸ್ತಕ ಅವರಿಗೆ ಕೊಡಲಾಗುತ್ತಿದೆ. ಶೇಕಡ 18ರಷ್ಟು ಅವರಿಗೆ ಕೊಡಬೇಕಾಗಿದೆ. ಆದರೆ ಅದರಲ್ಲಿ ಶೇಕಡ 75ರಷ್ಟು ಪಾಸ್ ಆಗಬೇಕು. ತಾಂತ್ರಿಕ ಶಿಕ್ಷಣದಲ್ಲಿ ಅವರಿಗೆ ಸೀಟ್ ಕೊಟ್ಟಿದ್ದರೂ ಕೂಡ ಹತ್ತು ಹನ್ನೆರಡು ವರ್ಷಗಳಾದರೂ 3ನೇ ತರಗತಿ ಮೆಟ್ಟಲು ಹತ್ತದೆ ಹೋದರೆ ಅದು ಯೋಗ್ಯವೇ ಎಂದು ನಾನು

ಕೇಳುತ್ತೇನೆ. ಅವರಿಗೆ ಇನ್ನೂ ವಿಶೇಷ ಸಹಾಯ ಮಾಡಬಹುದು. ಹರಿಜನ ಗಿರಿಜನರಲ್ಲಿ ಮೈಸೂರು ರಾಜ್ಯದಿಂದ ಒಬ್ಬನ್ನಾದರೂ ಈ ಸಹಾಯ ಪಡೆದು ಐ.ಎ.ಎಸ್. ಐ.ಪಿ.ಎಸ್.ನಲ್ಲಿ ಬಾರದೇ ಹೋದರೆ ಹಣ ವ್ಯರ್ಥ ವೆಚ್ಚ ಮಾಡಿದಂತಾಗುತ್ತದೆ ಎಂದು ಹೇಳುತ್ತೇನೆ. ಒಬ್ಬನೂ ಕೂಡ ಐ.ಎ.ಎಸ್. ನಲ್ಲಿ ಬರುವುದಿಲ್ಲ ಹಣ ವೆಚ್ಚ ಮಾಡುವುದಾದರೆ ಫಲಕಾರಿಯಾಗುವ ರೀತಿಯಲ್ಲಿ ಮಾಡಬೇಕು. ಗುರಿ ಎಲ್ಲಿಗೆ ಮುಟ್ಟಿದೆ ನೋಡಬೇಕು. ಸಮಾಜ ಕಲ್ಯಾಣ ಶಾಖೆಯ ಮಂತ್ರಿಗಳಾದ ಶ್ರೀಮತಿ ಯಶೋಧರಮ್ಮ ದಾಸಪ್ಪನವರ ಪೂಜ್ಯ ತೀರ್ಥರೂಪರವರಾದ ಶ್ರೀ ಕೆ.ಎಚ್. ರಾಮಯ್ಯನವರು ಉಜ್ವಲ ದೇಶಾಭಿಮಾನಿಗಳಾಗಿದ್ದರು. ಅವರ ಭಾವನೆಗಳನ್ನೂ ಅವರ ಚಾಕಚಕ್ಯತೆಯನ್ನೂ ಆದರ್ಶವಾಗಿ ಮುಂದಿಟ್ಟುಕೊಂಡು ಕೆಲಸ ಮಾಡತಕ್ಕಂಥ ಯೋಗ್ಯತೆ ಶಕ್ತಿ ನಮ್ಮ ಸಚಿವರಿಗೆ ಇದೆ. ಸರ್ ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ್ಗೆ ಕಂಪಲ್ಸರಿ ಎಜುಕೇಷನ್ ತರಬೇಕು. ದೇಶದಲ್ಲಿ ಇಂಡಸ್ಟ್ರೀಸ್ ಬೆಳೆಯಬೇಕು ಹಿಂದುಳಿದವರಿಗೆ ಅನುಸೂಚಿತ ಪಂಗಡದವರಿಗೆ ಕಂಪಲ್ಸರಿ ಎಜುಕೇಷನ್ ಕೊಡಬೇಕೆಂದು ಹೇಳಿದ್ದಾರೆ. ಅದನ್ನು ಉಪಯೋಗ ಮಾಡಿಕೊಳ್ಳಲಿಲ್ಲ ಎಂದು ಹೇಳಿದರು. ಬೆಂಗಳೂರಿನಲ್ಲಿ ಒಂದು ಸಭೆಯಲ್ಲಿ ಅದೇ ಜನರಿಗೆ, ನೋಡಿ, ಎಂಜಿನಗಾಡಿ ಹೊರಟೇ ಹೋಯಿತು. ಗೂಡ್ಸು ಗಾಡಿ ನಿಂತು ಹೋಯಿತು ಎಂದು ಹೇಳಿದರು. ಅಂದರೆ ಸರ್.ಎಂ. ವಿಶ್ವೇಶ್ವರಯ್ಯನವರು ಹೊರಗಡೆ ಹೊರಟುಹೋದರು ಅವರು ಹಾಕಿದ ಯೋಜನೆಗಳಿಂದ ಉಪಯೋಗ ಮಾಡಿಕೊಳ್ಳಲಿಲ್ಲ ಎಂದು ಅರ್ಥ. ಅದಕ್ಕೆ ಗೂಡ್ಸು ಗಾಡಿ ನಿಂತಲ್ಲೇ ನಿಂತು ಹೋಯಿತು ಎಂದು ಹೇಳಿದರು. ಸಮಾಜಕಲ್ಯಾಣ ಖಾತೆಗೆ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಅಂಥವರ ಮಕ್ಕಳಿಗಾಗಿ ಬಂದಿರುವಾಗ ಗೂಡ್ಸುಗಾಡಿ ನಿಂತುಕೊಂಡು ಬಿಟ್ಟಿತು, ಇಂಜನ್ನು ಹೊರಟುಹೋಯಿತು ಅನ್ನುವಂತ ಆಗಬಾರದು. ಸಮಾಜ ಕಲ್ಯಾಣ ಶಾಖೆಯವರು ಸಹಾಯ ನೀಡುತ್ತೇವೆ ಅಂದಾಗ ಅನೇಕ ಸಂಸ್ಥೆಗಳು ಹುಟ್ಟಿಕೊಂಡು ಬರುತ್ತವೆ. ಕೋ ಆಪರೇಟಿವ್ ಸೊಸೈಟಿಗೆ ಸಬ್‌ಸಿಡಿ ಕೊಡುತ್ತೇವೆ ಅಂದಾಗ ಅನೇಕ ಕೋ ಆಪರೇಟಿವ್ ಸೊಸೈಟಿಗಳು ರಿಜಿಸ್ಟರಾಗಿ ಹೋಗುತ್ತವೆ. ಸೋಷಿಯಲ್ ವೆಲ್‌ಫೇರ್ ಇಲಾಖೆಯವರು ಕೊಂಚ ದುಡ್ಡು ಕೊಡುತ್ತಾರೆಂದರೆ ಅನೇಕ ಪುಟ್ಟ ಪುಟ್ಟ ಮಂಡಳಿಗಳು ಸ್ಥಾಪನೆಯಾಗುತ್ತವೆ. ಆದರೆ ಅವುಗಳಿಂದ ಸಾಧನೆಯಾಗಿರತಕ್ಕಂಥಾದ್ದು ಏನು ಅನ್ನುವುದನ್ನು ತಿಳಿಯಬೇಕಾದುದು ಯೋಗ್ಯ. ನನ್ನ ಅಭಿಪ್ರಾಯದಲ್ಲಂತೂ ಏನೂ ಇಲ್ಲವೆಂದು ಕಾಣುತ್ತದೆ.

ಸಮಾಜ ಸೇವೆ ಅನ್ನತಕ್ಕಂಥಾದ್ದು ಇಂಥ ಸಂಸ್ಥೆಗಳಿಂದ ಆಗಲಾರದು ಎನ್ನುವುದು ನನ್ನ ಅಬಿಪ್ರಾಯ. ನಾವು ಬೇಕಾದಷ್ಟು ಹಣ ವೆಚ್ಚ ಮಾಡುತ್ತೇವೆ. ಸಮಾಜದ ಏರುಪೇರುಗಳನ್ನು ತೆಗೆದುಹಾಕುವುದಕ್ಕೆ ಏನಾದರೂ ಮಾಡೋಣ. ಸ್ತ್ರೀಯರನ್ನು, ಮಕ್ಕಳನ್ನು, ವೈದ್ಯರನ್ನು ಪೋಷಣೆ ಮಾಡುವುದಕ್ಕೆ ಸಂಪೂರ್ಣವಾದಂಥ ಸಹಕಾರವನ್ನು ಕೊಡೋಣ. ಆದರೆ ಈ ಸಂಸ್ಥೆಗಳು ಯೋಗ್ಯವಾದ ರೀತಿಯಲ್ಲಿ ಕೆಲಸ ಮಾಡಬೇಕು ಅನ್ನುವುದನ್ನು ಮಾತ್ರ ನಾನು ಹೇಳುತ್ತೇನೆ. ಇದು ಆಫೀಸಿನಲ್ಲಿ ಕೂತುಕೊಂಡು ಕೆಲಸ ಮಾಡುವ ರೀತಿಯಲ್ಲಿ ಆಗುವುದಿಲ್ಲ. ಗಂಡಸರ ಮಾತು ಹೋಗಲಿ. ಇದು ಹೆಂಗಸರು ಮಾಡಬೇಕಾದ ಕೆಲಸ ಎಂದು ನನ್ನ ಅಭಿಪ್ರಾಯ.

ಸಮಾಜ ಕಲ್ಯಾಣವಾಗಬೇಕಾಗಿರುವ ಪಕ್ಷದಲ್ಲಿ ಅದು ಹೆಂಗಸರಿಂದ ಮಾತ್ರ ಸಾಧ್ಯ ಅಂತ ಅಂದುಕೊಂಡಿದ್ದೇನೆ. ನನಗೆ ಬಹಳ ಸಂತೋಷವಾದುದು ಅಂದರೆ ಇವತ್ತಿನ ದಿವಸ ವೃತ್ತಪತ್ರಿಕೆಗಳಲ್ಲಿ ಒಂದು ಸುದ್ದಿಯನ್ನು ಕೇಳಿದೆ. ಪದವೀಧರರಾಗಿರತಕ್ಕಂಥ ಮಹಿಳೆಯರು ಒಂದು ಸಂಸ್ಥೆಯನ್ನು ಸ್ಥಾಪನೆ ಮಾಡಿಕೊಂಡಿದ್ದಾರೆ. Federation of university women ಎಂದು, ಈ ಸಂಸ್ಥೆಯ ಜನ ನಾನಾ ಸಮಿತಿಗಳನ್ನು ಮಾಡಿಕೊಂಡು ಆಸ್ಪತ್ರೆಗಳಲ್ಲಿರತಕ್ಕಂಥ ರೋಗಿಗಳನ್ನು ನೋಡತಕ್ಕಂಥಾದ್ದು, ಜೈಲಿಗಳಲ್ಲಿರತಕ್ಕಂಥ ಖೈದಿಗಳನ್ನು ನೋಡತಕ್ಕಂಥಾದ್ದು ನಿರ್ಗತಿಕರಾಗಿರತಕ್ಕಂಥ ಮಕ್ಕಳನ್ನು ಪಾಲನೆ ಮಾಡತಕ್ಕಂಥಾದ್ದು ವಿದ್ಯಾರ್ಥಿನಿಯರಿಗೆ ವಸತಿ ಗೃಹಗಳನ್ನು ಮಾಡಿಕೊಡತಕ್ಕಂಥಾದ್ದು, ನೌಕರಿಯಲ್ಲಿರತಕ್ಕಂಥ ಹೆಣ್ಣು ಮಕ್ಕಳಿಗೆ ಮತಿಗಳನ್ನು ನಿರ್ಮಾಣ ಕೊಡತಕ್ಕಂಥಾದ್ದು. ಮುಂತಾದ ಯೋಗ್ಯವಾದ ಉದ್ದೇಶಗಳನ್ನು ಇಟ್ಟುಕೊಂಡಿದ್ದಾರೆ. ಈ ಸಂಸ್ಥೆಯಲ್ಲಿ ಕೇವಲ ಪದವೀಧರರಿಗೆ ಮಾತ್ರವಲ್ಲ ಕಾಲೇಜಿನಲ್ಲಿ ಕಾಲಿಟ್ಟಿರುವವರೂ ಸದಸ್ಯರಾಗಬಹುದು. ಕಾಲೇಜಿನ ಮುದ್ರಾಣಾರಣವಾಗಿದ್ದರೆ ಅವರು ಈ ಸಂಸ್ಥೆಯ ಸದಸ್ಯರಾಗಲು ಅರ್ಹರು. ವಿದ್ಯಾವತಿಯರು ಈ ಸಂಸ್ಥೆಯನ್ನು ಸೇರಿ ಕೆಲಸ ಮಾಡುವ ಪಕ್ಷದಲ್ಲಿ ಇದರ ಕೆಲಸ ಬಹಳ ಸುಸೂತ್ರವಾಗಿ ನಡೆಯುತ್ತದೆ. ನನಗೆ ಏನು ಅನ್ನಿಸುತ್ತದೆಂದರೆ ಇಂಥ ಸಂಸ್ಥೆಗಳು ಹಲವಾರು ಹುಟ್ಟಿಕೊಂಡು ಆಸ್ಪತ್ರೆಗಳಲ್ಲಿರತಕ್ಕಂಥ ರೋಗಿಗಳನ್ನು ನೋಡಿ ಔಷಧ ಉಪಚಾರಗಳನ್ನು ಕೊಟ್ಟರೆ ಉತ್ತಮ. ಆಸ್ಪತ್ರೆ ವಿಸಿಟರ್ಸ್ ಬೋರ್ಡಿನಲ್ಲಿ ನಾವು ಇರಬಹುದು, ಜೈಲಿನಲ್ಲಿ ಖೈದಿಗಳನ್ನು ನಾವು ನೋಡುತ್ತೇವೆಂದು ಜೈಲಿನ ವಿಸಿಟರ್ಸ್ ಬೋರ್ಡಿನಲ್ಲಿರಬಹುದು. ಇವುಗಳಲ್ಲಿ ಅಧಿಕಾರ ಮುಖ್ಯವಲ್ಲ. ಹಣ ಮುಖ್ಯವಲ್ಲ; ಮುಖ್ಯವಾಗಿರತಕ್ಕಂಥಾದ್ದು ಸೇವಾ ಧರ್ಮ. ನಿನ್ನೆ ದಿವಸ ಜನ್ಮ ತಾಳಿರತಕ್ಕಂಥ ಈ ಹೊಸ ಸ್ತ್ರೀಯರ ಸಂಸ್ಥೆಯ ಒಬ್ಬೊಬ್ಬ ಸದಸ್ಯರೂ ನಿರ್ಗತಿರರಾಗಿರತಕ್ಕಂಥ, ಅನಾಥರಾಗಿರತಕ್ಕಂಥ, ಸ್ಲಮ್ ಏರಿಯಾಗಳಲ್ಲಿರತಕ್ಕಂಥ ಮಕ್ಕಳು ಇದ್ದರೆ ಅವರಲ್ಲಿ 4 ಮಕ್ಕಳಿಗಾದರೂ ತಲೆ ಮೇಲೆ, ಮೈಮೇಲೆ ನೀರು ಹಾಕಿ ಸ್ನಾನ ಮಾಡಿಸಿ ಬಟ್ಟೆ ತೊಡಿಸಿದರೆ ಅವರು ಶುಭ್ರವಾಗುತ್ತಾರೆ. ಒಬ್ಬೊಬ್ಬ ಸದಸ್ಯರೂ 4 ಜನಗಳಿಗೆ ಈ ರೀತಿ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದರೆ, ಬೆಂಗಳೂರಿನಲ್ಲಿ ಸುಮಾರು 5–6 ಸಾವಿರ ಗ್ರಾಜುಯೇಟುಗಳು ಇರಬಹುದು, 20 ಸಾವಿರ ಮಕ್ಕಳು ಶುಭ್ರವಾಗಿ ಇರುತ್ತಾರೆ. ಸ್ನಾನ ಮಾಡುತ್ತಾರೆ ನಾನು ಇದನ್ನು ಕಳಕಳಿಯಿಂದ ನಿವೇದನೆ ಮಾಡಿಕೊಳ್ಳುತ್ತಿದ್ದೇನೆ. ಏತಕ್ಕೆ ಹೇಳುತ್ತಿದ್ದೇನೆಂದರೆ ಈ ಹೊತ್ತು ನಮಗೆ ಬೇಕಾಗಿರತಕ್ಕಂಥಾದ್ದು ಫಾರಂ ಅಲ್ಲ, ಸೇವಾ ಧರ್ಮ ಅನ್ನತಕ್ಕಂಥಾದ್ದು ಹೋಗಿದೆ ಅಧಿಕಾರ ದಾಹ ಅನ್ನುವುದು ಬೆಳೆಯುತ್ತಾ ಇದೆ. ಅಧಿಕಾರ ದಾಹ ಬೆಳೆಯುತ್ತಾ ಇರತಕ್ಕಂಥ ಕಾಲದಲ್ಲಿ ಸೇವಾ ಧರ್ಮ ಬೆಳೆಯಬೇಕಾದರೆ, ಗಾಂಧಿಯವರ ನೇತೃತ್ವದಲ್ಲಿ ವಿದ್ಯಾವಂತ ಮಹಿಳೆಯರು ಮಾಡಿದ ನಿಸ್ವಾರ್ಥ ಸೇವೆ ನಡೆಯಬೇಕು. ಮಹಾತ್ಮಗಾಂಧೀಜಿಯವರು ನಮ್ಮ ಸಮಾಜದಲ್ಲಿ ಏನು ಅದ್ಭುತ ಕ್ರಾಂತಿಯನ್ನು ಮಾಡಿದರೋ ಅಂಥ ಕ್ರಾಂತಿ ನಮ್ಮಲ್ಲಿ ನಡೆಯಬೇಕು. ಹೆಣ್ಣು ಮಕ್ಕಳು ಈ ಕೆಲಸವನ್ನು ಮಾಡಬೇಕಾಗಿದೆ. ಈ ಸೇವಾ ಮನೋಧರ್ಮ ಕ್ರಾಂತಿಯನ್ನು ಎಬ್ಬಿಸತಕ್ಕ ಕೆಲಸ ಈ ಹೊತ್ತು ಶ್ರೀಮತಿ ಯಶೋಧರ ದಾಸಪ್ಪನವರ ಕೆಲಸ ಅಂತ ನಾನು

ಅಂದುಕೊಂಡಿದ್ದೇನೆ. ಮಾತಿಗಿಂತ ಕೃತಿಗೆ ಶಕ್ತಿಗಿಂತ ಶ್ರದ್ಧೆಗೆ ಅದರಲ್ಲಿಯೂ ಭಾಷೆಗಿಂತ ಭಾವನೆಗೆ ಪ್ರಧಾನವಾಗಿರತಕ್ಕಂಥ ಸೇವಾ ವೃತ್ತಿ ಮನೋಭಾವ ಮಹಿಳೆಯಲ್ಲಿದೆ; ಮಹಿಳೆಯರಲ್ಲಿ ತಾಯಿತನದ ಒಂದು ಶಕ್ತಿ ಇದೆ. ಆ ಆದಿಶಕ್ತಿಯಿಂದ ನಮ್ಮ ಸಮಾಜ ಉದ್ಧಾರವಾಗುತ್ತದೆ. ಅವರು ಯಾವ ಕ್ಷೇತ್ರದಲ್ಲಿಯೇ ಇರಲಿ ಬಿಡಲಿ, ವೃತ್ತಿಯೊಳಗೆ ಇರಲಿ ಬಿಡಲಿ, ಅವರು ಸಮಾಜ ಸೇವಾ ಕಾರ್ಯದಲ್ಲಿ ಮಗ್ನರಾಗಿದ್ದ ಪಕ್ಷದಲ್ಲಿ ನಮ್ಮ ದೇಶದ ಕಲ್ಯಾಣವಾಗುತ್ತದೆ. ನಮ್ಮ ರಾಜ್ಯದಲ್ಲಿ ಸುಖೀರಾಜ್ಯ ಸ್ಥಾಪನೆಯಾಗಲು ಅವಕಾಶವಾಗುತ್ತದೆ. ಇಂಥ ಶಕ್ತಿಯನ್ನು ಪ್ರಚೋದನೆ ಮಾಡಬೇಕಾದುದು ಆ ಆದಿಶಕ್ತಿ; ಆ ಆದಿಶಕ್ತಿ ಶ್ರೀಮತಿ ಯಶೋಧರ ದಾಸಪ್ಪ ಇಲ್ಲಿ ಇದ್ದ ಪಕ್ಷದಲ್ಲಿ ಬಹಳ ಸಂತೋಷವಾಗುತ್ತಿತ್ತು. ಇನ್ನು ಉಳಿದಿರತಕ್ಕಂಥ ಪಂಚವಾರ್ಷಿಕ ಯೋಜನೆಯ ಎರಡು ವರ್ಷಗಳಲ್ಲಿ ಹೆಚ್ಚಿನ ಸೇವೆ ಆ ಶಕ್ತಿಯ ಮೂಲಕ ಎಷ್ಟು ಸಿಗುತ್ತದೊ ಅಷ್ಟರ ಮಟ್ಟಿಗೆ ಸುಖೀರಾಜ್ಯದ ಗುರಿ ಮುಟ್ಟುತ್ತೇವೆ ಅನ್ನುವುದೇ ಸಾಧ್ಯ. ಇಂಥ ಸೇವಾ ಧರ್ಮದ ಮನೋಭಾವ ಕ್ರಾಂತಿ ನಮ್ಮ ದೇಶದಲ್ಲಿ ಆಗುವ ಹಾಗೆ, ಸುಸೂತ್ರವಾಗಿ, ಯೋಗ್ಯವಾದ ರೀತಿಯಲ್ಲಿ ಸುಖೀರಾಜ್ಯದ ಕ್ರಾಂತಿ ಹಾಗುವ ಹಾಗೆ ಆಡಳಿತ ಸೂತ್ರವನ್ನು ಓಡಿದಿರತಕ್ಕಂಥ ಜನ ನಡೆಸಲಿ ಅಂತ ಹೇಳಿ, ಇಷ್ಟು ಔದಾರ್ಯವನ್ನು ತೋರಿಸಿದ್ದಕ್ಕೆ ಕೃತಜ್ಞತೆಯನ್ನು ವ್ಯಕ್ತಪಡಿಸಿ ನಾನು ನನ್ನ ಭಾಷಣವನ್ನು ಮುಗಿಸುತ್ತೇನೆ. ಸ್ವಾಮಿ.

– * –

# II. ಹಣಕಾಸು ವಿಚಾರಗಳ ಕುರಿತಂತೆ ಪ್ರೊ: ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು:

## 1. 1953ರ ಸಪ್ಲಿಮೆಂಟರಿ ಎಸ್ಟಿಮೇಟ್ಸ್ ಕುರಿತಂತೆ ನಡೆದ ಚರ್ಚೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ – ಮಾನ್ಯ ಸಭಾಪತಿಗಳೇ, ಈ ಸಪ್ಲಿಮೆಂಟರಿ ಎಸ್ಟಿಮೇಟ್ಸ್ ವಿಚಾರದಲ್ಲಿ ಹೋದಸಲ ಇದಕ್ಕೆ ಎಷ್ಟು ಪ್ರತಿಭಟನೆ ಮಾನ್ಯ ಸದಸ್ಯರಿಂದ ಬಂದಿತ್ತೋ ಅಷ್ಟೂ ಪ್ರತಿಭಟನೆ ಇದಕ್ಕೆ ಬೇಕಿಲ್ಲವೆಂದು ಹೇಳುತ್ತೇನೆ. ಅದಕ್ಕೆ ಕಾರಣ ಇಷ್ಟು: ಇದನ್ನು charged Items ಮತ್ತು voted tems ಎಂಬುದಾಗಿ ಎರಡು ಭಾಗವಾಗಿ ವಿಂಗಡಿಸಿ ನಮ್ಮ ಮುಂದೆ ಇಟ್ಟಿದ್ದಾರೆ. ಸಾರ್ವಜನಿಕರ ಸಂಬಂಧಪಟ್ಟ ಕಾರ್ಯಗಳಿಗೆ ಅನ್ವಯಿಸುವ ಮೊಬಲಗೆಲ್ಲಾ charged Items ಎಂಬ ಬಾಬಿನಲ್ಲಿ ಸಮೂದಾಗಿದೆ.

ಆದ್ದರಿಂದ ಈಗ ಸಭೆಯ ಮುಂದೆ ಇರತಕ್ಕ ಸಪ್ಲಿಮೆಂಟರಿ ಗ್ರಾಂಟಿನಲ್ಲಿ ಕೋಟ್ಯಾಂತರ ರೂಪಾಯಿಗಳ ಅಂಕಿ ಕಂಡು ಬಂದರೂ ಕೂಡ ಇಷ್ಟೂ ಹಣ ಖರ್ಚು ಮಾಡಲೇಬೇಕಾಗುತ್ತದೆ ಎಂದು ಗಾಬರಿಪಡಬೇಕಾಗಿಲ್ಲ. ವೋಟೆಡ್ ಐಟಂನಲ್ಲಿ ಕೇಳಿರುವುದು 46 ಲಕ್ಷ ರೂಪಾಯಿ. ಅದರಲ್ಲೂ ಕೂಡ ಹೆಚ್ಚು ಭಾಗವನ್ನು ರಸ್ತೆಗಳ ರಿಪೇರಿಗೆ ಎಂದು ಕೇಳಿದ್ದಾರೆ. ಈ ರಸ್ತೆಗಳ ರಿಪೇರಿಗಾಗಿ ಕೇಳಿರುವ ವಿಚಾರದಲ್ಲಿ ನನ್ನ ಮಾನ್ಯ ಮಿತ್ರರಾದ ರಾಜಗೋಪಾಲಯ್ಯಂಗಾರ್‌ರವರು ಹೇಳಿದ್ದಾರೆ. ನಮ್ಮ ಮೈಸೂರು ಸಂಸ್ಥಾನದಲ್ಲಿರತಕ್ಕ ನೂರಾರು ಮೈಲಿ ರಸ್ತೆಗಳಲ್ಲಿ ಕೆಲವು ರಸ್ತೆಗಳನ್ನು 150–200 ಮೈಲಿ ರಸ್ತೆಗಳನ್ನು ಬಿಟ್ಟು ಬಿಟ್ಟರೆ – ಮಿಕ್ಕಾದ ರಸ್ತೆಗಳಲ್ಲಿ ಗಾಡಿಗಳು ಹೋಗುವುದೇ ಅಪಾಯಕರವಾಗಿದೆ. ಮಕ್ಕಳು, ಗರ್ಭಿಣಿಯರು, ಸ್ತ್ರೀಯರು, ವೈದ್ಯರು ಪ್ರಯಾಣ ಮಾಡುವ ಇಂತಹ ರಸ್ತೆಗಳಲ್ಲಿ ಪ್ರಯಾಣ ಮಾಡಿದವರು ಓಂತಿರುತ್ತಾರೆಯೇ ಎಂಬುದನ್ನು ನಂಬುವುದೇ ಕಷ್ಟವಾಗಿದೆ. ಈ ರಸ್ತೆಗಳು ಅಂಥ ಪರಿಸ್ಥಿತಿಯಲ್ಲಿವೆ. ನನಗಾದರೂ ಒಂದು ಸಾರಿ ಅನ್ನಿಸಿತು, ನಮ್ಮ ದೇಶದಲ್ಲಿ ಈ ರಸ್ತೆಗಳನ್ನು ರಿಪೇರಿ ಮಾಡುವುದಕ್ಕೆ ಬದಲಾಗಿ ಅದಕ್ಕೆ ವೆಚ್ಚ ಮಾಡುವ ಹಣ ಕಳೆದುಕೊಳ್ಳುವುದಕ್ಕೆ ಬದಲಾಗಿ, ಒಂದೊಂದು ವರ್ಷದಲ್ಲಿ 10–10 ಮೈಲಿಯಂತೆ ಹೊಸರಸ್ತೆ ಮಾಡುವ ಒಂದು ಯೋಜನೆಯನ್ನು ಕೈಕೊಂಡು ಬೇರೆ ರಸ್ತೆಗಳನ್ನೇ ಮಾಡುವುದು ಉಚಿತವೋ ಏನೋ ಅನ್ನುವಷ್ಟು ಕೆಟ್ಟ ಸ್ಥಿತಿಯಲ್ಲಿವೆ ಈ ರಸ್ತೆಗಳು ಇವು ರಿಪೇರಿ ಆಗಬೇಕಾದುದು ಅತ್ಯವಶ್ಯವಾದದ್ದು.

ಸಾಲದ ವಿಷಯದಲ್ಲಿ ಶ್ರೀ ರಾಮಯ್ಯನವರು ಪ್ರಸ್ತಾಪ ಮಾಡಿದರು, ಮೈಸೂರು ಸಂಸ್ಥಾನದಲ್ಲಿ ಹಣಕಾಸಿನ ಪರಿಸ್ಥಿತಿ ಹದಗೆಟ್ಟಿಲ್ಲ. ಭದ್ರವಾಗಿದೆ ಎಂದು ಸಭೆಯ ಅನೇಕ ಮಂದಿ ಅನೇಕ ಬಾರಿ ವ್ಯಕ್ತಪಡಿಸಿದ್ದಾರೆ. ಈಗ ಸರ್ಕಾರದವರು ಮಾಡತಕ್ಕ ಸಾಲವಾದರೂ ಕೂಡ ನಮ್ಮ ಸಂಸ್ಥಾನದಲ್ಲಿ ಅನೇಕ ವರ್ಷಗಳಿಂದ ಯಾವ ಶಾಶ್ವತವಾದಂಥ ದೊಡ್ಡ ದೊಡ್ಡ ಕಾರ್ಯಗಳನ್ನು ನೆರವೇರಿಸಬೇಕೆಂದು ಪ್ರಯತ್ನ ಪಟ್ಟಿದ್ದಾರೆಯೋ ಅಂಥಾ ಕಾರ್ಯಗಳಿಗಾಗಿ ಮೀಸಲಾಗಿಟ್ಟಿದ್ದಾರೆ. ಆದ್ದರಿಂದ ಈ ಪಂಚವಾರ್ಷಿಕ ಯೋಜನೆಯಲ್ಲಿ, ಮೈಸೂರು ಸಂಸ್ಥಾನದಲ್ಲಿ ನಾವು ಇಲ್ಲಿರತಕ್ಕ ಜನರಿಗೆ ಬೇಕಾದ ಸೌಕರ್ಯಗಳನ್ನು ಒದಗಿಸುವುದಕ್ಕೆ ಮಾಡಬೇಕಾದ ಕೆಲಸ ಕಾರ್ಯಗಳನ್ನು ಪೂರ್ತಿ ಮಾಡಬೇಕೆಂದೂ

1. 1953ರ ಸಪ್ಲಿಮೆಂಟರಿ ಎಸ್ಟಿಮೇಟ್ಸ್ ಕುರಿತಂತೆ ನಡೆದ ಚರ್ಚೆಯಲ್ಲಿ (ಜುಲೈ 1953)

ಮತ್ತು ಅದನ್ನು ಫಲಕಾರಿಯಾಗಿ ಜಾಗ್ರತೆ ನಡೆಸುವುದಕ್ಕೆಂದೂ ಈ ಸಾಲಕ್ಕಾಗಿ ಸರ್ಕಾರದವರು ಪ್ರಯತ್ನಿಸಿದ್ದಾರೆ. ಈ ಸಾಲ ಜನರಿಂದ ಬಹಳ ಜಾಗ್ರತೆಯಾಗಿ ದೊರಕಿ ಈ ಕೆಲಸ ಫಲಸ್ವದವಾಗಿ ನಡೆಯುತ್ತದೆ, ಮತ್ತು ಆ ರೀತಿ ನಡೆಯಬೇಕೆಂದು ಆಶೆ ಪಡತಕ್ಕವರಲ್ಲಿ ನಾನೂ ಒಬ್ಬ. ಇದರಿಂದ ದೇಶಕ್ಕೆ ಹಾನಿಯಿಲ್ಲ. ದೇಶಕ್ಕೆ ಸುಖ, ಸಂತೋಷ ಪ್ರಾಪ್ತವಾಗುತ್ತದೆ ಎಂದು ಒತ್ತಾಯವಾಗಿ ವಿಜ್ಞಾಪನೆ ಮಾಡುತ್ತೇನೆ.

ಒಂದು ಮಾತು ಮಾತ್ರ ಇಲ್ಲಿ ಹೇಳಬೇಕಾಗಿದೆ. 10ನೇ ಪುಟದಲ್ಲಿ Estimate of the amounts required for further expenditure in 1953-54 ಎಂಬ 33ನೇ ಬಾಬಿನಲ್ಲಿ Government Presses Pay of Establishment ಎಂದು ಹೇಳಿ 19 ಸಾವಿರ ರೂಪಾಯಿ ಮತ್ತು ಡಿ.ಎ. ಗೋಸ್ಕರ 11 ಸಾವಿರ ರೂಪಾಯಿ ಈ ರೀತಿ ಕೇವಲ 30 ಸಾವಿರ ರೂಪಾಯಿಗಳನ್ನು ಕೇಳಿದ್ದೀರಿ. ಇದೇನೂ ಹೆಚ್ಚಲ್ಲ ಎಂದು ಭಾವನೆ ಮಾಡಿಕೊಳ್ಳಬೇಕು. ಆದರೂ ಕೂಡ ಈ ಸಮಯದಲ್ಲಿ ಒಂದು ಕೋರಿಕೆಯನ್ನು ಸರ್ಕಾರದಲ್ಲಿ ಶೃತಪಡಿಸಬೇಕಾಗಿದೆ. ಈ ಸರ್ಕಾರದ ಪ್ರೆಸ್ಸಿನ ಸಿಬ್ಬಂದಿಗಾಗಿ ಖರ್ಚು ಮಾಡತಕ್ಕ ಹಣ ಅನರ್ಥ ಎಂದೇ ನನ್ನ ಅಭಿಪ್ರಾಯ. ಯಾವ ಕಾರ್ಯಗಳು ಸರಿಯಾಗಿ ನಡೆಯಬೇಕೋ ಅದನ್ನು ಪ್ರೆಸ್ಸಿನಲ್ಲಿ ಸರಿಯಾಗಿ ಮಾಡುತ್ತಿಲ್ಲ. ಉದಾಹರಣೆಗೆ ಒಂದು ಮಾತು ಹೇಳುವುದಾದರೆ, ಮೈಸೂರು ವಿಶ್ವವಿದ್ಯಾಲಯ ಕನ್ನಡ ಪುಸ್ತಕ ಪ್ರಕಟಣೆಯ ಕೆಲಸವನ್ನು 20 ವರ್ಷಗಳಿಗೆ ಹಿಂದೆ ಕೈಗೊಂಡು ಫಲಪ್ರದವಾಗಿ ದೇಶದ ಜನಗಳಿಗೆ ಬೇಕಾದ ಒಳ್ಳೆಯ ಪುಸ್ತಕಗಳನ್ನು ನೀಡುತ್ತಿದೆ. ಆ ಪುಸ್ತಕಗಳ ಪ್ರಕಟಣಾಕಾರ್ಯ ಬಹಳ ಕಡಿಮೆಯಾಗಿದೆ. ತಾವು ಪ್ರಿಂಟ್ ಮಾಡದೇ ಇದ್ದರೂ ಚಿಂತೆ ಇಲ್ಲ. ಇತರ ಮುದ್ರಣಾಲಯಗಳಲ್ಲಾದರೂ ಕೊಟ್ಟು ಪ್ರಿಂಟ್ ಮಾಡಿಸಿ ಕೊಡಿ ಎಂದು ಹೇಳಿದರೂ ಈಚೆಗೆ ಕೊಡುತ್ತಾ ಇಲ್ಲ. ಅವು ಅತ್ಯುತ್ತಮವಾದ, ಶಾಸ್ತ್ರೀಯವಾದ ಗ್ರಂಥಗಳು. ಅವುಗಳ ಹಸ್ತಪ್ರತಿಗಳನ್ನು ಹಾಳುಮಾಡಿಬಿಟ್ಟಿದ್ದಾರೆ. ಈಗ 5–6 ವರ್ಷಗಳ ಹಿಂದೆ ಅರ್ಥಶಾಸ್ತ್ರದ ಮೇಲೆ ಯಾವ ಯಾವ ಪುಸ್ತಕ ರಚಿತವಾದುವೋ ಆ ಪುಸ್ತಕಗಳಲ್ಲಿ ಅರ್ಧಭಾಗ ಕೂಡ ಇಂದು ಪ್ರಿಂಟ್ ಆಗಿಲ್ಲ. ಆದ್ದರಿಂದ ಅಧಿಕಾರ ವರ್ಗದವರಿಗೆ ಹೆಚ್ಚು ಸಂಬಳ ಸಾರಿಗೆಗಳನ್ನು ಕೊಡುವುದಕ್ಕಾಗಲಿ ಅಥವಾ ಅವರಿಗೆ ಡಿ.ಎ. ಕೊಡುವುದಕ್ಕಾಗಲಿ ತಾವು ಕೇಳಿರತಕ್ಕ 30 ಸಾವಿರ ರೂಪಾಯಿಗಳೇನಿದೆಯೋ ಆ ಮೊಬಲಗನ್ನು ಕೊಡಕೂಡದು ಎನ್ನುವುದು ನನ್ನ ಅಭಿಪ್ರಾಯ. ಕೊಡಕೂಡದು ಎನ್ನುವುದಕ್ಕೆ ಇಷ್ಟೇ ಕಾರಣ. ಇವೆರಡೂ ನೋಡಿದ ಪಕ್ಷದಲ್ಲಿ ಕೇವಲ ಅವರು ಏನು ಹೇಳಿದ್ದಾರೆ? ಶಾಸನ ಸಭೆಗಳ ಕೆಲಸ ಮಾಡುವುದಕ್ಕೆ ಬೇಕು ಎಂದು. ಶಾಸನ ಸಭೆಗಳ ಕೆಲಸ ಮೊದಲೂ ಮಾಡುತ್ತಾ ಇದ್ದರು. ಆ ಕೆಲಸವನ್ನು ಈಗಲೂ ಮಾಡುತ್ತಾ ಇದ್ದಾರೆ. ಪ್ರತಿ ವರ್ಷವೂ ಕೂಡ ಹೆಚ್ಚು ಹೆಚ್ಚು ಹಣ ಸುರಿಯುತ್ತಾ ಇದ್ದರೂ ಕೂಡ ಅಲ್ಲಿನ ಕೆಲಸ ಎಷ್ಟು ಫಲಪ್ರದವಾಗಿ ನಡೆಯಬೇಕೋ ಅಷ್ಟು ಫಲಪ್ರದವಾಗಿ ನಡೆಯುತ್ತಿಲ್ಲ, ಖರ್ಚು ಮಾಡತಕ್ಕ ಹಣಕ್ಕೆ ಸರಿಯಾದ ಪ್ರತಿಫಲ ದೊರೆಯುತ್ತಿಲ್ಲ. ವಿಶ್ವವಿದ್ಯಾಲಯದ ಪ್ರಕಟಣಾಕಾರ್ಯ ಅವರು ಮಾಡದೇ ಹೋದ ಪಕ್ಷದಲ್ಲಿ ಇತರರಾದರೂ ಮಾಡುವುದಕ್ಕೆ ಆ ಅಧಿಕಾರಿಗಳು ಅವಕಾಶವನ್ನು ಕಲ್ಪನೆ ಮಾಡಿಕೊಡುವಂತೆ ಮಾಡಬೇಕೆಂದು ನಿವೇದನೆ ಮಾಡಿಕೊಂಡು,

ಈ ಸಭೆಯ ಮುಂದೆ ಇಟ್ಟಿರುವ ಸಪ್ಲಿಮೆಂಟರಿ ಗ್ರಾಂಟು ಸಭೆಯ ಒಪ್ಪಿಗೆಗೆ ಯೋಗ್ಯವಾಗಿದೆ ಎಂದು ತಮ್ಮ ಮೂಲಕ ನಿವೇದನೆ ಮಾಡಿಕೊಳ್ಳುತ್ತೇನೆ.

## 2. ಎಸ್ಟೇಟ್ ಡ್ಯೂಟಿ ಕುರಿತಂತೆ ನಡೆದ ಚರ್ಚೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ) – ಸ್ವಾಮಿ ಸಭಾಪತಿಗಳೇ ಸರ್ಕಾರದವರು ಈ ಸಭೆಯ ಮುಂದೆ ಮಂಡಿಸಿರತಕ್ಕ ನಿರ್ಣಯವನ್ನು ಅವಿರೋಧವಾಗಿ ಈ ಸಭೆ ಒಪ್ಪುವುದು ಯೋಗ್ಯವಾಗಿದೆಯೆಂದು ಹೇಳುವುದಕ್ಕೆ ನಾನು ನಿಂತಿದ್ದೇನೆ. ನಾನಾದರೂ ಕೂಡ ಈ ನಿರ್ಣಯವನ್ನು ಸಂಪೂರ್ಣವಾಗಿ ಸಮರ್ಥನೆ ಮಾಡುತ್ತೇನೆ. ಈ ನಿರ್ಣಯದಲ್ಲಿ ಎರಡು ಅಂಶಗಳು ಅಡಕವಾಗಿದೆ. ಬಹಳ ಯೋಗ್ಯವಾದಂತಹ ಪದಗಳು ಸರ್ಕಾರದ ನಿರ್ಣಯದಲ್ಲಿ ಅಡಕವಾಗಿದೆ.

"In the interest of uniformity in the administration of Law and convenience in the levy and collection of Estate Duty on the agricultural land".

ಎಂದು ಹೇಳುವ ಎರಡು ಅಂಶಗಳೂ ಇಲ್ಲಿಯ ಸದಸ್ಯರ ಮನ್ನಣೆಗೆ ಯೋಗ್ಯವಾಗಿವೆ. ಈ ಹೊತ್ತು ಇಂಡಿಯಾ ದೇಶದಲ್ಲಿ ಈಗಿರತಕ್ಕಂಥಾದ್ದು ಒಂದು ಏಕರಾಜ್ಯ. ಪ್ರಭುತ್ವ ಸಾಧಾರಣವಾಗಿ ಆಡಳಿತವನ್ನು ರಚನೆ ಮಾಡತಕ್ಕಂಥ ಒಂದು ನೀತಿ. ಇದು ಪ್ರಾಂತ ಪ್ರಾಂತಗಳಲ್ಲಿ, ಸಂಸ್ಥಾನ ಸಂಸ್ಥಾನಗಳಲ್ಲಿ ಭಿನ್ನ ಭಿನ್ನವಾದ ರೀತಿಗಳಲ್ಲಿ ಇದ್ದ ಪಕ್ಷದಲ್ಲಿ ಇಂಡಿಯಾ ದೇಶದ ಕಾನ್‌ಸ್ಟಿಟ್ಯೂಷನ್ ಪ್ರಕಾರ ಯಾವ ಒಂದು ಸಮಾನವಾದ ರೀತಿಯನ್ನು ಎಲ್ಲಾ ಪ್ರಜೆಗಳಿಗೂ ಹರಡಬೇಕೆಂಬ ಧ್ಯೇಯವೇನಿದೆಯೋ ಅದನ್ನು ಸಾಧಿಸುವುದಕ್ಕಾಗುವುದಿಲ್ಲ. ಎರಡನೆಯದಾಗಿ ಈ ತೆರಿಗೆಯನ್ನು ವಸೂಲು ಮಾಡುವುದಕ್ಕೆ ಕೂಡ ಈ ನಿರ್ಣಯವನ್ನು ಒಪ್ಪುವುದರಿಂದ ಅನೇಕ ಸೌಕರ್ಯಗಳು ಲಭಿಸುತ್ತವೆ ಎಂಬ ಉದ್ದೇಶವಿರುವುದರಿಂದಲೂ ಈ ನಿರ್ಣಯವನ್ನು ಈ ಮಾನ್ಯ ಸಭೆ ಒಪ್ಪಬೇಕಾದೀತು. ಇದಕ್ಕಿಂತ ಹೆಚ್ಚಾಗಿ ಈ ಎಸ್ಟೇಟ್ ಡ್ಯೂಟಿ ಎಂಬ ತೆರಿಗೆಯ ಒಂದು ಕಾನೂನೇನಿದೆ ಅದು ಸೆಂಟ್ರಲ್ ಪಾರ್ಲಿಮೆಂಟಿನಲ್ಲಿ ತೀರ್ಮಾನವಾದುದು 1953ರಲ್ಲಿ. ಯಾರಾದರೂ ಹಣವಂತವಾಗಿರುವ ಪ್ರಜೆ ಗತಿಸಿದ ಮೇಲೆ ಅವನ ಆಸ್ತಿಪಾಸ್ತಿಗಳು ಇನ್ನೊಬ್ಬರ ಕೈಸೇರುವ ಕಾಲದಲ್ಲಿ ಸಂಸ್ಥಾನದ ಬೊಕ್ಕಸಕ್ಕೆ ಅದರಲ್ಲಿ ಒಂದು ಭಾಗ ಬರಬೇಕಾದ್ದು ಅತ್ಯಗತ್ಯ. ಎಂಬುದೇ ಈ ಕಾನೂನಿನ, ಆಕ್ಟಿನ ಪರಮ ಉದ್ದೇಶ, ಮುಖ್ಯವಾದ ಉದ್ದೇಶ. ಆದ್ದರಿಂದ ಆಸ್ತಿ ಸಂಪಾದನೆ ಮಾಡುವುದಕ್ಕೆ ಇದರಿಂದ ತೊಂದರೆಯಾದೀತೆಂದು ಭಯ ಯಾರೊಬ್ಬರೂ ಪಡಬೇಕಾಗಿಲ್ಲ. ಆಸ್ತಿಯಲ್ಲಿ ಒಂದು ಭಾಗ ಸರ್ಕಾರದ ಭೊಕ್ಕಸಕ್ಕೆ ಹೋಗಬೇಕಾದೀತು, ಆಸ್ತಿ ಸಂಪಾದಿಸಿರುವವನು ಮೃತಹೊಂದಿದ ಮೇಲೆ ಸರ್ಕಾರಕ್ಕೆ ಅವನ ಆಸ್ತಿಯಲ್ಲಿ ಒಂದು ಭಾಗ ಹೋಗಬೇಕಾದೀತು.

ಮಾನ್ಯ ಸಭಾಪತಿಗಳೇ, ಸುಮಾರು ಏಳೆಂಟು ವರ್ಷಗಳಿಂದ ಇಂಡಿಯಾ ದೇಶದ ಚರಿತ್ರೆಯಲ್ಲಿ ತೆರಿಗೆ ನೀತಿ, ಟ್ಯಾಕ್ಸ್ ಪಾಲಿಸಿ ಎಂದು ಹೇಳುವುದರಲ್ಲಿ ಕ್ರಾಂತಿಕಾರಕವಾದ ಬದಲಾವಣೆಯಾಗಿದೆ.

---

2. ಎಸ್ಟೇಟ್ ಡ್ಯೂಟಿ ಕುರಿತಂತೆ 18.10.1955 ರಂದು ನಡೆದ ಚರ್ಚೆಯಲ್ಲಿ

ಅಪ್ರತ್ಯಕ್ಷವಾಗಿ ತೆರಿಗೆ ಹಾಕುವುದರಿಂದ ಸಾಮಾನ್ಯ ಪ್ರಜೆಗಳಿಗೆ ಕಷ್ಟ ಹೆಚ್ಚಾಗಬಹುದು ಹೊರೆ ಬೀಳಬಹುದು ಎಂದು ಪ್ರತ್ಯಕ್ಷ ತೆರಿಗೆ ಹಾಕಲು ಪ್ರಯತ್ನ ಮಾಡುತ್ತಿದ್ದಾರೆ. ಈ ತೆರಿಗೆ ಕೂಡ ಪ್ರತ್ಯಕ್ಷ ತೆರಿಗೆಗಳಲ್ಲಿ, ಡೈರೆಕ್ಟ್ ಟ್ಯಾಕ್ಸೇಷನ್‌ನಲ್ಲಿ ಒಪ್ಪಬಹುದಾದ ಒಂದು ತೆರಿಗೆ. ಈ ಹೊತ್ತು ಈ ತೆರಿಗೆಯನ್ನು ನಮ್ಮ ದೇಶದಲ್ಲಿ ಇಂಡಿಯಾ ದೇಶದಲ್ಲಿ ಇರತಕ್ಕ ಪ್ರತ್ಯಕ್ಷ ತೆರಿಗೆಗಳನ್ನು ಎಸ್ಟೇಸ್ ಡ್ಯೂಟಿಯನ್ನು ಇತರ ದೇಶಗಳೊಂದಿಗೆ ಹೋಲಿಸಿದರೆ ಯುನೈಟೆಡ್ ಕಿಂಗ್‌ಡಂನಲ್ಲಿ ಸುಮಾರು ಶೇಕಡ 75ರಷ್ಟು ತೆರಿಗೆ ಹಾಕಿದ್ದಾರೆ. ಕೆನಡಾದಲ್ಲಿ ಶೇಕಡ 60ರಷ್ಟು ಹಾಕಿದ್ದಾರೆ. ಜಪಾನ್‌ನಲ್ಲಿ ಶೇಕಡ 70ರಷ್ಟು ಹಾಕಿದ್ದಾರೆ, ಯುನೈಟೆಡ್ ಸ್ಟೇಟ್ಸ್ ಆಫ್ ಅಮೇರಿಕಾದಲ್ಲಿ ಶೇಕಡ 88ರಷ್ಟು ಹಾಕಿದ್ದಾರೆ. ಈ ರೀತಿ ಪ್ರತ್ಯಕ್ಷ ತೆರಿಗೆ ಹಾಕಿದ್ದಾರೆ. ಅಪ್ರತ್ಯಕ್ಷ ತೆರಿಗೆ ಕಡಿಮೆ ಎಂದು ಕಾಣಬಹುದು. ಸಾಮಾನ್ಯವಾಗಿ ಜನರಿಗೆ ಸುಖ ಸೌಂದರ್ಯಗಳನ್ನು ಕೊಟ್ಟಿದ್ದಾರೆ. ಪ್ರತ್ಯಕ್ಷ ತೆರಿಗೆ ಹೆಚ್ಚಿಸಿ ಅಪ್ರತ್ಯಕ್ಷ ತೆರಿಗೆ ಕಡಿಮೆ ಮಾಡಿದಷ್ಟೂ ಪ್ರಜೆಗಳ ಹಿತಸಾಧನೆಗೆ ಸಾಮಾನ್ಯವಾಗಿ ಅವಕಾಶವಾಗುತ್ತದೆ. ಆದುದರಿಂದಲೇ ಇಂಡಿಯಾ ದೇಶದಲ್ಲಿ ಮೊಟ್ಟ ಮೊದಲು ಸ್ವಾತಂತ್ರ್ಯ ಬಂದಮೇಲೆ ರಚಿತವಾದ ಸರ್ಕಾರ ಪ್ರತ್ಯಕ್ಷ ತೆರಿಗೆ ಹಾಕಬೇಕೆಂದು ಉದ್ದೇಶಿಸಿ ಕೇವಲ ಶೇಕಡ 12ರಷ್ಟಿದ್ದುದನ್ನು 45ರಷ್ಟಕ್ಕೆ ಏರಿಸಿತು. ಆಮೇಲೆ ದೇಶದ ಎಲ್ಲಾ ಆಡಳಿತದ ನೀತಿಯನ್ನು ಕ್ರಮಪಡಿಸುವುದಕ್ಕೆ, ಕೆಲವು ಅನುಕೂಲವಾದ ಕೈಗಾರಿಕೆಗಳನ್ನು ಬಲಪಡಿಸುವುದಕ್ಕೆ ಬದಲಾವಣೆ ಮಾಡಿ ಈ ಹೊತ್ತು ಶೇಕಡ 25ರಷ್ಟು ಪ್ರತ್ಯಕ್ಷ ತೆರಿಗೆ ಹಾಕಿದ್ದಾರೆ. ಇದನ್ನು ಕೊಡುವುದಕ್ಕೆ ಯಾರೊಬ್ಬರೂ ಹಿಂತೆಗೆಯುವುದು ಸರಿಯಲ್ಲ.

ಈ ಹೊತ್ತು ಎಸ್ಟೇಟ್ ಡ್ಯೂಟಿಯೆಂಬುದು ಸರ್ಕಾರದಲ್ಲಿ ಅಧಿಕಾರಿಯಾಗಿದ್ದೂ ಹಣ ಸಂಪಾದನೆ ಮಾಡುವವರಿಗೆ ಅನ್ವಯಿಸುತ್ತದೆ. ಕೈಗಾರಿಕೆಯಲ್ಲಿ ಲಕ್ಷಾಂತರ ರೂಪಾಯಿಗಳ ಬಂಡವಾಳ ಹಾಕಿ ಹೆಚ್ಚಾಗಿ ಲಾಭ ಸಂಪಾದನೆ ಮಾಡುವವರಿಗೆ ಅನ್ವಯಿಸುತ್ತದೆ. ಇತರ ಉದ್ಯಮ ಕೈಗೊಂಡು ಆಸ್ತಿ ಮಾಡುವವರಿಗೆ ಅನ್ವಯಿಸುತ್ತದೆ. ಆದರೆ ಭೂಸ್ವಾಮ್ಯ ಪಡೆದಿರುವವರಿಗೆ ನೂರಾರು ಎಕರೆ ಪಡೆದು ಸಾಗುವಳಿ ಮಾಡಿ ವಿಶೇಷ ಲಾಭ ಪಡೆಯುವ ಜನರಿಗೆ ಅನ್ವಯವಾಗುತ್ತಿಲ್ಲ. ಆದ್ದರಿಂದ ಒಂದು ಧರ್ಮದ ದೃಷ್ಟಿಯಿಂದ ನೋಡಿದರೆ ಯಾವುದು ಕೆಲವು ವರ್ಗಗಳಿಗೆ ಒಂದು ಸಮಾಜದಲ್ಲಿ ಅನ್ವಯಿಸುತ್ತದೆಯೋ ಅದನ್ನು ಇತರರಿಗೂ ಅನ್ವಯ ಮಾಡಬೇಕಾದ್ದು ಯೋಗ್ಯ. ಉಚಿತ, ಮಾನ್ಯ ಸಚಿವರು ಹೇಳಿದ ಹಾಗೆ ಅಗ್ರಿಕಲ್ಚರಲ್ ಲ್ಯಾಂಡ್ ಸೇರಿಸಿ ಎಸ್ಟೇಟ್ ಡ್ಯೂಟಿಯನ್ನು ವಿಧಿಸಿರುವುದು ನಮ್ಮ ಇಂಡಿಯಾ ದೇಶದ ಹತ್ತಾರು ಸಂಸ್ಥಾನಗಳಲ್ಲಿ ಕಂಡುಬರುತ್ತದೆ.

ಇನ್ನೊಂದು ಮಾತು ಈ ದಿವಸ ಹೇಳಬೇಕಾಗುತ್ತದೆ. ಇಂಡಿಯಾ ದೇಶದಲ್ಲಿರುವ ಎಲ್ಲಾ 'ಸಿ' ಸ್ಟೇಟ್‌ಗಳಲ್ಲೂ ಅಗ್ರಿಕಲ್ಚರಲ್ ಲ್ಯಾಂಡ್ ಇನ್‌ಕಂ ಇದುವರೆಗೆ ತೆಗೆದುಕೊಂಡಿದ್ದಾರೆ. ಹಾಗಿರುವಾಗ 'ಸಿ' ಸ್ಟೇಟ್ ಮಾಡಿರುವ ಕೆಲಸ 'ಎ' ಸ್ಟೇಟ್ ಆಗಬೇಕಾಗಿರುವ 'ಬಿ' ಸ್ಟೇಟ್ ಆದ ಮೈಸೂರು ಸಂಸ್ಥಾನ ಮಾಡಿಲ್ಲವೆಂದು ಹೇಳುವುದು ಯೋಗ್ಯವಲ್ಲ. ಆ ದೃಷ್ಟಿಯಿಂದ ಇದನ್ನು ಒಪ್ಪಿಕೊಳ್ಳಬೇಕಾದ್ದು ಉಚಿತವೆಂದು ಕಾಣುತ್ತದೆ.

ಇದರಿಂದ ಯಾರಿಗೂ ತೊಂದರೆಯಾಗುವುದಿಲ್ಲ. ಸಂಪಾದನೆ ಮಾಡಿ ಬಿಟ್ಟುಹೋದ ಆಸ್ತಿಗೆ ಮಾತ್ರ ಇದು ಅನ್ವಯಿಸುವುದು. ಇನ್ನೊಂದು ಆದಾಯ, ಬಂಡವಾಳ, ಸಂಪತ್ತು ಎಂಬುದು ಯಾವ ಒಬ್ಬ ಪ್ರಜೆಯಲ್ಲಾಗಲಿ, ಕೆಲವು ಪ್ರಜೆಗಳ ಕೈಲಾಗಲಿ ಇಲ್ಲದಿರುವಂತೆ ಮಾಡುವುದೇ ಡೈರೆಕ್ಟಿವ್ ಪ್ರಿನ್ಸಿಪಲ್ಸ್‌ದ ಮುಖ್ಯೋದ್ದೇಶವೆಂದು ನಮ್ಮ ರಾಜ್ಯಾಂಗ ವಿಧಾನದ 39ನೆಯ ಕಲಂನಲ್ಲಿ ಇಂಡಿಯಾದ ಕಾನ್‌ಸ್ಟಿಟ್ಯೂಷನ್ ರಚಿಸಿರುವ ಜನರೇ ಒಪ್ಪಿದ್ದಾರೆ. ಆ ರೀತಿ ಒಪ್ಪಿಕೊಂಡಿದ್ದ ಪಕ್ಷದಲ್ಲಿ ಒಂದು ಸಂಸ್ಥಾನದ, ಒಂದು ರಾಷ್ಟ್ರದ ಸಂಪತ್ತು ಸಮಾನತೆಯಿಂದ ಜನರಿಗೆ ವಿಭಾಗವಾಗಬೇಕಾದರೆ ಈ ತರಹದ ತೆರಿಗೆಗಳಿಂದ ಮಾತ್ರ ಸಾಧ್ಯವೆಂಬುದನ್ನು ಈ ಸಭೆ ಗಮನಿಸಬೇಕು. ಈ ಹೊತ್ತು 1955ನೆಯ ಇಸವಿಯಲ್ಲಿ, ಇಪ್ಪತ್ತನೆಯ ಶತಮಾನದಲ್ಲಿ ಕಾಲದ ಹೆಮ್ಮೆ ಮತ್ತು ನೆಲದ ಹೆಮ್ಮೆ ಇವೆರಡೂ ಉಳಿಯಬೇಕಾಗಿದೆ. ಸರ್ವ ಸಮಾನತೆ ಕಂಡು ಬರಬೇಕಾದ ದಿನವಿದು. ಆದ್ದರಿಂದ ಯಾವ ಒಬ್ಬ ವ್ಯವಸಾಯಗಾರರಿಗೂ ತೊಂದರೆಯಾಗಲಾರದು ಈ ತೆರಿಗೆಯ ನೀತಿ ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ಒಂದೇ ರೀತಿಯಾದರೆ ಭಾರತಕ್ಕೆ ಸಹಾಯ ಮಾಡಿದ ಹಾಗಾಗುತ್ತದೆ. ಆಡಳಿತ ದೃಷ್ಟಿಯಿಂದ ಸರ್ವ ಸಮಾನತೆಗೆ ಅವಕಾಶವಾಗುತ್ತದೆ. ಈ ನಾಲ್ಕೈದು ಕಾರಣಗಳಿಂದ ಈ ನಿರ್ಣಯಕ್ಕೆ ಸಂಪೂರ್ಣ ಒಪ್ಪಿಗೆ ಕೊಟ್ಟು ಮಾನ್ಯ ಸದಸ್ಯರೆಲ್ಲರೂ ಏಕ ಮನಸ್ಸಿನಿಂದ ಬೆಂಬಲ ನೀಡಬೇಕೆಂದು ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

## 3. ಹಣ ವಿನಿಯೋಗ ಮಸೂದೆ, 1957 ಕುರಿತಂತೆ ನಡೆದ ಚರ್ಚೆಯಲ್ಲಿ

Sri M.P.L Sastry : My point is that the expenditure that the Hon'ble Finance Minister told the House 25 days ago under the Revenue is entirely different from the expenditure that he has tried to tell us today. That is the position.

ಆಯವ್ಯಯದ ಪಟ್ಟಿಯ ಮೇಲೆ ನಿಂತಿರುವ ಈ ಹಣದ ವಿನಿಯೋಗದ ಮಸೂದೆಯನ್ನು ಪರಿಶೀಲನೆ ಮಾಡುವಾಗ ಎಲ್ಲಾ ಬಾಬುಗಳನ್ನೂ ಪರಿಶೀಲಿಸಿ ಚರ್ಚೆ ಮಾಡುವುದಕ್ಕೆ ಬದಲು ಈ ಹಣ ಯಾವ ರೀತಿ ಯಾವುದಕ್ಕೆ ವಿನಿಯೋಗವಾಗಬೇಕೆಂಬ ಬಗ್ಗೆ ಕೆಲವು ಸಲಹೆಗಳನ್ನು ಕೊಡಲಿಚ್ಛಿಸುತ್ತೇನೆ. ಸುಮಾರು 126 ಕೋಟಿ ರೂಪಾಯಿಗಳ ವ್ಯವಹಾರ ನಡೆಸತಕ್ಕ ಸರ್ಕಾರ ವಿವಿಧ ಬಾಬುಗಳಿಗೆ ತೆಗೆದಿಟ್ಟಿರುವ ಹಣವನ್ನು ಫಲಕಾರಿಯಾಗುವ ರೀತಿಯಲ್ಲಿ ವೆಚ್ಚಮಾಡಬೇಕೆಂದು ಸಲಹೆ ಮಾಡಿದರೆ ತಪ್ಪಾಗಲಾರದೆಂದು ತಿಳಿದುಕೊಂಡಿದ್ದೇನೆ. ಈ ದೃಷ್ಟಿಯಿಂದ ಎರಡು ಮೂರು ಬಾಬುಗಳಿಗೆ ಸಂಬಂಧಪಟ್ಟ ಹಾಗೆ ನಾಲ್ಕಾರು ವಿಷಯಗಳನ್ನು ಹೇಳುತ್ತೇನೆ.

ಸರ್ಕಾರ ಕೈಗೊಂಡಿರುವ ಕೈಗಾರಿಕೋದ್ಯಮಗಳೇನುಂಟೋ ಅವು ಲಾಭಕರವಾಗಿ ಮತ್ತು ತೃಪ್ತಿಕರವಾಗಿ ನಡೆಯುತ್ತಿಲ್ಲ. ಇವುಗಳಿಂದ ಉತ್ಪನ್ನವಾಗುವ ಪದಾರ್ಥಗಳು ಜನರ ಬಳಕೆಗೆ ಅನುಕೂಲವಾಗಿಲ್ಲ. ಅವುಗಳ ಮೇಲೆ ಸರ್ಕಾರ ಹಾಕಿರುವ ಹಣಕ್ಕೆ ಸರಿಯಾದ ಲಾಭ ಬರುತ್ತಿಲ್ಲ. ಲಾಭ ಬರುವುದು ಹಾಗಿರಲಿ, ಬಡ್ಡಿ ಕೂಡ ಬರುತ್ತಿಲ್ಲವೆಂದು ಹೇಳುತ್ತೇನೆ. ಈ ವಿಷಯದಲ್ಲಿ ದೊಡ್ಡ

3. ಹಣ ವಿನಿಯೋಗ ಮಸೂದೆ, 1957 ಕುರಿತಂತೆ 31.7.1957 ರಂದು ನಡೆದ ಚರ್ಚೆಯಲ್ಲಿ

ವ್ಯಾಪಾರೋದ್ಯಮಿಗಳು ಇಲ್ಲಿಗೆ ಒಂದು ಪರಿಶೀಲಿಸಿ ಮಾಡಿರುವ ಸಲಹೆಗಳನ್ನು ಅನುಸರಣೆ ಮಾಡಿಲ್ಲ. ಪ್ರತಿ ವರ್ಷವೂ ಇವುಗಳ ಬಗ್ಗೆ ಚಾರ್ಟರ್ಡ್ ಅಕೌಂಟೆಂಟ್‌ಗಳು ಮಾಡಿರುವ ಸಲಹೆಗಳನ್ನು ಸಭೆಯು ಮುಂದಿಡಬೇಕೆಂದು ಹೇಳಿರುವುದು ಕಾರ್ಯಗತ ಮಾಡಿಲ್ಲ. ಉದಾಹರಣೆಗೆ ಪಿಂಗಾಣಿ ಕಾರ್ಖಾನೆಯಲ್ಲಿ ಇನ್‌ಸುರೇಟರುಗಳನ್ನು ತಯಾರು ಮಾಡಬೇಕೆಂದು ಏರ್ಪಾಡು ಮಾಡಿದರು. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಇಲ್ಲಿ ತಯಾರಾದ ಇನ್‌ಸ್ಯುಲೇಟರುಗಳನ್ನು ಪರೀಕ್ಷೆ ಮಾಡಿದಾಗ ನೂರಕ್ಕೆ ಒಂದು ಕೂಡ ಸರಿಯಾಗಿ ತಯಾರಾಗುತ್ತಿಲ್ಲವೆಂದು ಗೊತ್ತಾಯಿತು. ಜಪಾನ್ ಕಂಪನಿ ಬಂದಿದೆ. ಕೋಟ್ಯಾಂತರ ರೂಪಾಯಿ ಇದಕ್ಕಾಗಿ ಖರ್ಚು ಮಾಡಿದ್ದೇವೆ, ಪ್ರಧಾನಿ ನೆಹರು ಅವರ ಪ್ರಾರಂಭೋತ್ಸವನ್ನೂ ಮಾಡಿದ್ದಾರೆ. ಆದರೆ ಏನು ಪ್ರಯೋಜನ? 'Round man in a square hole and a square man in a round hole' ಎನ್ನುವ ಹಾಗೆ ಮಾಡಿ ಕೈಗಾರಿಕೆಗಳನ್ನು ನಡೆಸುತ್ತಿದ್ದಾರೆ. ಆಯುರ್ವೇದ ಕಾಲೇಜಿಗೆ ಆಯುರ್ವೇದವನ್ನು ತಿಳಿಯದೆಯಿರುವವರನ್ನು ಹೇಗೆ ಅಧ್ಯಾಪಕರಾಗಿ ನೇಮಕ ಮಾಡುತ್ತಿದ್ದಾರೆಯೋ ಹಾಗೆಯೇ ಕೈಗಾರಿಕೆಯಲ್ಲಿ ಪರಿಶ್ರಮವಿಲ್ಲದೇಯಿರುವವರನ್ನು ನೇಮಕ ಮಾಡಿದ್ದಾರೆ. ಪಿಂಗಾಣಿ ಕಾರ್ಖಾನೆಯಲ್ಲಿ ಒಳ್ಳೆಯ ಬಣ್ಣದ ಕುಂಡಗಳನ್ನು ತಯಾರು ಮಾಡತಕ್ಕ ಜನರು ಕೂಡ ಇಲ್ಲ. ಬೇರೆಯವರು ಬಹಳ ಅಗ್ಗವಾಗಿ ಉತ್ತಮವಾದ ಬಣ್ಣದ ಕುಂಡಗಳನ್ನು ತಯಾರು ಮಾಡುತ್ತಿದ್ದಾರೆ. ಈ ಕಾರ್ಖಾನೆಯಲ್ಲಿ ಒಂದು ಪಿಂಗಾಣಿ ಕಪ್ ತಯಾರು ಮಾಡಿ ಆರಾಣೆಗೆ ಕೊಡುತ್ತಿದ್ದಾರೆ. ಅದನ್ನು ಎತ್ತಬೇಕಾದರೇ ಕಷ್ಟ 150 ಪೌಂಡು ತೂಕವಿದೆಯೇನೋ ಎನಿಸುತ್ತದೆ. ಇದಕ್ಕೆ ಕಾರಣ ಯಾರು ಯಾವ ಕೆಲಸಕ್ಕೆ ಅರ್ಹರೋ, ಯಾರಿಗೆ ಆ ಕೆಲಸಕ್ಕೆ ಬೇಕಾದ ಟೆಕ್ನಿಕಲ್ ಶಿಕ್ಷಣ ಮತ್ತು ಯೋಗ್ಯತೆಯಿದೆಯೋ ಎನಿಸುತ್ತದೆ. ಇದಕ್ಕೆ ಕಾರಣ ಯಾರು ಯಾವ ಕೆಲಸಕ್ಕೆ ಅರ್ಹರೋ ಯಾರಿಗೆ ಆ ಕೆಲಸಕ್ಕೆ ಬೇಕಾದ ಟೆಕ್ನಿಕಲ್ ಶಿಕ್ಷಣ ಮತ್ತು ಯೋಗ್ಯತೆಯಿದೆಯೋ ಅವರನ್ನು ಆ ಕೆಲಸಕ್ಕೆ ಹಾಕಿಲ್ಲ. ಸುಮ್ಮನೆ ಹಣ ಖರ್ಚು ಮಾಡುತ್ತಿದ್ದಾರೆ. ಪೋರ್ಸ್‌ಲೇನ್ ಕಾರ್ಖಾನೆ ಒಂದು ಮಾತ್ರ ಸರಿಯಾಗಿ ನಡೆಯುತ್ತಿಲ್ಲ. ಬೇರೆ ಕೈಗಾರಿಕೆಗಳನ್ನು ನಡೆಯುತ್ತಿವೆಯೆಂದು ಸರ್ಕಾರದವರು ಹೇಳುತ್ತಾರೆ. ಆದರೆ ಅವುಗಳೂ ಸಮರ್ಪಕವಾಗಿ ನಡೆಯುತ್ತಿಲ್ಲವೆಂದು ಎಲ್ಲರಿಗೂ ಗೊತ್ತಿರುವ ವಿಷಯ. ಆದುದರಿಂದ ಈಗಿರುವ ವ್ಯವಸ್ಥೆಯನ್ನು ಬದಲಾಯಿಸಬೇಕು. ತಕ್ಷಣ ಒಂದು ಸಮಿತಿಯನ್ನು ಸರ್ಕಾರ ನಿರ್ಮಾಣಮಾಡಿ ಈ ಕೈಗಾರಿಕೆಗಳಲ್ಲಿರುವ ಲೋಪದೋಷಗಳನ್ನು ಪರಿಶೀಲನೆ ಮಾಡಿ ತೊಡೆದು ಹಾಕಬೇಕು, ಈ ಕೈಗಾರಿಕೆಗಳು ಫಲಪ್ರದವಾಗಿರುವಂತೆ ಮಾಡಬೇಕೆಂದು ವಿನಂತಿಮಾಡಿ ಕೊಳ್ಳುತ್ತೇನೆ. ಈ ಕಾರ್ಖಾನೆಗೆ ಜಪಾನಿನ ಒಂದು ಕಂಪನಿ ಬಂದು ಕೆಲಸ ಮಾಡುತ್ತಿದೆ. ಎಷ್ಟು ಸಾಮಾನು ತಯಾರು ಮಾಡುತ್ತಿದ್ದಾರೆ, ಎಷ್ಟಾಗಿದೆ. ನಮ್ಮ ಜನರಲ್ಲಿ ಎಷ್ಟು ಜನರಿಗೆ ಕೆಲಸ ಮಾಡುವುದನ್ನು ಹೇಳಿಕೊಟ್ಟದ್ದಾರೆಂಬುದನ್ನು ನೋಡಿದರೆ ಈ ಹೊತ್ತು ತಮ್ಮ ಜನರನ್ನೇ ಬರಮಾಡಿಕೊಂಡು ಈ ಕಾರ್ಖಾನೆಯ ಸಂಪೂರ್ಣ ವಹಿವಾಟನ್ನು ತಾವೇ ತೆಗೆದುಕೊಳ್ಳಬೇಕೆಂದಿದ್ದಾರೆಯೇ ವಿನಾ ನಮ್ಮ ಜನರಿಗೆ ಯಾವ ಶಿಕ್ಷಣವನ್ನು ಕೊಡಬೇಕೋ ಅದನ್ನು ಕೊಡುವುದಕ್ಕೆ ಅವರು ತಯಾರಾಗಿಲ್ಲವೆಂಬುದು ವ್ಯಕ್ತವಾಗುತ್ತದೆ. ಏಕೆ ಸರ್ಕಾರ ಸಂಕೋಚಪಡಬೇಕು? ಲಾಭಕರವಾಗಿ ನಡೆಸಬೇಕೆಂಬುದೇನೋ ಇವರ ಉದ್ದೇಶ. ಆದರೆ

ಸರ್ಕಾರ ಸಂಕೋಚಪಟ್ಟಿರುವ ಹಾಗೆ ಜನರಿಗೆ ಸಂದೇಹ ಬರುತ್ತದೆ. ಇದನ್ನು ನಿವಾರಿಸಲು ಒಂದು ಸಮಿತಿಯನ್ನು ನೇಮಕಮಾಡಿ ವಿಧಾನಸಭೆ ಮತ್ತು ಪರಿಷತ್ತಿನ ಮೂರು ನಾಲ್ಕು ಜನರನ್ನು ಸದಸ್ಯರಾಗಿ ತೆಗೆದುಕೊಂಡು ಈ ಕೈಗಾರಿಕೆಗಳು ಲಾಭಕರವಾಗಿ ಕೆಲಸ ಮಾಡುವಂತೆ ಮಾಡಬೇಕು. 15 ಕೋಟಿ ರೂಪಾಯಿ ರೆವಿನ್ಯೂ ವೆಚ್ಚ Industries and Supplies ಗೆ ಆಗುತ್ತಿದೆಂದಿದ್ದುದು ಈ ಹೊತ್ತು 16 ಕೋಟಿ ರೂಪಾಯಿ ಆಗಿದೆ. ಸುಮಾರು ಒಂದೂಕಾಲು ಕೋಟಿ ರೂಪಾಯಿ ಆಗಿದೆ. ಸುಮಾರು ಒಂದೂಕಾಲು ಕೋಟಿ ರೂಪಾಯಿ ಹೆಚ್ಚಾಗಿದೆ. ಇದನ್ನು ಪೂರ್ತಿಯಾಗಿ ಖರ್ಚುಮಾಡಿದರೆ ದೇಶಾಭ್ಯುದಯ ಕೆಲಸಗಳಿಗೆ ಖರ್ಚು ಮಾಡುವುದಕ್ಕೆ ಹಣವಿಲ್ಲದೇ ಹೋಗುತ್ತದೆ.

ಇದೇ ರೀತಿ ರೋಡ್ ಟ್ರಾನ್ಸ್‌ಪೋರ್ಟ್ ವಿಷಯು ಹೇಳಿದಾಗ ಜನರಿಗೆ ತೊಂದರೆಯಾಗಿರುವುದು ಸರ್ಕಾರಕ್ಕೆ ಗೊತ್ತಿರುವುದಾಗಿಯೂ ಅದನ್ನು ಸರಿಪಡಿಸುವುದಾಗಿಯೂ ಹೋದಸಾರಿ ಹೇಳಿದರು. ಆದರೆ ಒಂದು ತಿಂಗಳ ಹಿಂದೆ ಬೆಂಗಳೂರಿನಲ್ಲಿ ವಾಹನ ಸೌಕರ್ಯ ಹೇಗಿತ್ತೋ ಈ ಹೊತ್ತೂ ಹಾಗೆಯೇ ಇದೆ. ಇದರಿಂದ ಸದಸ್ಯರ ಸಲಹೆಗಳಿಗೆ ಸರ್ಕಾರ ಎಷ್ಟು ಬೆಲೆ ಕೊಟ್ಟಿದೆ, ಎಷ್ಟು ಜವಾಬ್ದಾರಿಯುತವಾಗಿದ್ದಾರೆ ಎಂಬುದು ವ್ಯಕ್ತವಾಗುತ್ತದೆಂದು ವಿಷಾದದಿಂದ ಹೇಳಬೇಕಾಗಿದೆ. ಉದ್ರೇಕವಾಗಿ ಮಾತನಾಡಬೇಕೆಂದು ನನಗಿಷ್ಟವಿಲ್ಲ. ಒಂದು ಸಲಹೆ ಮಾಡಬೇಕಾಗಿದೆ. ಶಾಸನ ಸಭೆಗಳಿಗೆ ಜವಾಬ್ದಾರಿಯುತವಾಗಿರುವುದು ತಮ್ಮ ಉಳಿವಿಗೆ ಕಾರಣವಾಗಿದೆ ಎಂಬುದನ್ನು ಸರ್ಕಾರ ಪರಿಗಣಿಸಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಹಾಕದೇ ಇರುವುದೋ ಅಲ್ಲದೆ, ಇದ್ದಿರುವ ಬಸ್ಸುಗಳೂ ಸರಿಯಾಗಿ ನಡೆಯುತ್ತಿಲ್ಲ. ಒಂದು ಬಾರಿ ಹೇಳಿದೆ, ಆರ್ಥಿಕ ಸಚಿವರು ಆ ಹೊತ್ತೇ ಇರಲಿಲ್ಲ ಆರು ಮೈಲಿಗಳ ಪ್ರಯಾಣ ಮಾಡಬೇಕಾಗಿದ್ದರೆ ನಡೆದುಕೊಂಡು ಹೋದರೆ ಮೊದಲೇ ಸೇರಬಹುದು – ಮಧ್ಯ ನಿಲ್ಲಿಸುತ್ತಾರೆ, ಟಿಕೆಟ್ ಕೊಡುವುದಿಲ್ಲ, ಗಾಡಿ ಹೊರಡುವುದಿಲ್ಲ, ಹೊರಟರೂ ಜನಗಳ ಸೌಕರ್ಯ ನೋಡುವುದಿಲ್ಲ. ಟಿಕೆಟ್ ಕೊಡಬೇಕಾಗಿದ್ದರೆ, ಚೆಕ್ ಮಾಡಬೇಕಾಗಿದ್ದರೆ ಆರು ಮೈಲಿ ಪ್ರದೇಶದಲ್ಲಿ ಎಂಟು ಕಡೆ Stop point ಹಾಕಿ ಚೆಕ್ ಮಾಡುತ್ತಾರೆ. ಈ ಬಸ್ ವ್ಯವಸ್ಥೆ ಮದರಾಸ್‌ನಲ್ಲಿ ಇದೆ, ಬೊಂಬಾಯಿಯಲ್ಲಿ ಇದೆ, ಕಲ್ಕತ್ತದಲ್ಲಿ ಇದೆ. ಆದರೆ ಹೀಗೆ ಮಾದರೀ ಮೈಸೂರಿನಲ್ಲಿ ಇದ್ದಿರತಕ್ಕ ಪರಿಸ್ಥಿತಿ ಯಾವ ನಾಗರಿಕ ಪಟ್ಟಣದಲ್ಲೂ ಇಲ್ಲ ಎನ್ನುವುದನ್ನು ತಮ್ಮ ಮನಸ್ಸಿಗೆ ತರಬೇಕಾಗಿದೆ. ಆಫೀಸುಗಳಿಗೆ ಬರಬೇಕಾಗಿದ್ದರೆ ಶಾಲೆಗಳಿಗೆ ಹೋಗಬೇಕಾಗಿದ್ದರೆ ಮಕ್ಕಳು ಓದು ಬರಹ ಕಲಿತುಕೊಳ್ಳಬೇಕಾಗಿದ್ದರೆ ಒಂದು ಕಡೆಯಿಂದ ಒಂದು ಕಡೆಗೆ ಹೋಗಲು ಬಸ್ಸುಗಳ ಹತ್ತಿರ ಒಂದು ಒಂದೂವರೆ ಗಂಟೆ ಬಿಸಿಲಿನಲ್ಲಿ ಕಾದು, ಮಳೆಯಲ್ಲಿ ನೆನೆಯಬೇಕಾಗಿದೆ. ಇಂಥ ಒಂದು ಬಸ್ ವ್ಯವಸ್ಥೆಯನ್ನು ಸರಿಯಾಗಿ ನಡೆಸದೇ ಇರತಕ್ಕವರು ಈ 126 ಕೋಟಿ ರೂಪಾಯಿಗಳ ವ್ಯವಹಾರವನ್ನು ಎಷ್ಟು ಮುತುವರ್ಜಿಯಿಂದ ಎಷ್ಟು ಚಾಕುಚಕ್ಯತೆಯಿಂದ ನಿರ್ವಹಿಸಬಲ್ಲರು ಎಂದು ನೆನೆದರೆ ಕೊಂಚ ಮನಸ್ಸಿಗೆ ಅನುಮಾನವಾಗುತ್ತದೆ.

Sri M.P.L. Sastry: But the finance Minister's view is that the income will not be shown in the appropriation account but only the authorised amount to be incurred during the course of the year. He must be in a position to explain to the House clearly why the difference have occured under these Headings viz, Public Debt, Civil works, Industries and supplies, Education, Agriculture and Health, specially, Industries. ಆಯವ್ಯಯದಲ್ಲಿ ವಿಷಯವಾಗಿ ಇಷ್ಟು ಹೇಳಿ ಶಿಕ್ಷಣ ವಿಚಾರದಲ್ಲಿ ಮೂರು–ನಾಲ್ಕು ಮಾತುಗಳನ್ನು ಆಡಬೇಕೆಂದು ಇದ್ದೇನೆ. ನಮ್ಮ ಮೈಸೂರು ಸಂಸ್ಥಾನದಲ್ಲಿ ಶಿಕ್ಷಣಕ್ಕೆ ಸುಮಾರು ಹತ್ತು ಕೋಟಿ ರೂಪಾಯಿಗಳಷ್ಟು ವೆಚ್ಚವನ್ನು ಕೇಳಿದ್ದೇವೆ. ಒಟ್ಟು ವೆಚ್ಚದಲ್ಲಿ ಸುಮಾರು ಎಂಟರಲ್ಲಿ ಒಂದು ಭಾಗ ವೆಚ್ಚವಾಗುತ್ತದೆ. ನಮ್ಮ ದೇಶದಲ್ಲಿ ಮೊದಲಿನಿಂದಲೂ ಕೂಡ ಸಂಸ್ಥಾನದ ಇಡೀ ರೆವಿನ್ಯೂ ಆದಾಯದಲ್ಲಿ ನಾಲ್ಕರಲ್ಲಿ ಒಂದು ಭಾಗದಷ್ಟು ಶಿಕ್ಷಣಕ್ಕೆ ವೆಚ್ಚ ಮಾಡತಕ್ಕಂಥ ಒಂದು ಗೌರವ ಮೈಸೂರು ದೇಶಕ್ಕೆ ಬಂದಿದೆ. ಈ ಹೊತ್ತು ಹೊಸ ಸಂಸ್ಥಾನವಾದ ಮೇರೆ ರೆವಿನ್ಯೂ ಆದಾಯದಲ್ಲಿನ ನಾಲ್ಕರಲ್ಲಿ ಒಂದು ಭಾಗದಷ್ಟು ವೆಚ್ಚ ಮಾಡುತ್ತಾ ಇದ್ದದ್ದು ಸುಮಾರು ಐದರಲ್ಲಿ ಒಂದು ಭಾಗ ವೆಚ್ಚ ಮಾಡುವುದಕ್ಕೆ ಇಳಿಯದಿದ್ದಾಗ್ಯೂ ಈ ಶಿಕ್ಷಣದ ಸಮಸ್ಯೆಗಳನ್ನು ಪರಿಹಾರಮಾಡತಕ್ಕಂಥ ಕೆಲಸವನ್ನು ಸರ್ಕಾರ ಅತ್ಯಗತ್ಯವಾಗಿ ತೆಗೆದುಕೊಳ್ಳಬೇಕಾದದ್ದು ಅಗತ್ಯ. ನಾಲ್ಕು–ಐದು ವಿಷಯಗಳಲ್ಲಿ ಅವರು ಪಟ್ಟಣಗಳಿಗೆ ಗಮನಕೊಡಬೇಕಾದದ್ದು ಉಚಿತ. ಮೊದಲನೆಯದಾಗಿ ಭಾರತ ರಾಜ್ಯಾಂಗದ 45ನೆಯ ಅನುಚ್ಛೇದ ಏನಿದೆ ಅದರ ಪ್ರಕಾರ 14 ವರ್ಷಗಳವರೆಗೂ ನಮ್ಮ ದೇಶದಲ್ಲಿರತಕ್ಕ ಶಾಲೆಗೆ ಹೋಗತಕ್ಕ ವಿದ್ಯಾರ್ಥಿಗಳನ್ನು ಅಕ್ಷರಸ್ಥರನ್ನಾಗಿ ಮಾಡಬೇಕಾಗಿದೆ. ಇದರ ಕಡೆಗೆ ಸರ್ಕಾರದವರು ವಿಶೇಷವಾಗಿ ಗಮನಕೊಡಬೇಕಾದ್ದು ಮುಖ್ಯ. ಇದಕ್ಕೆ ಕೇವಲ ಶಾಲೆಗಳನ್ನು ಸ್ಥಾಪನೆ ಮಾಡಿ, ಉಪಾಧ್ಯಾಯರನ್ನು ನಿರ್ಮಾಣ ಮಾಡಿದರೆ ಸಾಲದು. ಈ ಶಾಲೆಗಳು ನಡೆಯುವುದಕ್ಕೆ ತಕ್ಕ ಕಟ್ಟಡಗಳನ್ನು ಕಟ್ಟಿಸಬೇಕಾದ್ದು ಅಗತ್ಯ. ಈ ಪಾಠಶಾಲೆಯ ಕಟ್ಟಡ ಕಟ್ಟುವುದಕ್ಕೆ ಈಗ ಸಾಧ್ಯವಾಗಿಲ್ಲ. ಎಂದರೆ ಈ ಕೆಲಸವನ್ನು ಪೂರ್ತಿಯಾಗಿ ಹಿಂದಿನ ಸಂಪ್ರದಾಯದ ಪ್ರಕಾರ ಪಬ್ಲಿಕವರ್ಕ್ಸ್ ಡಿಪಾರ್ಟ್‌ಮೆಂಟ್‌ನವರು ಡೀಲ್ ಮಾಡುತ್ತಾ ಇರುವುದರಿಂದ ಜಾಗ್ರತೆ ಕಟ್ಟಡ ಬರುವುದಕ್ಕೆ ಅವಕಾಶವಾಗಿಲ್ಲ. ಇನ್ನೊಂದು ಎಲ್ಲಾ ಕಡೆಯಲ್ಲೂ ಕಟ್ಟಡ ಆರ್.ಸಿ.ಸಿ. ಕಟ್ಟಡಗಳಾಗಬೇಕು ಎನ್ನತಕ್ಕ ಉದ್ದೇಶ ಜನತೆಯಲ್ಲಾಗಲೀ ಜನತೆಯ ಪ್ರತಿನಿಧಿಗಳಲ್ಲಾಗಲೀ ಇದ್ದರೆ ಅದನ್ನು ತೊಡೆದು ಹಾಕಬೇಕು. ನಮ್ಮ ದೇಶದ ಪರಿಸ್ಥಿತಿ ನಮ್ಮ ಸರ್ಕಾರಕ್ಕೆ ಇರತಕ್ಕ ಆಯವ್ಯಯದ ಒಂದು ಖರ್ಚು ಏನಿದೆ ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಸುಲಭವಾಗಿ ಆಗತಕ್ಕ ಕಟ್ಟಡಗಳನ್ನು ಅತ್ಯಲ್ಪ ಕಾಲದಲ್ಲಿ ನಿರ್ಮಾಣ ಮಾಡತಕ್ಕದ್ದು ಒಳ್ಳೆಯದು, ಮಾಡತಕ್ಕದ್ದು ಅತ್ಯಗತ್ಯ ಎಂದು ಭಾವನೆ ಮಾಡಿಕೊಂಡಿದ್ದೇನೆ. ಇದಕ್ಕೆ ಸರಕಾರದವರು ಗಮನಕೊಡಬೇಕಾದ್ದು ಉಚಿತ ವ್ಯವಸಾಯದ ಇಲಾಖೆಗೆ, ಇಂಡಸ್ಟ್ರೀಸ್ ಇಲಾಖೆಗೆ ಇತರ ಒಂದೆರಡು ಇಲಾಖೆಗೆ ಸಂಬಂಧಪಟ್ಟ ಹಾಗೆ ಅನೇಕ ಶಾಲೆಗಳು ನಡೆಯುತ್ತಾ ಇವೆ. ಇಂಡಸ್ಟ್ರಿಯಲ್, ಸ್ಕೂಲು ಅಗ್ರಿಕಲ್ಚರಲ್ ಸ್ಕೂಲು ಎಂದು ಇದೆ. ಈ ಎಲ್ಲಾ ಶಾಲೆಗಳನ್ನು ಕೂಡ ಒಂದೇ ಶಿಕ್ಷಣದ ಶಾಖೆಗೆ ಸೇರಿಸತಕ್ಕದ್ದು ಯೋಗ್ಯ. ಆಗ ಶಿಕ್ಷಣದ ಶಾಖೆಯಲ್ಲಿ ಕೋ ಆರ್ಡಿನೇಷನ್ ಇದ್ದು ಅದಕ್ಕೆ ಸಂಬಂಧಪಟ್ಟ ವ್ಯವಸ್ಥೆ ನಡೆದುಕೊಂಡು ಹೋಗುವುದಕ್ಕೆ

ಸಹಾಯವಾಗುತ್ತದೆ. ಈ ಕೆಲಸವನ್ನು ಮಾಡಬೇಕಾದ್ದು ಉಚಿತ, ಎಂದು ಅಂದುಕೊಂಡಿದ್ದೇನೆ. ಇಂಡಸ್ಟ್ರಿಯಲ್ ಸ್ಕೂಲು, ಅಗ್ರಿಕಲ್ಚರಲ್ ಸ್ಕೂಲ್ ಇವುಗಳನ್ನು ಡಿಪಾರ್ಟ್‌ಮೆಂಟಿನವರೇ ನಡೆಸುತ್ತಾ ಇದ್ದಾರೆ. ಅದಕ್ಕೆ ಬದಲಾಗಿ ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ರವರ ಆಡಳಿತಕ್ಕೆ ಕೊಡಬೇಕೆಂದು ಹೇಳುತ್ತಾ ಇದ್ದೇನೆ.

ಹಾಗೆ ಮಾಡಿದ ಪಕ್ಷದಲ್ಲಿ ಮಿಡ್ಲ್‌ಸ್ಕೂಲು ಮತ್ತು ಹೈಸ್ಕೂಲುಗಳಲ್ಲಿ ಕ್ರಾಫ್ಟ್ ಎಜುಕೇಷನ್ ಕೊಡಬೇಕೆಂಬ ಪ್ರಯತ್ನ ಏನಿದೆ ಅದಕ್ಕೆ ಸಹಾಯವಾಗುತ್ತದೆ. ಅಲ್ಲಿನ ಒಂದು ಹಿನ್ನೆಲೆ ವಿದ್ಯಾರ್ಥಿಗಳಿಗೆ ದೊರೆತು ಅದರಿಂದ ಉತ್ತಮ ಶಿಕ್ಷಣ ದೊರೆಯತಕ್ಕ ವ್ಯವಸ್ಥೆ ಉಂಟಾಗುತ್ತದೆ.

ಇನ್ನೊಂದು ಅಂಶ ಸರ್ಕಾರದವರು ಗಮನದಲ್ಲಿಟ್ಟುಕೊಳ್ಳಬೇಕಾದದ್ದು ಏನೆಂದರೆ, ಕೇವಲ ಹತ್ತು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುತ್ತಾ ಇದ್ದೇವೆ ಎನ್ನುವುದರಿಂದ ವಿದ್ಯಾಭ್ಯಾಸ ದೊರೆಯುತ್ತದೆ ಎಂದು ಭಾವನೆ ಮಾಡಿಕೊಳ್ಳಬಾರದು. ಅದರಲ್ಲಿ ವ್ಯಯವಾಗತಕ್ಕದ್ದು ಸದಾ ವ್ಯಯವಾಗಬೇಕಾದ್ದು. ಶಾಲೆಗಳಿಗೆ ಹಣ ದೊರೆಯಬೇಕಾದ್ದು ಸಕಾಲದಲ್ಲಿ ದೊರೆಯಬೇಕಾದ್ದು ಅತ್ಯಗತ್ಯ. ಇಲ್ಲದೇ ಇದ್ದ ಪಕ್ಷದಲ್ಲಿ ಅದನ್ನು ನಡೆಸುತ್ತಾ ಇರುವ ಅಲ್ಲಿನ ಅದ್ಯಾಪಕ ವರ್ಗ ಅತೃಪ್ತವಾಗಿ, ಕೆಲಸ ಮಾಡದೆ ಅದರಿಂದ ಜನತೆಗೆ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಲಾರದು ಎಂದು ಅನ್ನುವುದನ್ನು ಅರ್ಥ ಸಚಿವರು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ್ದು ಅತ್ಯಗತ್ಯ ಎಂದು ಅಂದುಕೊಂಡಿದ್ದೇನೆ. ಈ ಹೊತ್ತು ಒಂದು ಮಾತು ಹೇಳಬೇಕಾದರೆ ಹಳೇ ಮೈಸೂರಿನ ಹೊರಗಡೆ ಇರತಕ್ಕ ಉತ್ತರ ಕರ್ನಾಟಕ ಪ್ರದೇಶದ ಉತ್ತರ ಕನ್ನಡ ಜಿಲ್ಲೆಯ ಪ್ರತಿಯೊಂದು ಹೈಸ್ಕೂಲಿನಲ್ಲೂ ರೇಡಿಯೋ ಸೆಟ್ಟು ಇದೆ. ಆಡಿಯೋ ವಿಷುಯಲ್ ಎಜುಕೇಷನ್ ಸೆಟ್ಸ್ ಇದೆ. ಹಳೇ ಮೈಸೂರಿನ ಶಾಲೆಗಳಲ್ಲೂ ರೇಡಿಯೋ ಸೆಟ್ಟುಗಳನ್ನು ಕೊಡಬೇಕೆಂದು ಇಂಡಿಯಾ ಸರ್ಕಾರದವರು ಮುಂದೆ ಬಂದು ಎರಡು ಮೂರು ಯೋಜನೆಗಳನ್ನು ತಯಾರಿಸಿದ್ದು ಹಾಗೆಯೇ ನಿಂತಿದೆ. ಯಾವ ಪ್ರಯೋಜನವೂ ಆಗಿಲ್ಲ. ಪಾಠಶಾಲೆಗಳಿಗಾಗಿ ಆಲ್ ಇಂಡಿಯಾ ರೇಡಿಯೋದವರು ಸಹ ರೇಡಿಯೋ ಪ್ರೋಗ್ರಾಂ ವಗೈರೆ ದಿನಕ್ಕೆ ಒಂದು ಬಾರಿ ಏರ್ಪಾಡು ಮಾಡುತ್ತಾ ಇದ್ದಾರೆ. ಇದು ಸಾರ್ಥಕವಾಗಬೇಕಾದರೆ ಈ ಹಣದ ಪೈಕಿ ಇದಕ್ಕೆ ಬೇಕಾಗುವಷ್ಟು ದುಡ್ಡನ್ನು ನಮ್ಮ ಹಳೆಯ ಮೈಸೂರಿನ ಪ್ರದೇಶದಲ್ಲಿರತಕ್ಕ ಹೈಸ್ಕೂಲುಗಳಿಗೂ ದೊರೆಯುವ ಹಾಗೆ ಮಾಡಬೇಕಾದ್ದು ಅತ್ಯಗತ್ಯ. ಈಗ ಶಿಕ್ಷಣದ ಸ್ವರೂಪವೇ ವ್ಯತ್ಯಾಸ ಹೊಂದುತ್ತಾ ಇದೆ. ಶಿಕ್ಷಣ ವಿಶೇಷವಾಗಿ ದೊರೆಯುತ್ತಾ ಇದೆ. ಶಿಕ್ಷಣ ಕ್ರಮದಲ್ಲಿ, ಅಭ್ಯಾಸದಲ್ಲಿ ಅನೇಕ ಬದಲಾವಣೆಗಳಾಗುತ್ತಿದೆ. ಈಗ ಪಾಠ ಬೋಧನೆಗಿಂತ ಹೆಚ್ಚಾಗಿ ದೃಷ್ಟಿ ಶಿಕ್ಷಣದಿಂದ ಮನಸ್ಸಿಗೆ ಚೆನ್ನಾಗಿ ತಿಳಿಯುತ್ತಿದೆ. ಮನಸ್ಸಿನಲ್ಲಿ ಚೆನ್ನಾಗಿ ನಿಲ್ಲುತ್ತದೆ ಎಂದು ಹೇಳಿ ಆ ರೀತಿ ತಿಳಿಸಬೇಕೆಂದು ಆಡಿಯೋ ವಿಷುಯಲ್ ಎಜುಕೇಷನ್ ಎನ್ನುವ ಟೆಕ್ನಿಕ್ ವಿಶೇಷವಾಗಿ ಬೆಳೆಯುತ್ತಾ ಇದೆ. ಆಡಿಯೋ ವಿಷ್ಯುಯಲ್ ಎಜುಕಷನ್‌ಗೆ ಈ ಹತ್ತು ಕೋಟಿ ರೂಪಾಯಿಗಳ ಹಣದಲ್ಲಿ ಕೊಂಚ ಹಣವನ್ನಾದರೂ ಮುಡುಪಾಗಿಟ್ಟು ಇದನ್ನು ಶಾಲೆಗಳಿಗೆ ಕೊಡಬೇಕಾದ್ದು ಅತ್ಯಗತ್ಯ ಎಂದುಕೊಂಡಿದ್ದೇನೆ.

ಇನ್ನೊಂದು ವಿಷಯ. ಈ ಸರ್ಕಾರದ ಶಾಲೆಗಳಲ್ಲಿ ಅದ್ಯಾಪಕರು ಸ್ಥಾನಮಾನಗಳನ್ನು ಕ್ಲುಪ್ತ ಮಾಡಿ ಅವರ ವೇತನವನ್ನು ತೀರ್ಮಾನ ಮಾಡಿದ ಹಾಗೆಯೇ, ಆ ಒಂದು ರಿಯಾಯಿತಿ ಎನ್ನುವುದನ್ನು ಈ ಕ್ಷೇತ್ರದಲ್ಲಿ ಅದೇ ಕೆಲಸ ಮಾಡುತ್ತಿರುವ ಖಾಸಗೀ ಶಾಲೆಗಳು ಮತ್ತು ಇತರ ಸ್ಥಳೀಯ ಸಂಸ್ಥೆಗಳ ಶಾಲೆಗಳಲ್ಲಿರುವ ಜನಗಳೆಲ್ಲರಿಗೂ ಅನ್ವಯಿಸುವ ಹಾಗೆ ಮಾಡಬೇಕಾದ್ದು ಅತ್ಯಗತ್ಯ.

ಒಂದು ಬಾರಿ ಮಾನ್ಯ ಆರ್ಥಿಕ ಸಚಿವರು ಹೇಳಿದ ಹಾಗೆ ಅನೇಕ ಶಾಲೆಗಳಲ್ಲಿ ಉಪಕರಣ, ಎಕ್ವಿಪ್‌ಮೆಂಟ್ ಸಾಕಾದಷ್ಟಿಲ್ಲ, ಅದು ನಿಜವಾದ ಮಾತು. ಈ ಉಪಕರಣ ಸಾಮಗ್ರಿಗಳಿಗೆ ಒಂದು ಸಾವಿರ, ಎರಡು ಸಾವಿರ ರೂಪಾಯಿ ಸಾಲುವುದಿಲ್ಲ, ಕೋಟ್ಯಾಂತರ ರೂಪಾಯಿ ಆಗಬೇಕು. ಕೇವಲ ನಾಲ್ಕೈದು ಲಕ್ಷ ರೂಪಾಯಿಗಳಲ್ಲಿ ಉಪಕರಣ ಕೊಂಡು ಕೊಡುವುದರ ಜೊತೆಗೆ ಈ ದಿವಸ ಶಾಲೆಗಳಲ್ಲಿರುವ ಶಿಕ್ಷಕರ ಸಂಬಳ ಸಾರಿಗೆಗಳನ್ನು ಸರ್ಕಾರಿ ಶಾಲೆಗಳಲ್ಲಿರುವ ಸಂಬಳ ಸಾರಿಗೆ ಮಟ್ಟಕ್ಕೇರಿಸಬೇಕು. ಹಾಗೆ ಮಾಡಿ ಸರ್ಕಾರಿ ಶಾಲೆಗಳಲ್ಲಿರುವ ಸಂಬಳ ಸಾರಿಗೆಗಳನ್ನೇ ಬಾಕಿ ಶಾಲೆಗಳವರಿಗೂ ಅನ್ವಯಿಸಬೇಕಾದ್ದೂ ಅತ್ಯಗತ್ಯ ಅಂದುಕೊಂಡಿದ್ದೇನೆ.

ಆರ್ಥಿಕ ಸಚಿವರ ಅನುಗ್ರಹವಾಗಿದೆ. ಬಹಳ ಸಂತೋಷ, ಹತ್ತುಕೋಟಿ ರೂಪಾಯಿಗಳಲ್ಲಿ ಒಂದು ಕಾಸನ್ನೂ ಕೂಡ ಉಳಿಸುವುದಕ್ಕೆ ಪ್ರಯತ್ನ ಮಾಡಬಾರದು. ಆರ್ಥಿಕ ಸಚಿವರು ಹಾಗೆ ಮಾಡಿದರೆ ಜನರಿಗೆ ದ್ರೋಹ ಮಾಡಿದ ಹಾಗಾಗುತ್ತದೆ. ಇದನ್ನು ಸದ್‌ವ್ಯಯವಾಗುವ ಹಾಗೆ ನೋಡಿಕೊಳ್ಳಬೇಕಾದ್ದು ಅದರ ಕರ್ತವ್ಯ.

ಪತ್ರ ವ್ಯವಹಾರ ನಡೆಯುತ್ತಿರುವ ವಿಚಾರದಲ್ಲಿ ಒಂದೇ ಒಂದು ಉದಾಹರಣೆ ಹೇಳಬಹುದಾದರೆ 1956ನೆಯ ಇಸವಿ ಡಿಸೆಂಬರ್ 31ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿದ್ದ ಅದ್ಯಾಪಕ ವರ್ಗ ಯೂನಿವರ್ಸಿಟಿ ಆಕ್ಟ್ 26ನೆಯ ಕಲಂ ಪ್ರಕಾರ ಮೈಸೂರು ಸರ್ಕಾರಕ್ಕೆ ಸೇರಿತ್ತು. ಅವರಿಗೆ ಇತರ ನೌಕರರಿಗೆ ಸಂಬಳ ಸಾರಿಗೆ ಹೆಚ್ಚಿಸಿ ಜನವರಿ 25ನೆಯ ತಾರೀಖು ಸರ್ಕಾರಿ ಆಜ್ಞೆ ಹೊರಡಿಸಿದಾಗ "This will be done in consultation with the University" ಎಂದು ಆರ್ಡರ್ ಮಾಡಿದರು. ಇಲ್ಲಿಗೆ ಆದಾಗಿ ಏಳು ತಿಂಗಳಾಯಿತು. ಆಕಡೆ ಗಮನಕೊಟ್ಟು ಏನೂ ಮಾಡಿರುವುದಿಲ್ಲ. ಹೀಗಾದರೆ ಅವರ ಪರಿಸ್ಥಿತಿ ಏನಾದೀತು. ಅವರ ಮನಸ್ಸಿನಲ್ಲೇನು ಸಂದೇಹ ಮೂಡೀತು ಎಂಬುದನ್ನು ಸರ್ಕಾರದವರು ಗಮನಿಸಿ ಜಾಗ್ರತೆ ಒಂದು ತೀರ್ಮಾನಕ್ಕೆ ಬರಬೇಕಾದದ್ದು ಅತ್ಯಗತ್ಯ ಎಂಬ ಭಾವನೆಯಿದೆ.

ಇನ್ನೊಂದು ಮಾತು. ಈಗ ನಮ್ಮ ಮೈಸೂರು ಸಂಸ್ಥಾನದಲ್ಲಿ ಎರಡು ವಿಶ್ವವಿದ್ಯಾಲಯಗಳಿವೆ. ಒಂದು ಕರ್ನಾಟಕ ವಿಶ್ವವಿದ್ಯಾಲಯ, ಇನ್ನೊಂದು ಮೈಸೂರು ವಿಶ್ವವಿದ್ಯಾಲಯ. ಇವರೆಡೂ ಕೂಡ ನನ್ನ ಅಭಿಪ್ರಾಯದಲ್ಲಿ ನಮ್ಮ ದೇಶದ ಜ್ಞಾನ ಭಂಡಾರಗಳಾಗಬೇಕು. ಉಚ್ಚ ಶಿಕ್ಷಣವೇತ್ತರ ಸ್ಥಾನಗಳಾಗಿರಬೇಕು, ಇವುಗಳ ಸ್ವರೂಪ ಆಡಳಿತ ಕ್ರಮ, ಕೆಸಲ ಕಾರ್ಯ ಸಮತೂಕವಾಗಿ ಒಂದೇ ದೃಷ್ಟಿಯಲ್ಲಿರಬೇಕೆಂಬ ಆಸೆಯಿದೆ. ಈಗ ಇವುಗಳಲ್ಲಿ ಒಂದು ಅಫಿಲಿಯೇಟರ್‌ಗೆ ಯೂನಿವರ್ಸಿಟಿಯಾಗಿದೆ, ಇನ್ನೊಂದು ಟೀಚಿಂಗ್ ಎಂಡ್ ಅಫಿಲಿಯೇಟಿಂಗ್

ಯೂನಿವರ್ಸಿಟಿಯಾಗಿದೆ. ಈ ದಿವಸ ಮೈಸೂರು ಯೂನಿವರ್ಸಿಟಿ ವಹಿವಾಟಿಗೆ 50 ಲಕ್ಷ ರೂಪಾಯಿಗಳ ಸರ್ಕಾರದ ಸಹಾಯ ನಡೆದು ನಡೆಸಬೇಕಾಗಿದೆ. ಆದರೆ ಅವರ ಬಡ್ಜೆಟ್ಟನ್ನು ನೋಡಿದರೆ ಒಂದು ಕೋಟಿ ರೂಪಾಯಿಗಳಿಗೆ ಮೀರುವ ಭಯವಿದೆ. ಆದರೆ ಟೀಚಿಂಗ್ ಯೂನಿವರ್ಸಿಟಿಯಾಗಿ ಅವರು ಅಲ್ಲಿ ಮಾಡುವ ಕೆಲಸವೇನೆಂಬುದನ್ನು ಪರಿಶೀಲನೆ ಮಾಡಬೇಕಾದದ್ದು ಅತ್ಯಗತ್ಯ. ರಾಜ್ಯದ ಅಧಿಕಾರ ಸೂತ್ರ ವಹಿಸಿ ಕೆಲಸಕಾರ್ಯವನ್ನು ನಡೆಸುವ ಶ್ರದ್ಧೆ, ದೇಶಭಕ್ತಿ ಇರುವ ಜನರು ಅಲ್ಲಿದ್ದಾರೆ. ಅಂಥ ಅಧಿಕಾರಿಗಳು ಈ ದಿವಸ ಮಾಡುತ್ತಿರುವುದು ಸಾಮಾನ್ಯವಾಗಿ ಆಫೀಸಿನಲ್ಲಿ ಗುಮಾಸ್ತರು ಸೂಪರಿಂಟೆಂಡೆಂಟರು. ಅಧಿಕಾರಿಗಳು ಮಾಡುವ ಕೆಲಸ ವರ್ಗಾವರ್ಗಿ, ಜಾತಿ, ಮತ, ಕುಲ ನೋಡಿ ಬಣ್ಣ ನೋಡಿ ಪ್ರಮೋಷನ್, ವಿದ್ಯಾರ್ಥಿ ವೇತನ ವಗೈರೆ ಕೊಡುವುದು, ಈ ಕೆಲಸಗಳಲ್ಲೇ ಯೂನಿವರ್ಸಿಟಿಯವರು ನಿರತರಾಗಿದ್ದರೆ ನಮ್ಮ ಯೂನಿವರ್ಸಿಟಿಯಿಂದ ಉಚ್ಚ ಶಿಕ್ಷಣ ನಮ್ಮ ದೇಶದಲ್ಲಿ ದೊರೆತೀತೇ ಎಂಬ ಸಂದೇಹ ಮೂಡುತ್ತಿದೆ. ಆದ್ದರಿಂದ ಈ ಸಮಯದಲ್ಲಿ ಯೂನಿವರ್ಸಿಟಿ ಬೆಳೆದಿದೆ. ಶಿಕ್ಷಣಕ್ಕೆ ಸಂಬಂಧ ಪಡದಿರುವ ಕಾರ್ಯ ಭಾಗವನ್ನು ಸರ್ಕಾರ ವಹಿಸುವುದು ಅತ್ಯಗತ್ಯ ಎಂದುಕೊಂಡಿದ್ದೇನೆ. ಸುತ್ತಮುತ್ತಲೂ ಸಂಸ್ಥಾನಗಳಲ್ಲಿ ಯಾವ ರೀತಿ ಉಚ್ಚ ಶಿಕ್ಷಣ ಕ್ರಮವಿದೆಯೋ ಅದರಂತೆ ಇಲ್ಲೂ ಜಾರಿಗೆ ತರಲು ಸೂಕ್ತ ಕ್ರಮ ಕೈಗೊಳ್ಳುವುದು ಅತ್ಯಗತ್ಯ. ಪೋಸ್ಟ್ ಗ್ರಾಜುಯೇಟ್ ಟೀಚಿಂಗ್, ರಿಸರ್ಚ್‌ವರ್ಕ್ ಯೂನಿವರ್ಸಿಟಿ ಮಾಡಬೇಕು, ಇತರ ಕಾಲೇಜುಗಳಲ್ಲಿ ನಡೆಯುವಂತೆ ಅಕಾಡೆಮಿಕ್ ಸ್ಟ್ಯಾಂಡರ್ಡ್ ಮೈನ್‌ಟೈನ್ ಮಾಡುವ ಕಾರ್ಯವನ್ನು ಯೂನಿವರ್ಸಿಟಿ ವಹಿಸಬೇಕಾದದ್ದು ಅತ್ಯಗತ್ಯ. ಇದನ್ನು ಮಾಡದೆ ಹೋದರೆ ಸಾಮಾನ್ಯವಾಗಿ ನಾಯಿ ಕೊಡೆ ಬೆಳೆದಹಾಗೆ ಈ ಸಂಸ್ಥೆ ಬೆಳೆಯುತ್ತದೆಂದು ಹೇಳಬೇಕಾಗುತ್ತದೆ.

ಇನ್ನೊಂದು ಮಾತು ನಮ್ಮ ಸಂಸ್ಥಾನದಲ್ಲಿ ಯೂತ್ ಆರ್ಗನೈಜೇಷನ್‌ಗಳಿಗೆ ಕೊಂಚ ಹಣ ಮೀಸಲಾಗಿದೆ. ಈ ಹೊತ್ತು ನಮ್ಮ ಸಂಸ್ಥಾನದಲ್ಲಿ ಜಾತ್ಯತೀತವಾದ ಪಕ್ಷಾತೀತವಾದ ಭಾವನೆಯನ್ನು ವಿದ್ಯಾರ್ಥಿಗಳಲ್ಲುಂಟು ಮಾಡಿ ಅವರಿಗೆ ದೈಹಿಕ ಶಿಕ್ಷಣ ಕೊಡುವುದಕ್ಕೆ, ಮಾನಸಿಕ ಶಿಕ್ಷಣ ಕೊಡುವುದಕ್ಕೆ ಆಟಪಾಟಗಳಿಗೆ ಏರ್ಪಾಡು ಮಾಡುವುದಕ್ಕೆ ಎರಡು ಸಂಸ್ಥೆಗಳಿವೆ. ಸ್ಕೌಟ್ ಸಂಸ್ಥೆ ಒಂದು ಇನ್ನೊಂದು ಭಾರತ ಸೇವಾದಳ, ಇವರೆಡೂ ಕೂಡ ಈ ಹೊತ್ತು ನಮ್ಮ ಸಂಸ್ಥಾನದಲ್ಲಿ ಜನಾದರಣೀಯವಾಗಿ ಪಕ್ಷಾತೀತವಾಗಿ ಕೆಲಸ ಮಾಡುತ್ತಿದೆ. ನನ್ನ ಅಭಿಪ್ರಾಯದಲ್ಲಿ ಶಾಲೆಗಳಿಗೆ ವಿಶ್ವವಿದ್ಯಾನಿಲಯಗಳಿಗೆ ಸಂಬಂಧಪಟ್ಟ ಯಾವುದೇ ಕೆಲಸವಿರಲಿ ಆ ಕೆಲಸ ಜಾತ್ಯತೀತವಾಗಿ, ಪಕ್ಷಾತೀತವಾಗಿ ನಡೆದರೆ ದೇಶಕ್ಕೆ ಶ್ರೇಯಸ್ಸಾಗುತ್ತದೆ. ವಿದ್ಯಾ ಸಂಸ್ಥೆಗಳಲ್ಲಿ ನಡೆಯುವ ರೆಗ್ಯುಲರ್ ಆಕ್ಟಿವಿಟೀಸ್‌ಗೆ ಇವು ಸಬ್ಸಿಡಿಯರಿಗಾಗಿ, ಸೆಕೆಂಡರಿಯಾಗಿ ಇರಬೇಕು. ಆದ್ದರಿಂದ ಭಾರತ ಸೇವಾದಳ ಮತ್ತು ಸ್ಕೌಟ್ ಸಂಸ್ಥೆಗಳೊಂದಿಗೆ ಶಾಲೆಗಳು ಕಾಲೇಜುಗಳು ಮುಂತಾದ ಬೋಧಕಸಂಸ್ಥೆಗಳು ವಿಶೇಷ ಸಂಪರ್ಕವನ್ನಿಟ್ಟುಕೊಂಡಿರಬೇಕು. ಅವಕ್ಕೂ ಇದಕ್ಕೂ ಒಂದು ದೊಡ್ಡ ಅಂತರ ಇರಬಾರದು.

ಮಧ್ಯಾಹ್ನ ಕಾಲದ ಊಟವನ್ನು ಕಲ್ಪನೆ ಮಾಡುವುದರಿಂದ ಅನೇಕ ಜನರಿಗೆ ಸಹಾಯವಾಗುತ್ತದೆ. ಸರ್ಕಾರದವರು ಇದರ ಪೂರ್ತಿ ಖರ್ಚನ್ನು ಒದಗಿಸಬೇಕೆಂದು ಹೇಳುತ್ತಿಲ್ಲ.

ಅವರಿಗೆ ಪಾತ್ರೆಗಳನ್ನು ತೆಗೆದುಕೊಳ್ಳುವುದಕ್ಕೆ ಮೊಟ್ಟ ಮೊದಲು ಪ್ರಾರಂಭ ಮಾಡುವುದಕ್ಕೆ, ಸಹಾಯ ದ್ರವ್ಯಗಳನ್ನು ಒದಗಿಸಿಕೊಟ್ಟ ಪಕ್ಷದಲ್ಲಿ ಪ್ರತಿಯೊಂದು ಸ್ಥಳದಲ್ಲಿಯೂ ಕೂಡ ಈ ವ್ಯವಸ್ಥೆಯನ್ನು ಪ್ರಾರಂಭಮಾಡಿ ಅದರಿಂದ ಸಫಲತೆ ಬರುವ ಹಾಗೆ ನಡೆಸಿಕೊಂಡು ಬರುತ್ತಾರೆಂದು ಕೊಂಡಿದ್ದೇನೆ.

ಆಡಳಿತದಲ್ಲಿ ಹೆಚ್ಚು ವೆಚ್ಚವನ್ನು ಮಾಡಬಾರದು, ಈಗ ಮಾಡತಕ್ಕ ವೆಚ್ಚವನ್ನು ಉಳಿಸತಕ್ಕ ಪ್ರಯತ್ನವನ್ನು ಮಾಡಬೇಕು, ಎಂದು ಈ ಸಭೆಯ ಮತ್ತು ವಿಧಾನಸಭೆಯ ಸದಸ್ಯರು ಹೇಳುತ್ತಿದ್ದಾರೆ. ಈ ವೆಚ್ಚವನ್ನು ಕಡಿಮೆ ಮಾಡುವುದಕ್ಕೋಸ್ಕರವಾಗಿ ಆರ್ಥಿಕ ಸಚಿವರು ಹಿಂದೆ ಒಂದು ಮಾತು ಹೇಳಿದರು. ಕಮಿಟಿಗಳನ್ನು ಮಾಡಿದರೆ ಬಹಳ ಸಾವಕಾಶವಾಗುತ್ತದೆ. ಆದ್ದರಿಂದ ಆಫೀಸರುಗಳು ಈ ವಿಷಯವನ್ನು ತೀರ್ಮಾನ ಮಾಡುತ್ತಾರೆ ಎಂದು ಹೇಳಿದರು. ಆಫೀಸರುಗಳು ಎಷ್ಟೇ ದಕ್ಷರಾಗಿದ್ದರೂ ವ್ಯಕ್ತಿತಃ ಎಷ್ಟೇ ಕಾರ್ಯಶಾಲಿಗಳಾಗಿದ್ದರೂ, ಜನತೆಯ ದೃಷ್ಟಿಯಲ್ಲಿ ಏನು ಬರುತ್ತದೆಂದರೆ, ಇವರಿಂದ ಹೇಳಿ ಬರೆಯಿಸುತ್ತಾರೆನ್ನತಕ್ಕ ಹೆದರಿಕೆ ಬರುತ್ತದೆ. ಈ ಹೇಳಿ ಬರೆಯಸತಕ್ಕ ಹೆದರಿಕೆ ಹೋಗುವುದಕ್ಕೆ ಒಂದು ಕಮಿಟಿಯನ್ನು ಮಾಡುವುದಕ್ಕೆ ಸರ್ಕಾರ ಹೆದರಬೇಕಾದ್ದೇನಿದೆ? ನಮ್ಮ ಸಂಸ್ಥಾನದಲ್ಲಿ ನಾಲ್ಕೈದು ಕಮಿಟಿಗಳು ಎರಡು ಮೂರು ತಿಂಗಳುಗಳಲ್ಲಿಯೇ ಬಹಳ ಯೋಗ್ಯವಾದ ವರದಿಗಳನ್ನು ತಯಾರು ಮಾಡಿಕೊಟ್ಟಿದ್ದು ಬಹಳ ಕ್ಲಿಷ್ಟವಾದ ಸಮಸ್ಯೆಗಳ ವಿಷಯದಲ್ಲಿಯೂ ತಯಾರುಮಾಡಿ ಕೊಟ್ಟಿವೆ. ಇತ್ತೀಚೆಗೆ ಸರ್ಕಾರದಲ್ಲಿ economy ತನ್ನತಕ್ಕದ್ದು ನಡೆಯುತ್ತಿಲ್ಲ. ಯಾವ ಇಲಾಖೆಯನ್ನು ತೆಗೆದುಕೊಂಡರೂ ಕೂಡ ದಕ್ಷತೆಯು ಕುಸಿದು ಬೀಳುತ್ತಿದೆ. ಪತ್ರ ವ್ಯವಹಾರದಿಂದ ಯಾವ ಕೆಲಸವೂ ನಡೆಯುವ ಹಾಗಿಲ್ಲ. ಒಬ್ಬ ವ್ಯಕ್ತಿಯೇ ಆಗಲಿ, ಅಥವಾ ಒಂದು ಸಂಸ್ಥೆಯೇ ಆಗಲಿ, ಯಾರೇ ಆಗಲಿ ತಾವೇ ಸ್ವತಃ ಬಂದು ಗುಮಾಸ್ತರ ಹತ್ತಿರ, ಅಧಿಕಾರಿಗಳ ಹತ್ತಿರ ಮಾಡಿಸಿಕೊಂಡು ಹೋದರೆ ಕೆಲಸ ನಡೆಯಬೇಕಾಗಿದೆಯೇ ಹೊರತು ಇಲ್ಲದೆ ಹೋದರೆ ಕೆಲಸಗಳು ನಡೆಯುತ್ತಿಲ್ಲ. ಇದರ ಜೊತೆಗೆ ಹೊರಗಿನಿಂದ ಬಂದಿರತಕ್ಕ ಹತ್ತಾರು ಜನ ಹೇಳಿದ್ದಾರೆ. ಹೈದರಾಬಾದ್ ಭಾಗದ ಒಬ್ಬರು ಬಂದು ತಮಗೆ ಸಂಬಂಧಿಸಿದ ಒಂದು ವಿಚಾರದಲ್ಲಿ ಕೇಳಿದರೆ, ಇನ್ನೂ ಕಾಗದ ಪತ್ರಗಳು ಬಂದಿಲ್ಲವೆಂದು ಹೇಳಿದರು ಎಂದು ನನ್ನ ಹತ್ತಿರ ಹೇಳುತ್ತಾರೆ. ಹೀಗಾದರೆ ನಾವು ಎಲ್ಲಿ ಹೋಗಬೇಕು, ಹೈದರಾಬಾದಿಗೆ ಹೋಗೋಣವೆಂದರೆ ಈಗ ಹೈದರಾಬಾದ್ ಸಂಸ್ಥಾನವಿಲ್ಲ; ನಾವು ಎಲ್ಲಿಗೆ ಹೋಗೋಣ? ಎಂದು ಕೇಳುತ್ತಾರೆ. ಕಾಗದ ಪತ್ರಗಳನ್ನು ತರಿಸಿಕೊಳ್ಳಬೇಕಾದದ್ದು ಅವುಗಳ ಬಗ್ಗೆ ವಿಚಾರಿಸಿಕೊಳ್ಳಬೇಕಾದ್ದು ಸರ್ಕಾರದ ಆದ್ಯ ಕರ್ತವ್ಯ. ಹಿಂದೆ ಗುಲ್ಬರ್ಗ ಕಾಲೇಜಿನಲ್ಲಿರತಕ್ಕ ಅಧ್ಯಾಪಕರಿಗೆ ಮೂರು ತಿಂಗಳ ಸಂಬಳ ಕೊಟ್ಟಿರಲಿಲ್ಲ. ಸರ್ಕಾರಿ ಕಾಲೇಜಿನಲ್ಲಿ ಈ ರೀತಿ ಸಂಬಳ ಕೊಟ್ಟಿರಲಿಲ್ಲವೆಂದರೆ ಯಾವ ರೀತಿಯ ದಕ್ಷತೆಯಿಂದ ಕೆಲಸ ನಡೆಯುತ್ತಿದೆ, ಇದಕ್ಕೆ ಸಂಬಂಧಪಟ್ಟ ಇಲಾಖೆ ಎಂದು ವಿಷಾದದಿಂದ ಹೇಳಬೇಕಾಗಿದೆ. ಇದನ್ನು ಸರ್ಕಾರ ಗಮನಿಸಬೇಕಾದದ್ದು ಯೋಗ್ಯ. ಹಾಗೆಯೇ ನಾವು ಪ್ರತಿ ಸಲವೂ ಕೂಡ ನಮ್ಮ ದೇಶದ ಅಧಿಕಾರವರ್ಗಕ್ಕೆ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಬೇಕು, ವೇತನಗಳನ್ನು ಹೆಚ್ಚು ಮಾಡಬೇಕು. ಅಲೋಯನ್ಸಸ್ ಕೊಡಬೇಕು, ಜೀವನದ ಖರ್ಚುಗಳನ್ನು ನೀಗಬೇಕು ಎಂದು ಹೇಳುತ್ತಿದ್ದೆವು. ಆದರೆ ಇವೊತ್ತು ಲಂಚವೆನ್ನತಕ್ಕ ಭೂತ ಅನೇಕ

ಕಛೇರಿಗಳಲ್ಲಿ ತಾನೆ ತಾನಾಗಿ ತಾಂಡವವಾಡುತ್ತಿದೆ ಎನ್ನತಕ್ಕ ಮಾತು ಇದೆ. ಇದನ್ನು ಕೂಡಲೇ ನಿಲ್ಲಿಸಬೇಕಾದದ್ದು ಅತ್ಯಗತ್ಯ.

ಇನ್ನೊಂದು ವಿಷಯುವನ್ನು ಹೇಳುತ್ತೇನೆ. ನಮ್ಮ ಲೆಜಿಸ್ಲೇಚರ್‌ಗಾಗಿ ಖರ್ಚು ಮಾಡಬೇಕಾಗಿರತಕ್ಕ ಹಣದಲ್ಲಿ ಸರ್ಕಾರದವರು ಕೈಇಡುತ್ತಿದ್ದಾರೆ. ಈ ಬಾಬಿನ ವೆಚ್ಚವನ್ನು ಸಂಪೂರ್ಣವಾಗಿ ವಿಧಾನಸಭೆಯ ಸ್ಪೀಕರ್ ಅವರು ಮತ್ತು ವಿಧಾನಪರಿಷತ್ತಿನ ಛೇರ್ಮನ್ ಅವರು ಇವರಿಬ್ಬರು ಮಾತ್ರ ನಡೆಸಬೇಕಾದದ್ದು. ಅವರುಗಳು ಎಷ್ಟು ಉಳಿತಾಯ ಮಾಡಬಹುದೋ ಅಷ್ಟನ್ನು ಮಾಡುತ್ತಾರೆ. ಆದರೆ ಈ ವಿಧಾನ ಸಭೆಗಳಿಗೆ ಸಂಬಂಧಪಟ್ಟಿರತಕ್ಕ ಕಾರ್ಯಕಲಾಪಗಳ ಸೆಕ್ರೆಟೇರಿಯಟ್ ಜನರಲ್ ಸೆಕ್ರೆಟೇರಿಯಟ್ಟಿನ ಒಂದು ಭಾಗ ಎನ್ನತಕ್ಕದ್ದು ಮಂತ್ರಿಗಳ ಮನಸ್ಸಿನಿಂದಲೂ ಹೋಗಿಲ್ಲ. ಅಧಿಕಾರಿಗಳ ಮನಸ್ಸಿನಿಂದಲೂ ಹೋಗಿಲ್ಲ. ಅಧಿಕಾರಿಗಳ ಮನಸ್ಸಿನಿಂದಲೂ ಹೋಗಿಲ್ಲ. ಡೆಮಾಕ್ರೆಸಿ ಮತ್ತು ಪಾರ್ಲಿಮೆಂಟರಿ ಸಿಸ್ಟಂ ಆಫ್ ಗವರ್ನಮೆಂಟಿನಲ್ಲಿ ಮುಖ್ಯವಾದದ್ದು Executive ಮತ್ತು ಅದಕ್ಕಿಂತ ಹೆಚ್ಚು importance Legislature ಎನ್ನುವುದಕ್ಕೆ ಕೊಡಬೇಕು. ಈ ಲೆಜಿಸ್ಲೇಜರ್ ವಿಷಯದಲ್ಲಿ ನಮ್ಮ ಹಳೆಯ ಮೈಸೂರಿನ ಪರಿಸ್ಥಿತಿ ಮತ್ತು ಈಗಿನ ಪರಿಸ್ಥಿತಿಯನ್ನು ನೋಡಿದರೆ ಸಭೆಗಳು ಒಂದಕ್ಕೆರಡರಷ್ಟು ಆಗಿವೆ; ಕಾರ್ಯಕಲಾಪಗಳು ಒಂದಕ್ಕೆ ನಾಲ್ಕರಷ್ಟಾಗಿದೆ. ಈ ಸಭೆಗಳನ್ನು ಕೆಲಸಮಾಡುವುದಕ್ಕೆ ಮತ್ತು ಇದರ ಕಾರ್ಯಕಲಾಪಗಳನ್ನು ನಿರ್ವಹಿಸತಕ್ಕ ಸೆಕ್ರೆಟರಿಯಟಿಗೆ ಕೊಟ್ಟಿರತಕ್ಕ ಸಹಾಯ ಒಬ್ಬ ಕಾರ್ಯದರ್ಶಿ ಒಬ್ಬ ಸಹಕಾರ್ಯದರ್ಶಿ ಮತ್ತು ನೌಕರರು ಈ ಕೆಲಸಕ್ಕೆ ಕೊಟ್ಟಿರತಕ್ಕ ಸಿಬ್ಬಂದಿ ಮತ್ತು ಇವರ ಸಂಬಳ ಸಾರಿಗೆಗಳು ಈ ವಿಷಯವನ್ನು ನಾವು ಆಲೋಚನೆಮಾಡಿದ ಪಕ್ಷದಲ್ಲಿ "ವಾರದ ಮುತ್ತೈದೆ" ಬಂದರೆ ಜನ ಕಾಣುತ್ತಾರಲ್ಲ ಆ ರೀತಿ ಈ ಸೆಕ್ರೆಟರಿಯಟ್ಟನ್ನು ಕಾಣುತ್ತಿರುವಂತಿದೆ. ನಾವು ಪ್ರಜಾಪ್ರಭುತ್ವ ತತ್ವವನ್ನು ಅನುಸರಿಸುತ್ತಿರುವಾಗ ಪ್ರಜೆಗಳಿಂದ ಚುನಾಯಿತರಾಗಿ ಬಂದಿರುವವರು ಸರ್ಕಾರದ ಆಡಳಿತವನ್ನು ನಡೆಸುತ್ತಿರುವಾಗ, ಪ್ರಜೆಗಳ ಪ್ರತಿನಿಧಿಗಳು ಒಂದು ಪಾತ್ರ ವಹಿಸುತ್ತಿರುವಾಗ, ಪ್ರಜೆಗಳ ಪ್ರತಿನಿಧಿಗಳು ಒಂದು ಪಾತ್ರವಹಿಸುತ್ತಿರುವ ಶಾಸನ ಸಭೆಗಳ ಆಡಳಿತಕ್ಕೆ ಸಂಬಂಧಪಟ್ಟ ಸೆಕ್ರೆಟೇರಿಯಟ್ಟನ್ನು ನಿರ್ಲಕ್ಷ್ಯ ಮಾಡಿದರೆ, ಅವರಿಗೆ ಪ್ರಜಾ ಪ್ರಭುತ್ವದಲ್ಲಿ ನಂಬಿಕೆಯಿಲ್ಲವೆನಿಸುತ್ತದೆ. ಈ ದೃಷ್ಟಿಯಿಂದ 'Parliamentary system of Government' ಎನ್ನತಕ್ಕದ್ದು ಬಹಳ ಚೆನ್ನಾಗಿ ನಡೆದುಕೊಂಡುಬರತಕ್ಕ ದೃಷ್ಟಿಯಿಂದ ಈ ಸೆಕ್ರೆಟರಿಯಟಿನ ವ್ಯವಹಾರವನ್ನು ಸ್ಪೀಕರ್ ಮತ್ತು ಛೇರ್ಮನ್ ಇವರಿಗೇ ಬಿಡಬೇಕು ಮತ್ತು ಈ ಸೆಕ್ರೆಟರಿಯೇಟ್ಟಿಗೆ ಎಷ್ಟು ಸಹಾಯವನ್ನು ಕೊಡಬಹುದೋ ಅಷ್ಟು ಸಹಾಯವನ್ನೂ ಕೊಡಬೇಕು. ಇಲ್ಲದೆ ಹೋದರೆ ಈಗ ಕೇಂದ್ರ ಸರ್ಕಾರದ ನೌಕರರು ಮುಷ್ಕರ ಹೂಡುತ್ತೇವೆಂದು ಕೇಳುತ್ತಿದ್ದಾರೆ. ಇದನ್ನು ನಾವು ಆಲೋಚನೆ ಮಾಡಿಕೊಂಡರೆ, ಸುಮಾರು ಆರು ತಿಂಗಳ ಹಿಂದೆಯೇ ಈ ನೌಕರ ವರ್ಗದವರು ಮುಷ್ಕರ ಹೂಡಬೇಕಾಗಿತ್ತು; ಅವರು ಮುಷ್ಕರ ಹೂಡಿಲ್ಲವೆಂದರೆ ಅವರಿಗೆ ನಮ್ಮ ದೇಶದಲ್ಲಿರತಕ್ಕ ಭಕ್ತಿ, ಸರ್ಕಾರದಲ್ಲಿ ಇನ್ನೂ ಇರತಕ್ಕ ಒಂದು ನಂಬಿಕೆ ಇವು ಹೋಗಿಲ್ಲ. ಆ ನಂಬಿಕೆಯನ್ನು ತೊಡೆದುಹಾಕುವ ಹಾಗೆ ಮಾಡಿಕೊಳ್ಳಬಾರದು ಎಂದು ಸರ್ಕಾರದವರಿಗೆ ಹೇಳುತ್ತಿದ್ದೇನೆ.

ಪೊಲೀಸ್ ಇಲಾಖೆಯ ವಿಷಯದಲ್ಲಿ ಬೇಕಾದಷ್ಟು ಹೇಳಿದ್ದಾರೆ. ನಾನು ಎಲ್ಲವನ್ನೂ ಹೇಳುವುದು ಅನವಶ್ಯಕ. ಪೊಲೀಸ್ ಇಲಾಖೆಯ ವಿಷಯದಲ್ಲಿ ಕೂಡ ಲಂಚದ ವಿಷಯ ತಾನೇ ತಾನಾಗಿದೆ. ಜನಗಳು ಹೇಳುತ್ತಾರೆ, ಒಬ್ಬ ಪೊಲೀಸ್ ಇನ್‌ಸ್ಪೆಕ್ಟರಿಗೆ 75 ರೂಪಾಯಿ ಹೀಗೆ ಮೋಟಾರು ವಾಹನಗಳ ತನಿಖೆ ಅಧಿಕಾರವನ್ನು ಕೊಟ್ಟಿರುವುದರಿಂದ ಬರುತ್ತಿದೆ ಎಂದು, ಮತ್ತು ಈ ಅಧಿಕಾರವರ್ಗಕ್ಕೆ ಸೇರಿರುವವರಿಗೆ ಪಾನನಿರೋದಕ್ಕೆ ಸಂಬಂಧಪಟ್ಟ ಅಧಿಕಾರಗಳನ್ನು ಕೊಟ್ಟಿರುವುದರಿಂದ ಅವರಿಗೆ ಇನ್ನೂ 150 ರೂಪಾಯಿ, 75 ರೂಪಾಯಿ ಹೀಗೆ ಈ ಬಾಬಿನಿಂದಲೂ ಪ್ರತಿ ತಿಂಗಳು ಬರುತ್ತದೆ. ಇವರಿಗೆ ಇದೂ ಒಂದು ಡಿಮಾಂಡ್, ನಮ್ಮಲ್ಲಿ ಹತ್ತಾರು ಡಿಮಾಂಡುಗಳಿದ್ದ ಹಾಗೆ. ಇದರಿಂದ ಆ ಅಧಿಕಾರಿಗಳು ತಾವು ಮಾಡಬೇಕಾಗಿರತಕ್ಕ ಕೆಲಸಗಳನ್ನು ಮಾಡುವುದಿಲ್ಲ. ಆ ವಿಷಯಗಳು ಇದಕ್ಕೆ ಸಂಬಂಧಪಟ್ಟ ಮಂತ್ರಿಗಳಿಗೆ ಗೊತ್ತಿದೆಯೋ ಇಲ್ಲವೋ ತಿಳಿಯದು. ಉದಾಹರಣೆಗೆ ಮೈಸೂರಿನಿಂದ ಬೆಂಗಳೂರಿಗೆ ವಾಹನಗಳು ಬರತಕ್ಕ ರೀತಿಯನ್ನು ಯಾರೂ ಕಂಟ್ರೋಲ್ ಮಾಡುವುದಿಲ್ಲ. ಟ್ರಾಫಿಕ್ ಪೊಲೀಸಿನವರು ಇದನ್ನೆಲ್ಲ ನೋಡಿಕೊಳ್ಳಬೇಕೆಂದು ಗೊತ್ತಾಗಿದ್ದರೂ, ಯಾರೂ ಸಹ ನೋಡಿಕೊಳ್ಳುತ್ತಿಲ್ಲ. ಲಾರಿಗಳು ಬರುವ ವೇಗ, ಆ ದೀಪಗಳ ಬೆಳಕು ಇವುಗಳು ಎದುರುಗಡೆ ಬರುವ ವಾಹನಗಳಿಗೆ ತುಂಬ ತೊಂದರೆಯಾಗುತ್ತದೆ. ಇತರ ವಾಹನಗಳು ಬಂದಾಗ ಅವರು ಯಾವ ರೀತಿ ನಡೆಯಬೇಕೆಂಬ ನಿಯಮವಿದೆಯೋ ಆ ನಿಯಮಗಳನ್ನು ಪಾಲಿಸುತ್ತಿಲ್ಲವೆಂದು ಹೇಳಬಹುದು. ಇತರ ವಾಹನಗಳಲ್ಲಿ ಬರತಕ್ಕವರಿಗೆ ಪ್ರತಿಯೊಂದು ಲಾರಿ ಬಂದಾಗಲೂ, ಮೃತ್ಯುವಿನ ದವಡೆಯಲ್ಲಿದ್ದ ಹಾಗೆ ಕಾಣುತ್ತದೆ. ಇಂಥ ವಿಷಯಗಳಿಗೆ ಸರಿಯಾದ ಗಮನ ಕೊಡಬೇಕು. ಬೆಂಗಳೂರು ನಗರದಂಥ ದೊಡ್ಡ ಪಟ್ಟಣದಲ್ಲಿರುವ ಟ್ಯಾಕ್ಸಿಗಳನ್ನು ಮತ್ತು ಆಟೋರಿಕ್ಷಾಗಳನ್ನು ಇವರಿಗೆ ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೆ ಸಾಧ್ಯವಾಗಿಲ್ಲ. ಇವುಗಳಿಗೆ ಒಂದು ಮೈಲಿಗೆ ಇಷ್ಟು ಕೊಡಬೇಕೆಂದಿದೆ. ಅವನು ಯಂತ್ರವನ್ನು ಹೇಗೆ ಇಟ್ಟುಕೊಂಡಿರಬೇಕು ಎಂದಿದೆ. ಇವುಗಳ ಚಾಲಕರು ಈ ನಿಯಮಗಳನ್ನು ಸರಿಯಾಗಿ ಪಾಲಿಸುತ್ತಿದ್ದಾರೆಯೇ ಎಂಬುದನ್ನೂ ಕೂಡ ನೋಡಿಕೊಳ್ಳುವುದಕ್ಕೆ ಇವರಿಗೆ ಅವಕಾಶವಿಲ್ಲವೆಂದರೆ, ರಾಜ್ಯದ ವ್ಯವಹಾರವನ್ನು ಹೇಗೆ ನೋಡಿ ಕೊಳ್ಳಬಲ್ಲರು ಎಂದೆನಿಸುತ್ತದೆ.

ಇನ್ನು ವ್ಯವಸಾಯ ಶಾಖೆಗೆ ಸಂಬಂಧಪಟ್ಟ ಹಾಗೆ, ಒಂದು ಸಮಯದಲ್ಲಿ ತಮ್ಮಲ್ಲಿ ಅರಿಕೆಮಾಡಿಕೊಂಡ ಹಾಗೆ. ಆಹಾರೋತ್ಪತ್ತಿಯನ್ನು ಹೆಚ್ಚಿಸಬೇಕು. ಅದೃಷ್ಟದಿಂದಲೋ ದುರದೃಷ್ಟದಿಂದಲೋ ನಮ್ಮಲ್ಲಿ ಜನಸಂಖ್ಯೆ ಬರುತ್ತಲೇ ಇದೆ. ಜನಸಂಖ್ಯೆ ಬೆಳೆಯುತ್ತಿರುವ ಹಾಗೆಯೇ ಆಹಾರ ಪದಾರ್ಥಗಳನ್ನು ಒದಗಿಸುವುದಕ್ಕೆ ವ್ಯವಸಾಯ ಮಾಡಿ ಉತ್ಪತ್ತಿಯನ್ನು ಹೆಚ್ಚಿಸಬೇಕು, ವ್ಯವಸಾಯ ಶಾಖೆಗೆ ಕೋಟ್ಯಾಂತರ ರೂಪಾಯಿಗಳನ್ನು ಚೆಲ್ಲಿದ್ದಾರೆ ಬಡ ಬೋರೇಗೌಡನ ಹಣವನ್ನು, ವ್ಯವಸಾಯವನ್ನು ಅಭಿವೃದ್ಧಿ ಮಾಡಬೇಕೆಂದು ಎಷ್ಟು ಹಣವನ್ನು ಚೆಲ್ಲಿದ್ದಾರೆ. ಬಡ ಬೋರೇಗೌಡನಿಗೂ ಕೂಡ, ಸಾಮಾನ್ಯ ಜನರಿಗೂ ಕೂಡ ಇವೊತ್ತು ಅನ್ನದ ಅಭಾವ ದಿನದಿನೇ ಹೆಚ್ಚುತ್ತಿದೆ. ಹೀಗಾಗಿರಬೇಕಾದರೆ ಈ ಇಲಾಖೆಯ ಮೇಲೆ ಖರ್ಚು ಮಾಡಿದ ಹಣವೆಲ್ಲ ಎಲ್ಲಿ ಹೋಗುತ್ತದೆ. ಅಧಿಕಾರಿಗಳು ತಿಂದು ಹಾಕಿ ದುರ್ವ್ಯಯವಾಗುತ್ತಿದೆಯೇ, ಇವರಿಗೆ ಸರಬರಾಯಿ ಮಾಡತಕ್ಕ ಕಾಳುಕಡ್ಡಿಗಳನ್ನು ರೈತರಿಗೆ ಸರಿಯಾಗಿ ಕೊಡುವುದಿಲ್ಲವೇ, ಗೊಬ್ಬರವನ್ನು ಒದಗಿಸುವುದಲ್ಲದೆ ಅಥವಾ

ದೇಶದಲ್ಲಿ ಆಹಾರ ಉತ್ಪತ್ತಿಯಾದರೂ ಕೂಡ ಕೆಲವರಿಗೆ ಸೌಕರ್ಯವನ್ನುಂಟುಮಾಡಬೇಕು ಎನ್ನುವುದಕ್ಕೋಸ್ಕರ ಬೆಲೆಯನ್ನು ಕಂಟ್ರೋಲ್ ಮಾಡುವುದಕ್ಕೆ ಹೊರಟಿರುವುದು ಏತಕ್ಕೋಸ್ಕರ ಆಹಾರದ ಉತ್ಪತ್ತಿ ಏತಕ್ಕೆ ಆಗಿಲ್ಲ ಎನ್ನುವುದಕ್ಕೆಲ್ಲ ಸಮಂಜಸವಾದ ಉತ್ತರವನ್ನು ನಾಲ್ಕಾರು ವರ್ಷಗಳಿಂದಲೂ ಕೂಡ ಇದಕ್ಕೆ ಸಂಬಂಧಪಟ್ಟ ಮಂತ್ರಿಗಳು ಕೊಟ್ಟೇಇಲ್ಲ.

ಆದುದರಿಂದ ಇದಕ್ಕೆ ಕೂಡತಕ್ಕ ಹಣ ಕೇವಲ ಅಧಿಕಾರವರ್ಗದ ವೇತನಕ್ಕೆ ಮತ್ತು ಇತರ ಹವ್ಯಾಸಗಳಿಗೆ ಹೋಗದೆ ಆಹಾರೋತ್ಪತ್ತಿಗೆ ಹೋಗಬೇಕು. ಎಷ್ಟು ಜಮೀನು ಉಳುಮೆಗೆ ಲಾಯಕ್ಕಾಗಿದೆಯೋ ಅಷ್ಟನ್ನೂ ವ್ಯವಸಾಯಮಾಡಿ ಹೆಚ್ಚು ಆಹಾರವನ್ನು ಉತ್ಪತ್ತಿ ಮಾಡುವುದಕ್ಕೆ ಪ್ರಯತ್ನ ಮಾಡಬೇಕು. 126 ಕೋಟಿ ರೂಪಾಯಿ ವ್ಯವಹಾರದಲ್ಲಿ ಹತ್ತು ಕೋಟಿ ರೂಪಾಯಿಗಳನ್ನು ವಿದ್ಯಾಭ್ಯಾಸಕ್ಕೆ ಕೇಳಿದ್ದಾರೆ. ಮತ್ತು ಇತರ ಅನೇಕ ದೇಶಾಭ್ಯುದಯ ಕಾರ್ಯಗಳಿಗೂ ಕೇಳಿದ್ದಾರೆ. ದೇಶಾಭ್ಯುದಯ ಕಾರ್ಯಗಳಿಗೆ ಕೇಳಿರತಕ್ಕ ಹಣ ಸಕಾಲದಲ್ಲಿ ಆಯಾ ಇಲಾಖೆಗಳಿಗೆ ದೊರೆಯುವ ಹಾಗೆ ಮಾಡಿ ಅದು ಸದ್ವಿನಿಯೋಗವಾಗುವಂತೆ ಮಾಡಬೇಕು.

ಸರ್ಕಾರದ ಹೊಣೆ ಈಗ ಹೆಚ್ಚಾಗಿದೆ. ಸರ್ಕಾರದ ಆದಾಯದಿಂದ ಸುಮಾರು 70 ಕೋಟಿ ರೂಪಾಯಿಗಳಲ್ಲಿ ಸುಮಾರು ಎಂಟನೆಯ ಒಂದು ಭಾಗದಷ್ಟು ಹಣ ನಾವು ಮಾಡಿರುವ ಸಾಲ ತೀರ್ಪಿಗಾಗಿ ಕೊಡುತ್ತಿದ್ದೇವೆ. ಎರಡು ಕೋಟಿ ಪ್ರಜಾಸಂಖ್ಯೆ ಇರುವ ಈ ಸಂಸ್ಥಾನದಲ್ಲಿ ಪ್ರತಿ ಪ್ರಜೆಯೂ ಪ್ರತಿ ವರ್ಷವೂ ನಾಲ್ಕು ರೂಪಾಯಿ ಬಡ್ಡಿಯ ಹೊರೆಯನ್ನು ಹೊರಬೇಕಾಗಿದೆ. ಈ ವ್ಯಾದಿಯನ್ನು ತಕ್ಷಣ ನಿವಾರಣೆ ಮಾಡುವುದಕ್ಕೆ ಕಾರ್ಯಕ್ರಮ ಕೈಗೊಳ್ಳಬೇಕು. ಇದಕ್ಕೆ ಒಂದು ಸಮಿತಿಯನ್ನು ನೇಮಕಮಾಡಿ ಪರಿಶೀಲನೆಮಾಡಿಸಬೇಕು ಸರ್ಕಾರದವರು ಸಾರ್ವಜನಿಕರ ಹಣವನ್ನು ಪಡೆಯುವಾಗ ಅದು ಸದ್ವಿನಿಯೋಗವಾಗುವಂತೆ ಚಾಣಾಕ್ಷತೆಯಿಂದ ಸರ್ಕಾರ ನಡೆಸಬೇಕೆಂದು ಹೇಳಿ ಮುಗಿಸುತ್ತೇನೆ.

## 4. ಹೆಚ್ಚುವರಿ ಬೇಡಿಕೆಗಳ ಕುರಿತಂತೆ ನಡೆದ ಚರ್ಚೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ) ಮಾನ್ಯ ಸಭಾಪತಿಗಳೇ, ಹೆಚ್ಚುವರಿ ಬೇಡಿಕೆಗಳ ಪ್ರಸಂಗ ನಮ್ಮ ದೇಶದಲ್ಲಿ ವರ್ಷಂ ಪ್ರತಿ ಶ್ಯಾಮಭಟ್ಟರಿಗೆ ಜನ್ಮನಗಡಿ ಬಂದ ಹಾಗೆ ವಾರ್ಷಿಕ ವ್ಯಾಧಿಯು ಬಹಳ ಕಾಲದಿಂದಲೂ ಬರುತ್ತಿದೆ. ಯಾವ ಕಾಲದಲ್ಲೋ ಈ ವ್ಯಾಧಿಯನ್ನು ಸಂಪೂರ್ಣವಾಗಿ ತೊಡೆದು ಹಾಕಬೇಕಾಗಿತ್ತು. ಇಂಥಾ ಡಿಫಿಸಿಟ್ ಬಡ್ಜೆಟ್ಟುಗಳನ್ನು ಸಭೆಯ ಮುಂದಿಟ್ಟು ಸದಸ್ಯರ ತೀವ್ರವಾದ ಕಟು ಟೀಕೆಗಳಿಗೆ ತುತ್ತಾಗುತ್ತಿದ್ದಾರೆ. ಇಂಥಾ ಹೆಚ್ಚುವರಿ ಬೇಡಿಕೆಗಳನ್ನು ಸಭೆಯ ಮುಂದೆ ಇಡುತ್ತಲೇ ಇರಬೇಕಾಗಿದ್ದರೆ ಅವರ ಎದೆಗಾರಿಕೆಯು ಎಷ್ಟಿರಬೇಕು ಎಂದು ಆಶ್ಚರ್ಯವಾಗುತ್ತದೆ.

ಒಂದು ರೀತಿ ಮೆಚ್ಚತಕ್ಕದ್ದು. ಜೊತೆಗೆ ಅಷ್ಟು ದಪ್ಪಚರ್ಮ ಇದೆಯೆಲ್ಲಾ ಎನ್ನುವುದು ಕಂಡು ಬಂದಿದೆ. ಹೆಚ್ಚುವರಿ ಬೇಡಿಕೆಗಳನ್ನು ಸಭೆಯ ಮುಂದೆ ಇಟ್ಟ ಸಂದರ್ಭದಲ್ಲಿ ಫೈನಾಕ್ಷಿಯಲ್

4. ಹೆಚ್ಚುವರಿ ಬೇಡಿಕೆಗಳ ಕುರಿತಂತೆ 11.3.1958 ರಂದು ನಡೆದ ಚರ್ಚೆಯಲ್ಲಿ (ಸಪ್ಲಿಮೆಂಟರಿ ಎಷ್ಟಿಮೇಟ್ಸ್ ಕುರಿತಂತೆ)

ಸೆಕ್ರೆಟರಿಯವರು ಇಂಟರ್‌ಡಕ್ಟರಿ ಮೆಮೊರಾಂಡಾಂನಲ್ಲಿ ಸೂಚನೆಗಳನ್ನು ಮಾಡಿದ್ದಾರೆ. ಅದು ಕಾನೂನುಬದ್ಧವಾಗಿರುವುದರಿಂದ ಕಾನೂನಿಗೆ ತಕ್ಕಂತೆ ಹೆಚ್ಚುವರಿ ಬೇಡಿಕೆಗಳನ್ನು ಸಭೆಯ ಮುಂದೆ ಇಟ್ಟು ಅವರ ಒಪ್ಪಿಗೆಯನ್ನು ಪಡೆಯತಕ್ಕದ್ದು. ಸಂವಿಧಾನದ ಸಂಪ್ರದಾಯ ಪ್ರಕಾರ ಅದನ್ನು ನಡೆಸಿಕೊಳ್ಳಬೇಕು ಎಂದು ಹೇಳುವುದು ಒಪ್ಪತಕ್ಕ ಮಾತು. ಆದರೆ ಈ ಹೆಚ್ಚುವರಿ ಬೇಡಿಕೆಗಳಲ್ಲಿ 1957–58 ನೆಯ ವರ್ಷಕ್ಕೆ ಕೇಳಿರತಕ್ಕ ಮೊತ್ತವೇನು? ಯಾವ ಯಾವ ಇಲಾಖೆಗಳಲ್ಲಿ ಕೇಳಿದ್ದರು ಇದಕ್ಕೆ ಪೂರ್ವಭಾವಿಯಾಗಿ ಎಷ್ಟು ಹಣವನ್ನು ಶಾಸನ ಸಭೆಯು ಒಪ್ಪಿದವರಿಗೆ ಕೊಟ್ಟಿದೆ? ಇದನ್ನು ಕೇಳಬೇಕಾದ ಪ್ರಸಂಗವೇನು? ಎನ್ನುವ ವಿಷಯದಲ್ಲಿ ನಾಲ್ಕು ಮಾತುಗಳನ್ನಾಡತಕ್ಕದ್ದು ಯೋಗ್ಯವೆಂದು ನಾನು ತಿಳಿದುಕೊಂಡಿದ್ದೇನೆ.

ಸುಮಾರು ಒಂಭತ್ತು ಕೋಟಿ ಡಿಫಿಸಿಟ್ಟು ಬಜೆಟ್ಟನ್ನು ಮಾಡಿದ ಸರಕಾರ ಈ ಪಟ್ಟಿಯಲ್ಲಿ Capital outlay not met from Revenue ಎನ್ನುವುದರಲ್ಲಿ ಸುಮಾರು 3,01,00,300 ರೂಪಾಯಿಗಳನ್ನು ಕೇಳಿದ್ದಾರೆ. ಇಲ್ಲಿ ಒಟ್ಟು ಬಜೆಟ್ಟಿನಲ್ಲಿ ನಾಲ್ಕು ಕೋಟಿ ಹೆಚ್ಚುವರಿ ಬೇಡಿಕೆಗಳನ್ನು ಕೇಳಿದ್ದಾರೆ. ಡಿಫಿಸಿಟ್ಟು ಬಜೆಟ್ಟಿನ ವಿಚಾರವಾಗಿ ದ್ರವ್ಯಶಾಖೆಯ ಮಂತ್ರಿಗಳಾದ ಶ್ರೀ ಮರಿಯಪ್ಪನವರು 1957ನೆಯ ಇಸವಿಯ ಜೂನ್ ತಿಂಗಳು 15ನೇ ತಾರೀಖಿನ ದಿವಸ ಮಾಡಿದ ಭಾಷಣದಲ್ಲಿ

"1957–68 ನೆಯ ವರ್ಷದ ಸಲುವಾಗಿ ನಾನು 1957ನೆಯ ಇಸವಿ ಮಾರ್ಚ್ 20ನೆಯ ದಿನಾಂಕದಂದು ತಾತ್ಕಾಲಿಕ ಆಯವ್ಯಯದ ಅಂದಾಜುಗಳನ್ನು ತಮ್ಮ ಮುಂದೆ ಮಂಡಿಸಿದ್ದಾಗ್ಯೂ ಈ ಅಡಚಣೆಗಳು ಅಷ್ಟೇನೂ ಬಗೆಹರಿದಿರಲಿಲ್ಲ. ಆ ದಿನ ನಾನು ಖರ್ಚಿನ ಬೇರೆ ಬೇರೆ ಬಾಬುಗಳ ಸಲುವಾಗಿ ಒಂದೆರಡು ವರ್ಷಗಳಿಗೆ ಸಂಬಂಧಿಸಿದ ನಿರ್ಧಿಷ್ಟವಾದ ಅಂಕಿ ಅಂಶಗಳನ್ನು ಪಡೆದಾಗಲೇ ನಮ್ಮ ನೈಜವಾದ ಆರ್ಥಿಕ ಪರಿಸ್ಥಿತಿಯೇನೆಂಬುದು ನಮಗೆ ಗೋಚರವಾಗಲು ಸಾಧ್ಯ ಎಂಬುದಾಗಿ ಸೂಚಿಸಿದ್ದುದು ತಮಗೆ ಜ್ಞಾಪಕವಿರಬಹುದು. ಈ ಮಾತು ಇಂದಿಗೂ ಅನ್ವಯಿಸುವುದು. ಆದರೂ ಸಹ ಜಮೆಗಳಿಗೂ ವೆಚ್ಚಕ್ಕೂ ಸಂಬಂಧಪಟ್ಟಂತೆ ಸಾಧ್ಯವಾದ ಮಟ್ಟಿಗೂ ನಿರ್ಧಿಷ್ಟವಾದ ಅಂದಾಜುಗಳನ್ನು ಈ ಸದನದಲ್ಲಿ ಮಂಡಿಸಬೇಕೆಂಬ ಆಶಯದಿಂದ ಹಣಕಾಸಿನ ಇಲಾಖೆಯವರು ಎಲ್ಲ ಕಡೆಗಳಿಂದಲೂ ಶಕ್ಯವಿದ್ದಷ್ಟು ವಿಷಯ ಸಾಮಗ್ರಿಗಳನ್ನು ಸಂಗ್ರಹಿಸಿಕೊಂಡು, ಎಷ್ಟರ ಮಟ್ಟಿಗೆ ಸಾಧ್ಯವೋ ಅಷ್ಟರಮಟ್ಟಿಗೂ ಆ ವಿವರಗಳನ್ನು ಪರಿಶೋಧಿರುತ್ತಾರೆ." ಪ್ರಾಂತ ಪುನರ್ವಿಂಗಡಣೆಯಾದ ಮೇಲೆ ಇಲ್ಲಿಗೆ ಬೇಕಾದ ಆಡಳಿತ ಸೌಕರ್ಯಗಳನ್ನು ತೆಗೆದುಕೊಂಡು ಪುನಃ ಇಡೀ ಹಣಕಾಸಿನ ಬಜೆಟ್ಟನ್ನು ತಯಾರಿಸಬೇಕೆಂದು ಹೇಳಿದ್ದಾರೆ. ಅಲ್ಲಿ ಹೇಳಿರುವಂತೆ ಸುಮಾರು ಎಂಟುಕೋಟಿ ರೂಪಾಯಿಗಳನ್ನು ಯೋಜನೆಯ ವೆಚ್ಚಕ್ಕಾಗಿ ಮತ್ತು ಐದು ಕೋಟಿ ರೂಪಾಯಿಗಳನ್ನು ಸಾಲಗಳ ತೀರ್ವೆಗಾಗಿಯೂ ತೆಗೆದಿಟ್ಟಿದ್ದಾರೆ. ಯಾವ ಯಾವ ಬಾಬುಗಳಿಗೆ ಎಷ್ಟು ಹಣ ಬೇಕಾಗುವುದೋ ಅದನ್ನು ಬಜೆಟ್ಟಿನೊಳಗೇ ಮೀಸಲಾಗಿಟ್ಟದ್ದಾರೆ. ಇಷ್ಟು ಕೆಲಸ ಮಾಡಬೇಕಾಗಿರುವುದರಿಂದ ನಮ್ಮ ಹಣಕಾಸಿನಲ್ಲಿ ಸುಮಾರು ಒಂಭತ್ತು ಕೋಟಿ ರೂಪಾಯಿಗಳಷ್ಟು ಖೋತಾ ಆಗಬಹುದು ಎಂದು ಹೇಳಿದ್ದಾರೆ.

ಮತ್ತೊಂದು ವಿಷಯ. ಈಗ ಸರಕಾರದವರು ಇಲ್ಲಿ ಎಕ್ಸಪ್ಲನೇಷನನ್ನು ಸರಿಯಾಗಿ ಕೊಟ್ಟಿಲ್ಲ. ಇಲ್ಲಿ ಹೇಳಿರುವಂತೆ ಸುಮಾರು ಒಂದು ಕೋಟಿ ರೂಪಾಯಿಗಳನ್ನು ವರ್ಕಿಂಗ್ ಎಕ್ಸ್‌ಪೆನ್ಸಸ್ಸಿಗೂ ಮತ್ತು ಮೂರು ಕೋಟಿ ರೂಪಾಯಿಗಳನ್ನು Capital Outlay not met from Revenue ಬಾಬಿಗೂ ಹೀಗೆ ನಾಲ್ಕು ಕೋಟಿ ರೂಪಾಯಿ ಹೆಚ್ಚಿಗೆ ಕೇಳಿರುವುದನ್ನು ನೋಡಿದರೆ ಈ ಆಯವ್ಯಯ ಪಟ್ಟಿಯನ್ನು ತಯಾರು ಮಾಡಿರತಕ್ಕ ವಿಧದಲ್ಲಿ ಯಾವುದೋ ಒಂದು ನ್ಯೂನತೆಯಿದೆ. ವಾರ್ಷಿಕವಾಗಿ ಕೊಡತಕ್ಕ ಹಣವನ್ನು ಒಂದು ಹಿಡಿತದಿಂದ ಖರ್ಚು ಮಾಡಲು ಮಂತ್ರಿಗಳ ಕೈಯನ್ನು ಅವರ ಕೈಕೆಳಗೆ ಕೆಲಸ ಮಾಡತಕ್ಕ ಕಾರ್ಯದರ್ಶಿಗಳು ಹಿಡಿದಿಟ್ಟಿದ್ದಾರೆ ಎನ್ನುವುದು ಸೂಕ್ಷ್ಮವಾಗಿ ಇಲ್ಲಿ ಗೊತ್ತಾಗುತ್ತದೆ.

ಇನ್ನು ಎರಡು ಮೂರು ಅಂಶಗಳನ್ನು ಸಭೆಯ ಮುಂದೆ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಇಂತಹ ಹೆಚ್ಚುವರಿ ಬೇಡಿಕೆಗಳನ್ನು ಕೇಳಬಾರದು. ಸುಮಾರು ಜುಲೈಯ ತಿಂಗಳಿನಲ್ಲಿ ಶಾಸನ ಸಭೆಯು ಸೆಷನ್ನಿನಲ್ಲಿದ್ದಾಗ ಆಯವ್ಯಯದ ಅಂಗೀಕರವನ್ನು ಪಡೆದಿದ್ದರು. ಈಗ ಪುನಃ ಶಾಸನ ಸಭೆಯ ಮುಂದೆ ಹೆಚ್ಚಿನ ಬೇಡಿಕೆಗಳನ್ನು ತಂದಿದ್ದಾರೆ. ಈಗ ವರ್ಷದ ಕೊನೆಯಾದುದರಿಂದ ಇಂತಹ ಬೇಡಿಕೆಗಳಿಗಾಗಿ ಕಾನೂನುಬದ್ಧವಾಗಿ ಶಾಸನದ ಒಪ್ಪಿಗೆ ಪಡೆಯಲು ಈ ರೀತಿಯ ಅವಕಾಶವನ್ನು ಕಲ್ಪಿಸಿಕೊಳ್ಳುವುದಕ್ಕಾಗಿ ಈ ಹೆಚ್ಚುವರಿ ಬೇಡಿಕೆಗಳನ್ನು ಈ ಶಾಸನ ಸಭೆಯ ಮುಂದೆ ತಂದು ಇಂದು ಪಾಸಾಗುತ್ತಿದೆ. ಇದರಲ್ಲಿ ಎರಡು ವಿಷಯಗಳು ನನ್ನ ಮನಸ್ಸಿಗೆ ಒಪ್ಪದೇ ಇರತಕ್ಕದ್ದು. ಮೊದಲನೆಯದಾಗಿ charged items ಗಾಗಿ 22,15,400 ರೂಪಾಯಿಗಳನ್ನು ಕೇಳಿದ್ದಾರೆ. ಇದು ಡಿಮ್ಯಾಂಡು 10ರಲ್ಲಿದೆ. ಇದರ Explanatory Note ನಲ್ಲಿ ಹೀಗೆ ಹೇಳಿದ:-

"To meet the interest charges of the loans transferred from Bombay for the last five months of 1956-57 expected to be adjusted during that year, but actually passed on for adjustment during current year."

"The additional sums now included are required to meet the expenditure on account of interest for six months and discount at 1-25 percent payable on $4^1/_4$ percent Development Loan 1969. No provision was made in the Budget Estimates for the current year, as these items of expenditure could not be determined in the absence of terms of the loan".

ಜೂನ್ ತಿಂಗಳಿನಲ್ಲಿ ಆಯವ್ಯಯ ಪಟ್ಟಿಯನ್ನು ಸಭೆಯ ಮುಂದೆ ಇಟ್ಟಾಗಲೇ ಶಾಸನ ಸಭೆಯ ಒಪ್ಪಿಗೆ ಪಡೆದಿದ್ದಾರೆ. ಸಾಲ ತರುವುದಕ್ಕೆ ಶಾಸನ ಸಭೆಯ ಒಪ್ಪಿಗೆಯನ್ನು ಪಡೆದಿದ್ದಾರೆ. ಶಾಸನ ಸಭೆಯ ಒಪ್ಪಿಗೆಯನ್ನು ಪಡೆದಾಗ ಸಾಲದ ಮೇಲೆ ಬಡ್ಡಿ ಕೊಡುವುದಕ್ಕೂ ಸರಕಾರ

ಒಪ್ಪಿಗೆಯನ್ನು ಪಡೆಯಬೇಕಾಗಿತ್ತು. ಇಂತಹ ಸಮಯದಲ್ಲಿ ಇದನ್ನು ಏಕೆ ತರಬೇಕಾಗಿತ್ತು? ಡೆಫಿಸಿಟ್ಟು ಬಡ್ಜೆಟ್ಟು ಹೆಚ್ಚಾಗುತ್ತ ಬಂದು ಹೆಚ್ಚಿನ ಡೆಫಿಸಿಟ್ಟನ್ನು ತೋರಿಸಿದರೆ ಅದನ್ನು ಸರಿತೂಗಿಸುವುದು ಕಷ್ಟ ಸಾಧ್ಯವಾದೀತು. ಆದ್ದರಿಂದ ಏನೋ ಕೈವಾಡವನ್ನು ತೋರಿಸಿ ಅಂಕಿ ಅಂಶಗಳಿಗೆ ಒಂದು ಬಣ್ಣವನ್ನು ಕಟ್ಟಿ ತೋರಿಸಿದರೆ ನಮ್ಮ ಸ್ಥಿತಿ ಉತ್ತಮವಾದೀತು ಎನ್ನುವ ದೃಷ್ಟಿಯಿಂದ ಮಾಡಿದ್ದಾರೆಂದು ಕಾಣುತ್ತದೆ. ಅಲ್ಲೇ ಹೆಚ್ಚಾಗಿ ಹೇಳಿಬಿಟ್ಟರೆ ಸರಿಯಾಗಿರುವುದಿಲ್ಲ ಎಂದು ಅಲ್ಲಿ ಹೇಳಲಿಲ್ಲ. ಈಗ ನಮ್ಮ ಮೈಸೂರು ಸರಕಾರ ತೆರಬೇಕಾದ ಸಾಲ ಮತ್ತು ಆ ಸಾಲದ ಮೇಲಿನ ಬಡ್ಡಿ ವಿಷ ಏರಿದ ಹಾಗೆ ಏರುತ್ತಿದೆ. ಇದನ್ನು ಅನೇಕ ಸದಸ್ಯರು ಹೇಳಿದ್ದಾರೆ. ಹೀಗೆ ದೇಶಾಭಿವೃದ್ಧಿ ಕೆಲಸಕ್ಕೆಂದು ಸಾಲದ ಹೊರೆ ಹೆಚ್ಚಿನ ಪಕ್ಷದಲ್ಲಿ ದೇಶಾಭಿವೃದ್ಧಿ ಕಾರ್ಯಗಳನ್ನು ನಡೆಸುವುದಕ್ಕೆ ಸರಕಾರ ಅಸಮರ್ಥವಾಗುತ್ತದೆ. ಇಲ್ಲಿರುವ Explanatory Note ನಲ್ಲಿ ಸರಿಯಾದ ಕಾರಣಗಳನ್ನು ಕೊಟ್ಟಿಲ್ಲ ಎಂದು ನಾನು ತಿಳಿದುಕೊಂಡಿದ್ದೇನೆ. ಬಡ್ಡಿಯನ್ನು ಕೊಡತಕ್ಕ ಪರಿಸ್ಥಿತಿ, ನಾವು ಸಾಲವನ್ನು ಹೊತ್ತಿರತಕ್ಕ ಪರಿಸ್ಥಿತಿ ಇದನ್ನು ನೋಡಿದರೆ ನಮ್ಮ ರಾಜ್ಯದಲ್ಲಿ ಹುಟ್ಟುವ ಮಕ್ಕಳು ಹೆಚ್ಚಾಗುವಂತೆ ಇದೂ ಏರುತ್ತಿದೆ. ನಮ್ಮ ರಾಜ್ಯದಲ್ಲಿ ಹುಟ್ಟತಕ್ಕ ಮಕ್ಕಳು ಹೆಚ್ಚಾಗುತ್ತಿರುವುದರಿಂದ ಈ ರತ್ನಗರ್ಭಿಯಾದ ಕರ್ನಾಟಕ ರಾಜ್ಯದಲ್ಲಿ ಒಬ್ಬರು ನಾಲ್ಕು ರೂಪಾಯಿಗಳಷ್ಟು ಹೊರೆಯನ್ನು ಹೊತ್ತುಕೊಂಡು ಹೋಗಬೇಕಾದರೆ ಎಂದು ಹೇಳಿದರೆ ತಪ್ಪಾಗುವುದಿಲ್ಲ.

ಉತ್ತರ ಕರ್ನಾಟಕ ಮಾತ್ರ ರತ್ನಗರ್ಭಿಯಾಗಿ ಸಮುದ್ರ ಪರಿವೇಷ್ಟಿಯಾಗಿ ನಿಂತಿದೆ. ಹೊರಗಡೆಯಿಂದ ಬಂದ ಪ್ರಾಂತಗಳಿಂದ ಇವುಗಳ ಲೆಕ್ಕ ಏನು ಎನ್ನುವುದು ತಿಳಿಯುತ್ತದೆ. ಒಂದೇ ಒಂದು ಉದಾಹರಣೆ ಹೇಳುತ್ತೇನೆ. 1936ನೇ ಇಸವಿಯ ಆಡಿಟ್ ರಿಪೋರ್ಟ್‌ನ್ನು ಪರಿಶೀಲಿಸಿದರೆ ಇದು ಸಹಜವಾದ ಸಸಂಮೃದ್ಧವಾದ ದೇಶವೇ, ಇಲ್ಲ ಸಾಲದ ಹೊರೆ ಹೆಚ್ಚಾಗುತ್ತಿದೆಯೇ ಎನ್ನುವುದನ್ನು ನೋಡಿದರೆ ಸರಿಯಾದ ರೀತಿಯಲ್ಲಿಲ್ಲವೆನ್ನುವುದು ತಿಳಿಯುತ್ತದೆ.

ಈಗಿನ ಸರಕಾರ ತೆಗೆದುಕೊಳ್ಳತಕ್ಕ ಸಾಲದ ಹೊರೆಯನ್ನು ನೋಡಿದರೆ ಈ ಸಾಲವನ್ನು ತೀರಿಸುವ ಯೋಜನೆಯನ್ನು ಏನೂ ಮಾಡುತ್ತಿಲ್ಲವೆಂದು ತೋರುತ್ತದೆ.

ಹಳೆಯ ಮೈಸೂರಿನ ಪರಿಸ್ಥಿತಿ ಏನಿತ್ತು ಎನ್ನುವುದು ಅನೇಕ ಜನ ಸಭೆಯ ಸದಸ್ಯರಿಗೆ ಮನದಟ್ಟಾಗಿದೆ. ಪ್ರತಿ ವರ್ಷದ ಸಾಲದ ಹೊರೆ ಮತ್ತು ಈ ಸಾಲದ ಮೇಲೆ ಕೊಡಬೇಕಾದ ಬಡ್ಡಿದರ. ಇವು ನಮ್ಮ ಶಕ್ತಿ ಸರ್ವಸ್ವವನ್ನು ಕಿತ್ತುಕೊಂಡು ಹೋಗುವುದರಿಂದ ಈ ಪರಿಸ್ಥಿತಿಯಲ್ಲಿ ಸರಕಾರ ಈ ಸಾಲವನ್ನು ವಾಪಸ್ಸು ಮಾಡುವ ಸ್ಥಿತಿಯಲ್ಲಿಲ್ಲ ಎನ್ನುವುದು ಕಂಡು ಬರುತ್ತದೆ. ಸಾಲಕ್ಕಾಗಿ ಬಡ್ಡಿಯನ್ನು ಕೊಡುವುದು ಹೆಚ್ಚಾಗಬಾರದು ಮತ್ತು ಈ ಸಾಲವನ್ನು ಸತತವಾಗಿ ತೀರಿಸಲು ಆದಷ್ಟು ಪ್ರಯತ್ನ ಮಾಡಬೇಕು.

ಇಲ್ಲಿರುವ ಈ ಒಂದು ಕೋಟಿ ಚಿಲ್ಲರೆ ರೂಪಾಯಿಗಳ ಬೇಡಿಕೆಯಲ್ಲಿ 22 ಲಕ್ಷ ರೂಪಾಯಿಗಳು charged items ಗಾಗಿ ಎಂದರೆ ಬಡ್ಡಿಗೋಸ್ಕರ ಹೋಗುತ್ತಿದೆ. ಇಂತಹ ಪರಿಸ್ಥಿತಿಯನ್ನು ಸರಕಾರ ಕೂಲಂಕುಷವಾಗಿ ಪರಿಶೀಲನೆ ಮಾಡಬೇಕಾದ್ದು ಅಗತ್ಯ ಎಂದು ನಾನು ಸೂಚಿಸುತ್ತಿದ್ದೇನೆ.

ಇನ್ನು ಟೋಕನ್ ಗ್ರಾಂಟುಗಳನ್ನು ಕೇಳಿದ್ದಾರೆ. ಯಾವ ಯಾವ ಬಾಬಿಗಾಗಿಯೆಂದರೆ (1) ಫಾರೆಸ್ಟ್ (2) ಜನರಲ್ ಅಡ್ಮಿನಿಸ್ಟ್ರೇಷನ್ (3) ಎಜುಕೇಷನ್ ಇಷ್ಟು ಬಾಬುಗಳಿಗೆ ಕೇಳಿದ್ದಾರೆ. ಈ ಬಾಬುಗಳಿಗೆ ಪ್ರತಿಯೊಂದಕ್ಕೂ 100 ರೂಪಾಯಿಗಳ ಟೋಕನ್ನು ಗ್ರಾಂಟನ್ನು ಕೇಳಿದ್ದಾರೆ. ಇದಾದನಂತರ Capital outlay not met from Revenue ಎಂಬ ಹೆಡ್ಡಿನಲ್ಲಿ 200 ರೂಪಾಯಿಗಳ ಟೋಕನ್ ಗ್ರಾಂಟನ್ನು, Construction of irrigation, Navigation, Embankmentworks ಎಂಬ ಬಾಬಿಗೆ ಕೇಳಿದ್ದಾರೆ. ಅದೇ ಬಾಬಿನ ಕೆಳಗೆ 51ನೆಯ ಡಿಮ್ಯಾಂಡ್ ಬಗ್ಗೆ 100 ರೂಪಾಯಿಗಳ ಟೋಕನ್ ಗ್ರಾಂಟನ್ನು ಕೇಳಿದ್ದಾರೆ. ಇದೇನೋ ಕಾನೂನುಬದ್ಧವಾಗಿದೆ. ಯಾವುದಾದರೂ ಒಂದು ಹೊಸ ಕೆಲಸವನ್ನು ಪ್ರಾರಂಭ ಮಾಡುವಾಗ ಅದರ ಬಗ್ಗೆ ಈ ರೀತಿ ಒಂದು ಟೋಕನ್ ಗ್ರಾಂಟನ್ನು ಪಡೆಯಲು ಅವಕಾಶವಿದೆ. ಆದರೆ ಇಲ್ಲಿ ತಿಳಿಸಿರುವಂಥ ಕೆಲವು ಬಾಬುಗಳ ಬಗ್ಗೆ ಹೀಗೊಂದು ಟೋಕನ್ ಗ್ರಾಂಟನ್ನು ಕೇಳುವಂಥ ಪರಿಸ್ಥಿತಿ ಇರಲಿಲ್ಲವೆಂದು ಹೇಳಬೇಕಾಗಿದೆ. ಅಂಥ ಒಂದು ಐಟಂ ಯಾವುದೆಂದರೆ – ಡಿಮ್ಯಾಂಡ್ ನಂಬರ್ 13. ಮೈಸೂರು ಗೆಜೆಟಿಯರ್ ಆಫೀಸಿನ ಬಗ್ಗೆ ಇಂಥ ಒಂದು ಟೋಕನ್ ಗ್ರಾಂಟನ್ನು ಪಡೆಯತಕ್ಕ ಅವಶ್ಯಕತೆ ಸರ್ಕಾರದವರಿಗೆ ಇರಬೇಕಾಗಿಲ್ಲವೆಂಬುದು ಇಲ್ಲಿ ಬಂದಿರುವ ಎಕ್ಸ್‌ಪ್ಲನೇಟರಿ ನೋಟನ್ನು ನೋಡಿದರೆ ಎಲ್ಲರಿಗೂ ಸ್ಪಷ್ಟವಾಗಿ ತಿಳಿದುಬರುತ್ತದೆ. ಆ ಒಂದು ಸಿಬ್ಬಂದಿ 1957ನೆಯ ಅಕ್ಟೋಬರ್ ತಿಂಗಳಿನಲ್ಲೇ ಮಂಜೂರಾಗಿದ್ದುದರಿಂದ ಅದಕ್ಕೆ ಖಚಿತವಾಗಿ ಎಷ್ಟು ಮೊಬಲಗು ಬೇಕಾಗುತ್ತಿದ್ದಿತೋ ಅಷ್ಟು ಗೊತ್ತಾಗದೆ ಇದ್ದಾಗ್ಯೂ ಒಂದು ಸಾವಿರ ರೂಪಾಯಿಗಳ ಹೆಚ್ಚು ಕಡಿಮೆ ಇರುವಷ್ಟನ್ನಾದರೂ ಹಿಂದಿನ ಬಡ್ಜೆಟ್ಟಿನಲ್ಲೇ ಸೇರಿಸಿ ಕೇಳಬಹುದಾಗಿತ್ತು. ಆ ರೀತಿ ಈ ಐಟಂನ್ನು ಹಿಂದಿನ ಬಡ್ಜೆಟ್ ಅಧಿವೇಶನದಲ್ಲೇಕೆ ತರಲಿಲ್ಲವೆಂದು ಸರ್ಕಾರವನ್ನು ಕೇಳಬೇಕಾಗಿದೆ. ಇದರ ಬಗ್ಗೆ ಹೇಳುವುದಾದರೆ ಸಂಸ್ಕೃತದಲ್ಲಿ "ಯಥೇಚ್ಛಂ ವಿಹರ್" ಎಂಬ ಒಂದು ಶ್ಲೋಕವಿದೆ; ಈ ಶ್ಲೋಕದಲ್ಲಿ ಏನು ಒಂದು ಅರ್ಥ ಅಡಗಿದೆಯೋ ಅದೇ ರೀತಿ ನಾವು ಈ ಟೋಕನ್ ಗ್ರಾಂಟುಗಳಿಗೆಲ್ಲವನ್ನು ಅನುಮತಿಯನ್ನು ಕೊಡುತ್ತಾ ಹೋದ ಹಾಗೆಲ್ಲ ಸರ್ಕಾರದವರು ಹಣವನ್ನು ವೆಚ್ಚ ಮಾಡುತ್ತಿರುವುದೂ ಅಧಿಕವಾಗುತ್ತದೆ. ಹೀಗೆ ಟೋಕನ್ ಗ್ರಾಂಟನ್ನು ಕೇಳತಕ್ಕಂಥಾದ್ದು – ಒಂದು ಪ್ರಕರಣವಿದೆ. ಈ ಡಿಮ್ಯಾಂಡಿನ ಬಗ್ಗೆ ಹೇಳಿರತಕ್ಕ ಒಂದು ಎಕ್ಸ್‌ಪ್ಲನೇಟರಿ ನೋಟ್‌ನಲ್ಲಿ the post of the chief Editor and other staff required for revision and publication were sanctioned in October 1957 ಎಂಬುದಾಗಿ ತಿಳಿಸಿದೆ ಎಂದ ಮೇಲೆ The acutal salaries the officers and the other staff belonging to the Mysore Gazetteer office could have been easily found out and that could have been shown here.

Sri M.P.L. Sastry : My suggestion to Government was that they could have given us the actual figures under this head instead of merely putting it as Rs. 100 as token grant.

ಇನ್ನು ಜನರಲ್ ಅಡ್ಮಿನಿಷ್ಟ್ರೇಷನ್ ಬಗ್ಗೆ ಕೇಳಿರತಕ್ಕ ಟೋಕನ್ ಗ್ರಾಂಟಿನ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಈ ಬಾಬಿನಲ್ಲಿ ವೆಚ್ಚ ದಿನ ದಿನಕ್ಕೂ ಹೆಚ್ಚಾಗುತ್ತಿದೆ. ಈ ಹಿಂದೆ ನಾನು ಬಡ್ಜೆಟ್ ಮೇಲೆ ಮಾತನಾಡುವಾಗ ಒಂದೆರಡು ಸಾರಿ ಹೇಳಿದ್ದೇನೆ – ಏನೆಂದರೆ ನಮ್ಮ ಸರ್ಕಾರಕ್ಕೆ ಬರತಕ್ಕ ಆದಾಯದಲ್ಲಿ ಅಧಿಕ ಭಾಗ ಈ ಸರ್ಕಾರದ ಉದರಾಭರಣ ನಡೆಸುವುದಕ್ಕಾಗಿಯೇ ವೆಚ್ಚ ಮಾಡುತ್ತಿದ್ದೇವೆಂಬುದು ನಮಗೆ ಅಂಕೀ ಅಂಶಗಳಿಂದ ಗೊತ್ತಾಗಿದೆ. ಇತ್ತೀಚೆಗೆ ಇಂಟಿಗ್ರೇಷನ್ ಆದ ಮೇಲೆ ನಮ್ಮ ಮೈಸೂರು ದೇಶಕ್ಕೆ ನಾಲ್ಕೈದು ಭಾಗಗಳಿಂದ ಸರ್ಕಾರಿ ಜನರು ಬಂದು ಒಂದು ಕಡೆ ಸೇರಿದ ಮೇಲೆ ಏನಾಗಿದೆ ಎಂದರೆ ಹಿಂದೆ ಸರ್ಕಾರಿ ಆಡಳಿತ ಎಷ್ಟು ಚೊಕ್ಕಟ್ಟಾಗಿ ನಡೆಯುತ್ತಿತ್ತೋ ಈ ದಿವಸ ಅಷ್ಟು ಚೊಕ್ಕಟ್ಟಾಗಿ ನಡೆಯುತ್ತಿಲ್ಲ – ಆಡಳಿತ ಬಹಳ ಸಡಿಲವಾಗಿದೆಯೆಂಬುದಾಗಿ ಕಾಣುತ್ತಿದೆ. ಸರ್ಕಾರಕ್ಕೆ ಜನರ ಬೇಡಿಕೆಗಳ ಬಗ್ಗೆ ಫೈಲುಗಳು ಸಮರ್ಪಕವಾದ ರೀತಿಯಲ್ಲಿ ಮತ್ತು ಕಾಲಕ್ಕೆ ಸರಿಯಾಗಿ ವಿಲೇವಾರಿಯಾಗುತ್ತಿಲ್ಲವೆಂಬುದಾಗಿ ಎಲ್ಲೆಲ್ಲೂ ಬಹುಜನರ ಬಾಯಿಂದ ಕೇಳಿಬರುತ್ತಿದೆ. ನಾನು ಈ ಹಿಂದೆ ನಮ್ಮ ಸೆಕ್ರೆಟೇರಿಯಟ್‌ನಲ್ಲಿ ಯಾವ ರೀತಿ ಕೆಲಸ ಕಾರ್ಯಗಳು ನಡೆಯುತ್ತಿದ್ದವು, ಈ ದಿವಸ ಯಾವ ರೀತಿ ನಡೆಯುತ್ತಿವೆಯೆಂಬುದನ್ನು ನೋಡಿದ್ದೇನೆ. ಆದರೆ ಇಂದು ಕೆಲಸ ಕಾರ್ಯಗಳು ಸಮರ್ಪಕವಾಗಿ ನಡೆಯುತ್ತಿಲ್ಲವೆಂದು ಹೇಳಬೇಕಾಗಿದೆ. ಈ ಹಿಂದೆ ಪ್ರಾಪ್ತವಾಗಿದ್ದಂಥ ಆ ಒಂದು ದುರ್ಭಿಕ್ಷ ಕಾಲದಲ್ಲಿ ಕಂಟ್ರೋಲುಗಳು ಜಾರಿಯಲ್ಲಿದ್ದಾಗ ಸರ್ಕಾರ ಅಷ್ಟೊಂದು ಸಿಬ್ಬಂದಿಯನ್ನು ಇಟ್ಟುಕೊಳ್ಳುವ ಅಗತ್ಯವಿತ್ತೇ ಎಂಬ ಸಂಶಯ ಆಗಲೇ ಬಹಳವಾಗಿತ್ತು. ಆದರೆ ಈ ದಿವಸ ಈ ಸಿಬ್ಬಂದಿವರ್ಗ ಅದಕ್ಕಿಂತಲೂ ಕಡಿಮೆಯೇನೂ ಆಗಿಲ್ಲ. ಸರ್ಕಾರಿ ಕಚೇರಿಗಳಲ್ಲಿ ಕುಳಿತು ಕೆಲಸ ಮಾಡತಕ್ಕ ನೌಕರರು ಹಿಂದಿನ ಕಾಲದ ಆಡಳಿತದಲ್ಲಿದ್ದಂತೆ ಆರುಗಂಟೆಗಳ ಕಾಲ ನಿರ್ವಂಚನೆಯಿಂದ ಹೇಗೆ ಅವರು ಸೇವೆ ಸಲ್ಲಿಸಿಕೊಂಡು ಬರುತ್ತಿದ್ದರೋ ಆ ರೀತಿ ಈಗಲೂ ಸೇವೆ ಸಲ್ಲಿಸುತ್ತಿದ್ದರೆ ಯಾವ ಒಂದು ಆಕ್ಷೇಪಣೆಗೂ ಅವಕಾಶವಿರುತ್ತಿರಲಿಲ್ಲ. ಆ ರೀತಿ ನಿರ್ವಂಚನೆಯಿಂದ ಕೆಲಸಗಳು ನಡೆಸಲ್ಪಡುವುದಾಗಿದ್ದರೆ ಈಗಿರುವ ಸಿಬ್ಬಂದಿಯಲ್ಲಿ ಅರ್ಧಕ್ಕೆ ಈ ಕಾರ್ಯಗಳನ್ನೆಲ್ಲ ನಡೆಸಿಕೊಂಡು ಹೋಗಲು ಸಾಧ್ಯವಿತ್ತಲ್ಲವೇ ಎಂದು ಅನ್ನಿಸುತ್ತಿದೆ. ಸರ್ಕಾರ ಜನರನ್ನು ಕೆಲಸಕ್ಕೆ ಇಟ್ಟುಕೊಳ್ಳುವಾಗ ಅಂಥ ನಿಷ್ಠಾವಂಥರನ್ನೇ ನೋಡಿ ಇಟ್ಟುಕೊಳ್ಳಬೇಕು. ಪ್ರಜಾ ಸರ್ಕಾರದ ಕೈಗೆ ಆಡಳಿತ ಬಂದಿರುವಾಗ ದೇಶದ ಆಡಳಿತ ಸೂತ್ರವನ್ನು ಕೈಲಿ ಹಿಡಿದಿರುವಾಗ ಪ್ರಜೆಗಳಿಗೂ ಆಡಳಿತವರ್ಗಕ್ಕೂ ಒಂದು ನಿಕಟ ಸಂಪರ್ಕವಿರಬೇಕಾದದ್ದು ಅತ್ಯಗತ್ಯ. ಯುನೈಟೆಡ್ ಕಿಂಗ್‌ಡಂನಲ್ಲಿ ಸೆಕ್ರೆಟೇರಿಯೆಟ್ ಲೆವಲ್‌ನಲ್ಲಿ ಕೆಲಸ ಮಾಡತಕ್ಕ ಸೆಕ್ರೆಟರಿಗಳಾಗಲಿ ಅಥವಾ ಸೆಕ್ರೆಟೇರಿಯಟ್‌ನ ಸಿಬ್ಬಂದಿವರ್ಗವಾಗಲಿ ಬಹಳ ವಿಶ್ವಾಸದಿಂದ ಸಹೃದಯರಾಗಿ ಅಲ್ಲಿಯ ಜನರೊಂದಿಗೆ ಹೊಂದಾಣಿಕೆಯಿಂದ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆಂದು ಕೇಳಿದ್ದೇನೆ. ಮೇಲಾಗಿ ಸೆಕ್ರೆಟೇರಿಯಟ್‌ನಲ್ಲಿ ಮೂವ್ ಆಗತಕ್ಕ ಫೈಲುಗಳೇನೂ ನಿರ್ಜೀವ ವಸ್ತುಗಳಲ್ಲ. ಅವು ಒಂದು ಆಸ್ತಿ. ಸರ್ಕಾರಕ್ಕೆ ಉತ್ಪತ್ತಿ ತರುವ ಪ್ರಸಂಗಗಳಿರುತ್ತವೆ. ಆ ಫೈಲುಗಳ ಹಿಂದೆ ಸಂಬಂಧಪಟ್ಟ ನೂರಾರು ಜನಗಳಿರುತ್ತಾರೆ. ಈ ಫೈಲುಗಳು ಸರ್ಕಾರಿ ಆಡಳಿತದ ಉನ್ನತಿ ಅವನತಿಗಳನ್ನು ಸೂಚಿಸತಕ್ಕ ಪ್ರಸಂಗಗಳಿವೆ. ಹಿಂದಿನ ಮೈಸೂರು ಆಡಳಿತ ಬಹಳ ಉನ್ನತ ಮಟ್ಟದಲ್ಲಿತ್ತು. ಆದರೆ ಈ ದಿವಸ

ಅದಕ್ಕೆ ಸಂಚಕಾರ ಬರುವ ಚಿನ್ಹೆಗಳು ಕಾಣುತ್ತಿವೆ ಆದುದರಿಂದ ಸರ್ಕಾರದವರು ಈ ಅಂಶವನ್ನು ತೀವ್ರವಾಗಿ ಪರಿಶೀಲನೆ ಮಾಡತಕ್ಕದ್ದು ಅಗತ್ಯ.

ಈ ಪಿ.ಡಬ್ಲ್ಯು.ಡಿ. ಯಾವಾಗ್ಲೂ ಹೆಚ್ಚು ಹಣವನ್ನು ವೆಚ್ಚಮಾಡತಕ್ಕಂಥ ಇಲಾಖೆ, ಈ ಇಲಾಖೆ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಹಳೆ ಮೈಸೂರಿನ ಪಿ.ಡಬ್ಲ್ಯೂ.ಡಿ. ಹಿಂದೆ ನಾಲ್ಕೈದು ವರ್ಷಗಳಲ್ಲಿ ಎಷ್ಟು ಹಣವನ್ನು ಖರ್ಚು ಮಾಡುವುದಕ್ಕೆ ಸಾಧ್ಯವಿತ್ತೋ ಅದಕ್ಕಿಂತ ಹೆಚ್ಚು ಹಣವನ್ನು ಈಗ ಕೇಳಿದ್ದಾರೆ. ಈ ರೀತಿ ವೆಚ್ಚ ಮಾಡಬಾರದು ಎಂಬುದಾಗಿ ಅಕೌಂಟೆಂಟ್ ಜನರಲ್ ಅವರು ಅವರ ಆಡಿಟ್ ವರದಿಯಲ್ಲಿ ಸೂಚಿಸಿದ್ದಾರೆ. ಈ ಇಲಾಖೆಯವರು ಖರ್ಚುಮಾಡಿತರತಕ್ಕ ಪ್ರತಿ ತಿಂಗಳ ಹಣದ ಬಗ್ಗೆ ಟ್ರೆಜರಿಯವರು ಕೊಡತಕ್ಕ ಅಂಕಿ ಅಂಶಗಳು ಅಕೌಂಟಂಟ್ ಜನರಲ್ ಆಫೀಸಿನಲ್ಲಿರತಕ್ಕ ಅಂಕಿ ಅಂಶಗಳಿಗೆ ಸರಿಯಾಗಿ ತಾಳೆ ಬೀಳುತ್ತಿಲ್ಲ. ಆದ್ದರಿಂದ ಈ ಪ್ರತಿಯೊಂದು ಖರ್ಚುವೆಚ್ಚಗಳ ಬಗ್ಗೆ ಆಯಾ ತಿಂಗಳ ಅಂಕಿ ಅಂಶಗಳನ್ನು ಆಯಾಯ ತಿಂಗಳಲ್ಲೇ ತಯಾರಿಸಿ ಕಳುಹಿಸಬೇಕೆಂದು ಅವರು ಪದೇ ಪದೇ ಒತ್ತಾಯ ಪಡಿಸುತ್ತಿದ್ದಾರೆ. ಆದಾಗ್ಯೂ ಪಿ.ಡಬ್ಲ್ಯು.ಡಿ. ಅಧಿಕಾರ ವರ್ಗದವರು ಇದಕ್ಕೇನೂ ಗಮನವನ್ನಾಗಲಿ ಮನ್ನಣೆಯನ್ನಾಗಲಿ ಕೊಟ್ಟ ಹಾಗೆ ಕಾಣುತ್ತಿಲ್ಲ.

ಇನ್ನು ಕ್ಯಾಪಿಟಲ್ ಔಟ್ ಲೇ ನಾಟ್ ಮೆಟ್ ಫ್ರಮ್ ರೆವಿನ್ಯೂ ಬಾಬಿನಲ್ಲಿ ಎರಡು ಕೋಟಿ, ಒಂದು ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುವ ಇಲಾಖೆ ಇದೆ. ಈ ಇಲಾಖೆಯಲ್ಲಿ ಅನ್ಯಾಯವಾಗುತ್ತಿದೆ ಎನ್ನುವುದನ್ನು ತಮ್ಮ ಮೂಲಕ ಸರ್ಕಾರದ ಮುಂದೆ ಇಡುತ್ತೇವೆ. ಅದೆಲ್ಲಾ ನಮ್ಮಲ್ಲಿ ಗೋಣಿ ಚೀಲದಲ್ಲಿರುತ್ತದೆ. ಎಲ್ ಅಂದರೆ ಇದ್ದಕ್ಕಿದ್ದು ಹಾಗೆ ಮಾಯವಾಗುತ್ತದೆ. ಇದರಲ್ಲಿ ಅಡ್ವಾನ್ಸ್ ಕೊಟ್ಟಿರುವುದು, ಸಾಲ ಕೊಟ್ಟಿರುವುದು, ಟ್ರೇಡಿಂಗ್ ಅಕೌಂಟಿಗೆ ಕೊಟ್ಟಿರುವುದು ಇವುಗಳಿಂದ ಎಷ್ಟು ಉತ್ಪತ್ತಿ ಬರುತ್ತಿದೆ ಎಂಬುದು ನಿಖರವಾಗಿ ಗೊತ್ತಿಲ್ಲ. ತಮಗೆ ಗೊತ್ತಿರುವ ಹಾಗೆ ಇದೇ ಐಟಂನಲ್ಲಿ ಅಡ್ವಾನ್ಸ್ ತೆಗೆದುಕೊಂಡು ಬತ್ತ ತೆಗೆದುಕೊಂಡು ಬಂದು ಅಲ್ಲಿ ಸಪ್ಲೈ ಮಾಡುತ್ತೇವೆಂದು ಹೇಳಿದರು. ಆಗ ನಾನು ತಾವೂ ಇಬ್ಬರೂ ಇಷ್ಟು ಹಣವನ್ನು ಈ ಬಾಬಿಗೆ ವಿನಿಯೋಗ ಮಾಡುತ್ತಿದ್ದೀರಿ. ಅದರಲ್ಲಿ ಶೇಕಡ 50ರಷ್ಟು ಆದರೂ ಸರ್ಕಾರದ ಬೊಕ್ಕಸಕ್ಕೆ ಬರಬಾರದು ಎಂದು ಹೇಳಿದಾಗ, ಆ ದಿನ ಸರ್ಕಾರದವರು ಭರವಸೆಕೊಟ್ಟರು. ಆ ರೀತಿ ಭರವಸೆ ಕೊಟ್ಟ ಸರ್ಕಾರ ಇವೊತ್ತು ಇಲ್ಲ. ಆ ಜನರೂ ಇಲ್ಲ. ಒಂದು ವರ್ಷದಲ್ಲಿ ಹೇಳಿದ್ದು ತಮಗೆ ಜ್ಞಾಪಕವಿದೆಯೆಂದು ನನಗೆ ಕಾಣುತ್ತದೆ. ಒಂದೂವರೆ ಕೋಟಿ ರೂಪಾಯಿಗಳು ಅಸೆಟ್ಸ್‌ನಲ್ಲಿದೆ. ಎಂದರೆ ಗೋಡೌನಿನಲ್ಲಿದೆ ಎಂದು ಹೇಳಿದರು. ಅದು ಗೋಣೀಚೀಲದ ರೂಪದಲ್ಲಿದೆ ಎಂದು ಹೇಳಿ ಎರಡು ವರ್ಷಗಳ ಆಸೆಟ್ಸ್ ಅಂಡ್ ಲೈಯಬಲಿಟೀಸ್‌ನಲ್ಲಿ ತೋರಿಸಿದರು. ಆಮೇಲೆ ಅದು ಗೋಡೌನಿನಲ್ಲಿಯೇ ಮಾಯವಾಯಿತು.

ಇಲಿ ತಿಂದುಬಿಟ್ಟಿತು ಎಂದರೆ ಅದು ಯಾವ ತರಹ ಇಲಿ ಇರಬಹುದು? ಈಗ No profit, No loss ಎಂದು ಹೇಳುವ ಪದ್ಧತಿಯಾಗಿದೆ. ಅದು ಯಾವ ರೀತಿ ಪೋಲಾಗುತ್ತದೆ ಎನ್ನುವುದು ಇನ್ನೂ ಜನಗಳಿಗೆ ಗೊತ್ತಿಲ್ಲ.

ಮಾನ್ಯ ಸಭಾಪತಿಗಳೇ ಈ ವರ್ಷದ ಮಧ್ಯಭಾಗದಲ್ಲಿ ಕೈಗೊಂಡಿರತಕ್ಕ ಕಾಮಗಾರಿಗಳನ್ನು ಸಂಪೂರ್ಣವಾಗಿ ನಡೆಸಬೇಕಾದ ಪಕ್ಷದಲ್ಲಿ ಅಥವಾ ಹೊಸ ಯೋಜನೆಗಳನ್ನು ದೇಶದ ಹಿತದೃಷ್ಟಿಯಿಂದ ಸರ್ಕಾರ ತೆಗೆದುಕೊಳ್ಳಬೇಕಾದ ಪಕ್ಷದಲ್ಲಿ ಸರ್ಕಾರದವರು ಹೆಚ್ಚುವರಿ ಬೇಡಿಕೆಗಳನ್ನು ಕೇಳಬೇಕಾದರೂ ವಿಹಿತ ಮತ್ತು ಅದಕ್ಕೆ ಈ ಸಭೆ ಕೂಡ ಅನುಮತಿ ಕೊಡಬೇಕಾದುದೂ ವಿಹಿತ.

ಇನ್ನು ಪಬ್ಲಿಕ್‌ವರ್ಕ್ಸ್ ಇಲಾಖೆಯವರ ಮೇಲೆ ಆಡಳಿತ ಸಂಬಂಧದಲ್ಲಿ ಕೆಲವು ತಪ್ಪುಗಳನ್ನು ಹೊರಿಸಿದ್ದಾರೆ. ಆ ರೀತಿಯಾಗಿ ಹೊರಿಸಿರುವ ತಪ್ಪುಗಳನ್ನು ಮೊದಲು ತೊಡೆದುಹಾಕಬೇಕು. ಕೆರೆಗಳನ್ನು ದುರಸ್ತು ಮಾಡುವುದು, ಆಹಾರೋತ್ಪತ್ತಿ ಹೆಚ್ಚು ಮಾಡುವುದು, ನಾವು ಕೈಗೊಂಡಿರುವ ತುಂಗ ಮತ್ತು ಭದ್ರಾ ಪ್ರಾಜೆಕ್ಟುಗಳನ್ನು ಪೂರ್ಣಗೊಳಿಸುವುದು – ಇವುಗಳಿಗೆ ಹೆಚ್ಚು ಹಣ ಒದಗಿಸಬೇಕಾದುದು ಅಗತ್ಯ. ಅದಕ್ಕೆ ತಗಲುವ ಖರ್ಚನ್ನು ಈ ಸಭೆ ಒಪ್ಪಬೇಕಾದುದು ಯೋಗ್ಯ. ಆದರೆ ಈ ಸಂದರ್ಭದಲ್ಲಿ ಇಲಾಖೆಗಳಲ್ಲಿರತಕ್ಕ ಲೋಪದೋಷಗಳನ್ನು ನಿವಾರಣೆ ಮಾಡಬೇಕಾದುದು ಸರ್ಕಾರದ ಮೊಟ್ಟಮೊದಲನೆಯ ಕೆಲಸ. ಕೆಲವರು ಈ ಇಲಾಖೆಯಲ್ಲಿ ಲೋಪದೋಷಗಳಿವೆಯೆಂದು ಸೂಚಿಸಿದ್ದಕ್ಕೋಸ್ಕರ ಈ ಮಾತನ್ನು ಹೇಳುತ್ತಿದ್ದೇನೆ. ಆಡಳಿತವನ್ನು ಸುಭದ್ರಗೊಳಿಸುವ ಪ್ರಕರಣ ಸಾಲದ ಹೊರೆಯನ್ನು ಕಡಿಮೆ ಮಾಡುವ ಪ್ರಕರಣ, ಈಗ ಸಂಬಳ ಸಾರಿಗೆಗಳನ್ನು ಸಾಮಾನ್ಯ ರೀತಿಯಲ್ಲಿ ಪರಿಷ್ಕಾರ ಮಾಡುವ ಪ್ರಕರಣ, ನಮ್ಮ ದೇಶದಲ್ಲಿ ಯಾವ ಯಾವ ಇಲಾಖೆಯಲ್ಲಿ ಎಷ್ಟೆಷ್ಟು ಜನರು ಇರಬೇಕು ಎಂಬ ಪ್ರಕರಣ ಮತ್ತು ಸರ್ಕಾರ ವೆಚ್ಚವನ್ನು ಉಳಿಸತಕ್ಕ ಪ್ರಕರಣ– ಇವೆಲ್ಲವೂ ಇವೊತ್ತು ತಮ್ಮ ಮುಂದೆ ಇರಬೇಕಾದುದು ಅಗತ್ಯ. ಈ ರೀತಿ ಹೆಚ್ಚುವರಿ ಬೇಡಿಕೆಗಳನ್ನು ಸರ್ಕಾರ ಕೇಳಬಾರದಾಗಿತ್ತು. ಮೊಟ್ಟಮೊದಲೇ ಸರ್ಕಾರ ಇದನ್ನೆಲ್ಲಾ ಊಹಿಸಬೇಕಾಗಿತ್ತು. ಆದರೂ ಇದಕ್ಕೆ ಒಪ್ಪಿಗೆ ಕೊಡುವುದು ಅನಿವಾರ್ಯವೆಂದು ಸೂಚಿಸುತ್ತಿದ್ದೇವೆ.

– * –

# III. ಭಾಷಾ ಸಮಸ್ಯೆಗಳ ಸಂಬಂಧವಾಗಿ ಮಾತಾನಾಡುತ್ತ

## 1. 1953ರ ಆಂಧ್ರ ರಾಜ್ಯ ಮಸೂದೆ ಸಂಬಂಧಿಸಿದಂತೆ ನಡೆದ ಚರ್ಚೆಯಲ್ಲಿ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ : (ಉಪಾಧ್ಯಾಯರ ಕ್ಷೇತ್ರ) :-**

ಸ್ವಾಮಿ ಆಂಧ್ರರಾಜ್ಯ ನಿರ್ಮಾಣಕ್ಕೆ ಸಂಬಂಧಪಟ್ಟ ಮಸೂದೆ ಈ ಸಭೆಯ ಮುಂದೆ ಚರ್ಚಿತವಾಗುತ್ತಿದೆ. ಇದು ಭಾರತದ ರಾಜ್ಯಾಂಗ ವಿಧಾನವಾದ ಮೇಲೆ ಪಾರ್ಲಿಮೆಂಟಿನ ಮುಂದೆ ಬರತಕ್ಕ ಮಸೂದೆಗಳಲ್ಲೆಲ್ಲ ಬಹಳ ಮುಖ್ಯವಾದುದೂ ಕ್ಲಿಷ್ಟವಾದುದೂ ಆಗಿದೆಯೆಂದು ನನ್ನ ಅಭಿಪ್ರಾಯ. ಈ ದಿನ ನಮ್ಮ ಮುಂದಿರತಕ್ಕ ಈ ಮಸೂದೆಯಲ್ಲಿ, ಈ ಷೆಡ್ಯೂಲ್‌ಗಳಲ್ಲಿ ಕಂಡುಬರುವ ಅಂಶಗಳನ್ನು ಸೂಕ್ಷ್ಮವಾಗಿ ತತ್ವದೃಷ್ಟಿಯಿಂದ ಪರಿಶೀಲಿಸಿದರೆ, ಈ ಮಸೂದೆ ಮದ್ರಾಸು ಮತ್ತು ಆಂಧ್ರ ಪ್ರಾಂತಗಳಿಗೆ ಮಾತ್ರ ಅನ್ವಯವಾಗುವ ಹಾಗೆ ಕಾಣುವುದರಿಂದ ಕೇವಲ ಮದ್ರಾಸು ಶಾಸನಸಭೆಯಲ್ಲಿ ಮಾತ್ರ ಇದು ಚರ್ಚೆಯಾಗಿದ್ದರೆ ಸಾಕು ಎಂದು ತೋರುತ್ತದೆ. ಈ ಸಮಸ್ಯೆಯನ್ನು ಇದರ ಹಿನ್ನೆಲೆಯಲ್ಲಿ ನಾನು ನೋಡಿದೆ. ನಿನ್ನೆಯ ದಿನ ಈ ಮಸೂದೆಯ ಮೇಲೆ ಮಾತನಾಡಿದ ನನ್ನ ಮಿತ್ರರು ಈ ಮಸೂದೆಯ ಹಿನ್ನೆಲೆ ಕರ್ನಾಟಕದ ಸ್ಥಾಪನೆಗೆ ಸಾಧನಭೂತವಾಗಿದೆಯೆಂದು ಹೇಳಿದರು. ವಿಶಾಲ ಆಂಧ್ರಕ್ಕೆ ಸಾಧನಭೂತವಾಗಿದೆ ಎಂದು ಹೇಳಿದರು. ಭಾಷಾವಾರು ಪ್ರಾಂತ ನಿರ್ಮಾಣದ ತತ್ವ ಇಲ್ಲಿ ಬೀಜರೂಪವಾಗಿ ನಿಂತಿದೆ ಎಂದರು ಕೆಲವರು. ಈ ಹಿನ್ನೆಲೆಯನ್ನು ನಾನು ಸ್ವಲ್ಪ ವಿಮರ್ಶಿಸಿ ನನ್ನ ಅಭಿಪ್ರಾಯವನ್ನು ಒಂದೆರಡು ಮಾತಿನಲ್ಲಿ ಸೂಚಿಸುತ್ತೇನೆ.

ಮಾನ್ಯ ಸಭಾಪತಿಗಳೇ ಕನ್ನಡ ಭಾಷೆಯಲ್ಲಿ, ಸಾಹಿತ್ಯದ ವಿಷಯದಲ್ಲಿ ನನಗೆ ವಿಶೇಷ ಗೌರವವಿದೆ. ಕನ್ನಡ ಜನರ ಬಾಂಧವ್ಯವನ್ನು ನಾನು ಗೌರವದಿಂದ ಕಂಡಿದ್ದೇನೆ. ಕರ್ನಾಟಕದ ಆಗುಹೋಗುಗಳ ವಿಷಯದಲ್ಲಿ ತೀವ್ರವಾದ ಆಸಕ್ತಿ ನನಗುಂಟು. ಈ ಗೌರವ, ಆಸಕ್ತಿ, ಉತ್ಸಾಹಗಳಿಗಿಂತ ಭಾರತದ ಭದ್ರತೆಯ ವಿಷಯದಲ್ಲಿ, ಭಾರತದ ಪ್ರಜಾಪ್ರಭುತ್ವದ ಬೆಳವಣಿಗೆಯ ವಿಷಯದಲ್ಲಿ ನನ್ನ ಆಸಕ್ತಿ ಹೆಚ್ಚಿನದಿದೆ ಎಂದು ಹೇಳಿದರೆ ಸಹ ಯಾರೂ ಕೋಪಮಾಡಿಕೊಳ್ಳಬಾರದು.

ಈ ಮಸೂದೆಯು ಹಿಂದೆ ಭಾಷಾವಾರು ಪ್ರಾಂತ ನಿರ್ಮಾಣದ ತತ್ವ ಅಡಗಿದ್ದ ಪಕ್ಷದಲ್ಲಿ ಈ ಮಸೂದೆ ಅಂಗೀಕಾರಾರ್ಹವಾದುದಲ್ಲವೆಂಬುದು ನನ್ನ ಅಭಿಪ್ರಾಯ. ಭಾರತದಲ್ಲಿ ಭಾಷಾವಾರು ಪ್ರಾಂತ ರಚನೆಯ ಚಳವಳಿ ಸುಮಾರು 1928ನೆಯ ಇಸವಿಯಿಂದ ನೆಹರೂರವರ ವರದಿಗೆ ಕಾಂಗ್ರೆಸ್ ಒಪ್ಪಿಗೆ ದೊರೆತ ದಿನದಿಂದಲೂ ಬೆಳೆಯುತ್ತಾ ಬಂದಿದೆ. ಆದರೆ ಭಾರತದಲ್ಲಿ ವಿಶಾಲವಾದ ಮದ್ರಾಸ್ ಪ್ರಾಂತ ಎರಡು ಭಾಗವಾಗಬೇಕೆಂಬ ಚಳವಳಿ ಈ ಭಾಷಾವಾರು ಪ್ರಾಂತ ದೃಷ್ಟಿಯಿಂದಲ್ಲ. ಮದ್ರಾಸ್ ಆಡಳಿತ ದೃಷ್ಟಿಯಿಂದ ಅಲ್ಲಿಯ ಜನರ ಹಿತದೃಷ್ಟಿಯಿಂದ ಇದು ಇಬ್ಭಾಗವಾಗಬೇಕೆಂಬ ಚಳವಳಿಯು ಮೊದಲಿನಿಂದಲೂ ಇದೆ. ಈಗ್ಗೆ 25 ವರ್ಷಗಳಿಂದಲೂ ನಡೆಯುತ್ತಾ ಬಂದಿದೆ. ಆದರೆ 25 ವರ್ಷಗಳ ಹಿಂದೆ ಇದ್ದ ಪರಿಸ್ಥಿತಿ ಈಗ ಇಲ್ಲ ಎಂಬುದನ್ನು ನಾವು ಮುಖ್ಯವಾಗಿ ಮನಗಾಣಬೇಕು. ಹಿಂದೆ ಇದ್ದ ಪರಿಸ್ಥಿತಿಗೂ ಈಗಿನ ಪರಿಸ್ಥಿತಿಗೂ ಅನೇಕ ವ್ಯತ್ಯಾಸಗಳು ಎದ್ದು

1. 1953ರ ಆಂಧ್ರ ರಾಜ್ಯ ಮಸೂದೆ ಸಂಬಂಧಿಸಿದಂತೆ 18.7.1953 ರಂದು ನಡೆದ ಚರ್ಚೆಯಲ್ಲಿ

ಕಾಣುತ್ತಿದೆ. ಎಂಬುದನ್ನು ಈ ಸಭೆ ತಿಳಿಯಬೇಕು. ಅಂದು ಪ್ರಾಂತ್ಯ-ಪ್ರಾಂತಗಳಿಗೆ ತಾರತಮ್ಯವಿತ್ತು. ಇಂದು ಭರತಖಂಡ ಒಂದು ಏಕೈಕ ಖಂಡ. ಆ ದಿನನಾಯಕರು ಜನತೆಯ ಮುಂದೆ ಪ್ರಾಂತ ಮತ್ತು ಭಾಷೆಗಳ ಸಂಸ್ಕೃತಿಯನ್ನು ಮುಂದೆ ಇಟ್ಟುಕೊಂಡು ಸಂಸ್ಕೃತಿಯ ರಕ್ಷಣೆ, ಭಾಷಾರಕ್ಷಣೆ, ಭಾಷಾವಾರು ಪ್ರಾಂತ ನಿರ್ಮಾಣದ ಸಾಧನೆಯಿಂದ ದೊರೆತೀತು ಎಂದು ಭಾವಿಸಿದ್ದರು. ಆದರೆ ಇಂದು ಭಾರತವು ಒಂದು 'ಯೂನಿಟರಿ ಸ್ಟೇಟ್' ಇದಕ್ಕೆ ಅನುಗುಣವಾದ ರಾಜ್ಯಾಂಗ ಈಗ ನಿರ್ಮಿತವಾಗಿದೆ. ಇದಕ್ಕೆ ಅನುಗುಣವಾಗಿ ಈ 'ಯೂನಿಟರಿ ಸ್ಟೇಟ್' ಬೆಳೆಯಬೇಕಾಗಿದೆ. ಈ ಪ್ರಾಂತ ಎಂಬ ಭೇದಭಾವ ಇಲ್ಲದೇ ಇರತಕ್ಕ ಈ ಕಾಲದಲ್ಲಿ, ನಾವೆಲ್ಲರೂ ಭಾರತೀಯ ಪ್ರಜೆಗಳು ಎಂದು ಹೇಳಿಕೊಳ್ಳತಕ್ಕ ಈ ಕಾಲದಲ್ಲಿ ಭಾಷಾವಾರು ಪ್ರಾಂತ ನಿರ್ಮಾಣದಿಂದ ಭಾರತದ ಶ್ರೇಯಸ್ಸು ಸಾಧಿತವಾಗುತ್ತದೆಯೇ? ಈ ತತ್ವವು ಇಂದು ಯಾವ ರೀತಿಯಲ್ಲಿಯೂ ಒಪ್ಪಿಗೆಯಾಗಲು ಅವಕಾಶವಿರದು. ಒಂದು ಸಂಸ್ಥಾನದ ನಿರ್ಮಾಣ ಕಾರ್ಯಕ್ಕೆ ಭಾಷೆ ಎಂಬುದು ಮುಖ್ಯ ಸಾಧನವೇ ಹೌದು. ಆದರೆ ಅದನ್ನೇ ಅತಿ ದೊಡ್ಡದಾಗಿ ಮಾಡಿಕೊಂಡು ಅದಕ್ಕೆ ವಿಶೇಷ ಪ್ರಾಧ್ಯಾನ್ಯ ಕೊಡಬಾರದು. ಈ ಪ್ರಾಂತ ನಿರ್ಮಾಣದ ವಿಚಾರದಲ್ಲಿ ಇದುವರೆಗೆ ಬೇಕಾದ ಸಾಕ್ಷ್ಯ ಸಾಹಿತ್ಯಗಳು ದೊರೆತಿವೆ. 1948ರಲ್ಲಿ ಧಾರ್ ಸಮಿತಿಯ ವರದಿ, 1952ರಲ್ಲಿ ಜಸ್ಟಿಸ್ ವಾಂಚೂರವರು ಆಂಧ್ರ ಪ್ರಾಂತ ನಿರ್ಮಾಣದ ವಿಚಾರದಲ್ಲಿ ವ್ಯಕ್ತಪಡಿಸಿರುವ ಅಂಶಗಳು ಮತ್ತು ಇತ್ತೀಚೆಗೆ ಜಸ್ಟಿಸ್ ಲಕ್ಷ್ಮೀಕಾಂತಮಿತ್ರಾರವರು ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳು ಮೈಸೂರಿಗೆ ಸೇರತಕ್ಕದ್ದು ಎಂಬ ಬಗ್ಗೆ ನಿಷ್ಪಕ್ಷವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದು. ಇಂದಿನ ಭಾರತದ ಪರಿಸ್ಥಿತಿಯಲ್ಲಿ ಭಾರತ ಒಂದು ಪ್ರಖ್ಯಾತ ದೇಶವಾಗಬೇಕಾದರೆ, ಭಾರತದ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳಬೇಕಾದರೆ ಈ ಕಾರ್ಯಸಾಧನೆ ಭಾಷಾವಾರು ಪ್ರಾಂತ್ಯರಚನೆಯಿಂದ ಮಾತ್ರವೇ ಆಗಲಾರದು. ಇಂದಿನ ಪರಿಸ್ಥಿತಿಯಲ್ಲಿ ಭಾಷಾವಾರು ಪ್ರಾಂತದ ತತ್ವ ಎಷ್ಟು ಮಾತ್ರವೂ ಸಾಧುವಾದುದಲ್ಲ, ಈ ಪ್ರಾಂತ ರಚನೆ ಎಂಬುದು ಏನಿದ್ದರೂ ಆಡಳಿತ ದೃಷ್ಟಿಯಿಂದ ಮಾತ್ರವೇ ಆಗಿದೆ, ಇದರಿಂದ ಆ ಪ್ರಾಂತಕ್ಕೆ ಹೆಚ್ಚಿನ ಉಪಯೋಗ ದೊರತೀತು ಎಂದೂ, ಆಂಧ್ರ ಪ್ರಾಂತವೂ ಈ ರೀತಿ ನಿರ್ಮಾಣವಾಗಿದೆ ಎಂದೂ ಅಭಿಪ್ರಾಯ ಪಡುವವರಲ್ಲಿ ನಾನೂ ಒಬ್ಬ. ಈ ದೃಷ್ಟಿಯಿಂದಲೂ ಭಾಷೆಗೆ ಸಂಬಂಧಪಟ್ಟ ಜನರ ಮತ್ತು ಪ್ರಕೃತಿ ಸಂಪತ್ತನ್ನೊಳಗೊಂಡೂ ಅಲ್ಪಭಾಗಗಳ ಅದಲುಬದಲು ಆದರೆ, ಅದರಿಂದ ಅಷ್ಟೇನೂ ತೊಂದರೆ ಆಗಲಾರದು. ನಮ್ಮ ಭಾರತ ದೇಶ ಅತಿ ಪುರಾತನ ಕಾಲದ್ದು. ಹಿಂದೆ ಸುಮಾರು ನೂರಾರು ವರ್ಷಗಳ ಹಿಂದೆ ಈ ಭಾರತ ಭೂಮಿಯಲ್ಲಿ ಚಪ್ಪನ್ನ ರಾಜ್ಯಗಳಿದ್ದವು. ಅವುಗಳು ಕ್ರಮಕ್ರಮೇಣ ಒಡೆದು ಛಿದ್ರಛಿದ್ರವಾದವು.

ನನ್ನ ಮಾನ್ಯ ಮಿತ್ರರೊಬ್ಬರು ಇನ್ನೊಂದು ಅಂಶವನ್ನು ಈ ಸಭೆಯ ಮುಂದೆ ವ್ಯಕ್ತಪಡಿಸಿದರು: ಬಳ್ಳಾರಿ ಜಿಲ್ಲೆಯವರು ಏಳು ತಾಲ್ಲೂಕುಗಳು, ವಿಜಯನಗರ ಸಾಮ್ರಾಜ್ಯ ವಿದ್ದ ಹಂಪೆ, ಮೈಸೂರಿಗೆ ಸೇರುತ್ತದೆ ಎಂಬುದನ್ನು ಕೇಳುವ ದಿನ ಮೈಸೂರು ದೇಶದಲ್ಲಿ ವಿಜಯ ಪತಾಕೆಯನ್ನು ನಿಲ್ಲಿಸತಕ್ಕ ಮಂಗಳ ದಿನ ಎಂದು. ಈ ಉತ್ಸಾಹದೊಂದಿಗೆ ನಾವು ಉದ್ವೇಗವನ್ನು ತೋರುವ ಬದಲು

ವಿವೇಕಪೂರಿತರಾಗಿರುವುದು ಸಾಧುವಾದುದು. ರಾಜ್ಯದಾಹ ಎಂಬುದು ಮೈಸೂರು ಜನತೆಗೆ ಇಲ್ಲ. ಈ ರಾಜ್ಯದಾಹ ಎಂಬುದು ಭಾರತ ದೇಶದ ಪ್ರಜೆಗಳಿಗೆ ಇರಬಾರದು, ಪ್ರತಿಯೊಂದು ಪ್ರಾಂತ್ಯದ ಪ್ರಜೆಗೂ ತಾನು ಮೊಟ್ಟಮೊದಲು ಭಾರತದ ಪ್ರಜೆ ಎಂಬ ಅರಿವಾಗಬೇಕು. ನನಗೆ ವಿಜಯನಗರ ಸಾಮ್ರಾಜ್ಯದ ವಿಚಾರದಲ್ಲಿ ಎಷ್ಟರಮಟ್ಟಿನ ಅದರ ವಿಶ್ವಾಸ, ಗೌರವ ಮತ್ತು ಅಭಿಮಾನ ಉಂಟೋ ಅಷ್ಟೇ ಮಟ್ಟಿನ ಅದರ ವಿಶ್ವಾಸಗಳು ಮತ್ತು ಗೌರವ ಅಭಿಮಾನಗಳು ಮಗಧ ರಾಜ್ಯದ ವಿಷಯದಲ್ಲಿಯೂ ಉಂಟು ಮೈಸೂರು ಸಹ ವಿಜಯನಗರ ಸಾಮ್ರಾಜ್ಯದ ಸಾರ್ವಭೌಮತ್ವಕ್ಕೆ ಒಳಪಟ್ಟಿತು. ಆದರೆ ನಾವಿಂದು ಆ ವಿಜಯ ನಗರವನ್ನು ಇಟ್ಟುಕೊಂಡಿಲ್ಲ. ವಿಜಯನಗರ ಸಾಮ್ರಾಜ್ಯವೆಂಬುದು ಒಂದು ಕಾಲದಲ್ಲಿ ಕರ್ನಾಟಕ ರಾಜ್ಯಲಕ್ಷ್ಮಿಯಾಗಿತ್ತು ನಿಜ, ಆದರೆ ಅಲ್ಲಿ ತೆಲುಗು, ತಮಿಳು ಕನ್ನಡ ಸಾಹಿತ್ಯಗಳು ಒಂದೇ ಮಾತಿನಲ್ಲಿ ಹೇಳುವುದಾದರೆ ದಕ್ಷಿಣ ಭಾರತದ ಸಂಸ್ಕೃತಿ, ಸಾಹಿತ್ಯಗಳು ಬೆಳೆದು ಬಂದುವು. ಹಂಪೆಯ ವಿರೂಪಾಕ್ಷನ ಕೃಪೆಯಿಂದ ಇದು ತೆಲುಗು ಭಾಷೆ, ಇದು ತಮಿಳು ಭಾಷೆ, ಇದು ದ್ರಾವಿಡ ಭಾಷೆ ಇದು ಕನ್ನಡ ಭಾಷೆ ಎಂಬ ಯಾವ ಒಂದು ಭೇದಭಾವನೆಯೂ ಇಲ್ಲದೆ ಎಲ್ಲ ಸಾಹಿತ್ಯ ಸಂಸ್ಕೃತಿಗಳೂ ಏಕಮುಖವಾಗಿ ಬೆಳೆದುಬಂದುವು. ಆದುದರಿಂದ ಇಂದು ನಾವೊಂದು ಹೊಸ ಸಾಮ್ರಾಜ್ಯ ಸ್ಥಾಪನೆ ಮಾಡುತ್ತೇವೆಂಬ ಹೆಮ್ಮೆ ಪಡಬೇಕಾಗಿಲ್ಲವೆಂದು ಈ ಸಮಯದಲ್ಲಿ ಹೇಳುತ್ತೇನೆ. ಈಗ ಮೈಸೂರಿಗೆ ಸೇರುವ ಬಳ್ಳಾರಿಯ ಏಳು ತಾಲ್ಲೂಕುಗಳು ಯಾವುವು ಎಂಬುದನ್ನು ಪರಿಷ್ಕಾರವಾಗಿ ವಿಮರ್ಶೆ ಮಾಡುವುದು ಯೋಗ್ಯವಾದುದು. ಈ ಏಳು ತಾಲ್ಲೂಕುಗಳ ಪಶ್ಚಿಮತೀರದಲ್ಲಿರುವ circars-cedes Districts ದತ್ತ ಮಂಡಲಕ್ಕೆ ಸೇರಿದ ನಾಲ್ಕು ಜಿಲ್ಲೆಗಳಲ್ಲಿ ಬಳ್ಳಾರಿಯ ಭಾಗ ಈ ಪ್ರದೇಶದಲ್ಲಿ ಪ್ರಕೃತಿ ಸಂಪತ್ತನ್ನು ಸಾಧಿಸಿಲ್ಲ. ಇದು ಬಹಳ ಹಿಂದುಳಿದ ಭಾಗ. ಇಲ್ಲಿ ಕ್ಷಾಮ ಪ್ರತಿ ವರ್ಷವೂ ತಲೆದೋರುತ್ತಲೇ ಇರುತ್ತದೆ. ಈ ದಿನ ಬಳ್ಳಾರಿ ಜಿಲ್ಲೆಗೆ ಸಂಬಂಧಪಟ್ಟಿರತಕ್ಕ geographical conditions ನೋಡಿ ಈ ಪಂಕ್ತಿಯನ್ನು ನೋಡಿ: ಈ ಪಂಕ್ತಿಯನ್ನು ನೋಡಿ: "The country contains people of backward classes where natural resources are not harnessed and where famine is visiting them every year". ಈ ಆಂಧ್ರ ಮಸೂದೆಯನ್ನು ಸೂಚಿಸುತ್ತಾ ಮುಖ್ಯಮಂತ್ರಿಗಳು ಹೇಳಿದರು, ಇಲ್ಲಿ ತುಂಗಭದ್ರಾ ಯೋಜನೆಯನ್ನು ಕೈಗೊಂಡಿದ್ದಾರೆ. ಇದಕ್ಕೆ ಸೇರಿದ ಹಾಗೆ 107 ಮೈಲಿಗಳಷ್ಟು ನಾಲಾ ಪ್ರದೇಶ ನಮಗೆ ಲಭ್ಯವಾಗುತ್ತದೆ ಮತ್ತು ಸುಮಾರು 92 ಸಾವಿರ ಎಕರೆಗಳಷ್ಟು ನೀರಾವರಿಯಾಗುತ್ತದೆ ಎಂದು. ಇದೇ ಮಸೂದೆ ಈಗ ಮದ್ರಾಸ್ ಶಾಸನ ಸಭೆಯಲ್ಲಿಯೂ ಚರ್ಚೆಯಾಗುತ್ತಿದೆ. ಅಲ್ಲಿ ಈ ಮಸೂದೆಯ ಬಗ್ಗೆ ಬಂದಿರುವ ತಿದ್ದುಪಡಿಗಳನ್ನು ನೋಡಿದರೆ ಅವರು ಈ ವಿಷಯವನ್ನು ಎಷ್ಟೊಂದು ಉದ್ವೇಗದಿಂದ ತೀವ್ರತೆಯಿಂದ ಪರಿಶೀಲಿಸುತ್ತಿದ್ದಾರೆಂಬುದು ಗೊತ್ತಾಗುತ್ತದೆ. ಈ ತುಂಗಭದ್ರಾ ಯೋಜನೆಯನ್ನೂ ಅಲ್ಲದೆ ಮೈಸೂರು ಸಂಸ್ಥಾನದಲ್ಲಿ ತೆಲುಗು ಭಾಗ ಯಾವ ಯಾವುದಿದೆಯೋ ಅದನ್ನೆಲ್ಲಾ ಆಂಧ್ರಪ್ರಾಂತ್ಯಕ್ಕೆ ಸೇರಿಸಬೇಕೆಂಬ ವಿಚಾರವನ್ನೂ ಚರ್ಚಿಸುತ್ತಿದ್ದಾರೆ. ಈ ತುಂಗಭದ್ರಾ ಯೋಜನೆಗಾಗಿ ಮದ್ರಾಸ್ ಸರ್ಕಾರದವರು ಇಂಡಿಯಾ ಸರ್ಕಾರದಿಂದ ಕೋಟ್ಯಂತರ ರೂಪಾಯಿಗಳ ಸಾಲ ಮಾಡಿರುವುದಾಗಿ ತಿಳಿದುಬಂದಿದೆ.

ಈ ತುಂಗಭದ್ರಾ ಯೋಜನೆ ನಮಗೆ ಸೇರಬೇಕೆಂದು ನಾವು ಒತ್ತಾಯ ಮಾಡುವಾಗ ಈ ಸಾಲದ ಹೊರೆ ನಮ್ಮ ಮೇಲೆ ಬೀಳಬಾರದು ಎಂದು ತಿಳಿಸಲಿಚ್ಛಿಸುತ್ತೇನೆ. ಈ ವಿಷಯದಲ್ಲಿ ನಮ್ಮ ಮೈಸೂರು ಸಂಸ್ಥಾನದ ಆಡಳಿತದಲ್ಲಿ ಆರ್ಥಿಕ ದೃಷ್ಟಿಯಿಂದ ಯಾವ ವಿಧವಾದ ವ್ಯತ್ಯಾಸ ಉಂಟಾಗುತ್ತದೆ ಎಂಬುದನ್ನು ಮುಖ್ಯಮಂತ್ರಿಗಳು ತಿಳಿಸಿದ್ದರೆ ಚೆನ್ನಾಗಿತ್ತು. ಅಂತೂ ಈ ಭದ್ರಾ ಯೋಜನೆಗಾಗಿ ಖರ್ಚಾಗಿರುವ ಹಣದಲ್ಲಿ ಒಂದು ಕಾಸೂ ಸಹ ಮೈಸೂರು ಸಂಸ್ಥಾನದಕ್ಕೆ ಹೊರೆಯಾಗಿ ಪರಿಣಮಿಸಬಾರದು ಎಂಬ ಕಡೆ ನಮ್ಮ ಮುಖ್ಯಮಂತ್ರಿಗಳು ಹೆಚ್ಚಿನ ನಿಗಾ ಕೊಡಬೇಕು. ಮಾನ್ಯ ಮುಖ್ಯಮಂತ್ರಿಗಳು ಬಳ್ಳಾರಿಯ ಜೈಲು ಮತ್ತು ಸರ್ಕಾರಿ ಶಾಲೆಗಳಲ್ಲಿ ಆಂಧ್ರರಿಗೆ ಅವಕಾಶವನ್ನು ಕೊಡುವ ಸಲುವಾಗಿ ಅದೂ ತಾತ್ಕಾಲಿಕವಾಗಿ ಎರಡು ವರ್ಷಗಳ ಪರ್ಯಂತ – ಅದಕ್ಕೆ ತಗಲುವ 8 ಲಕ್ಷ ರೂಪಾಯಿಗಳ ಖರ್ಚು ಮೈಸೂರು ಸಂಸ್ಥಾನಕ್ಕೆ ಬೀಳುತ್ತದೆಂದು ಹೇಳಿದರು. ಆದರೆ ಈ ಅವಕಾಶವನ್ನು ಅವರಿಗೆ ಕಲ್ಪಿಸಿಕೊಡುವಾಗ ಇದಕ್ಕೆ ಪ್ರತಿಯಾಗಿ ಆಂಧ್ರ ಸರ್ಕಾರದವರು ಈ ಖರ್ಚನ್ನು ವಹಿಸಿಕೊಳ್ಳಬೇಕೆಂಬ ಬಗ್ಗೆ ಈ ಮಸೂದೆಯಲ್ಲಿ ಏನನ್ನೂ ಹೇಳಿಲ್ಲ.

ಇನ್ನು ಮೈಸೂರು ಸಂಸ್ಥಾನದ ಸ್ಥಾನಮಾನದ ವಿಚಾರದಲ್ಲಿ ಯಾವ ರೀತಿಯಲ್ಲಿ ವ್ಯತ್ಯಾಸವಾದರೂ ಆಗುತ್ತದೆಯೇ ಎಂಬುದನ್ನು ನಾನು ಗಮನಿಸಬೇಕಾಗಿದೆ. ಇದುವರೆಗೂ ಆಂಧ್ರ ಪ್ರಾಂತ್ಯಗಳನ್ನೊಳಗೊಂಡ ಮದ್ರಾಸ್ ಪ್ರಾಂತ್ಯ 'ಎ' ಸ್ಟೇಟ್ ಎಂದು ಪರಿಗಣಿಸಲ್ಪಟ್ಟಿದ್ದು, ಮದ್ರಾಸ್ ಪ್ರಾಂತ್ಯವೇ ಬೇರೆಯಾಗಿ ಇನ್ನು ಮೇಲೆ ಮದ್ರಾಸ್ ಮತ್ತು ಆಂಧ್ರ ಪ್ರಾಂತ್ಯಗಳೆರಡನ್ನೂ 'ಎ' ಸ್ಟೇಟ್ ಆಗಿ ಪರಿಗಣಿಸಲ್ಪಡುತ್ತದೆ. ಇದೇ ಸಂದರ್ಭದಲ್ಲಿ ಈ 'ಎ' ಸ್ಟೇಟ್‌ಗೆ ಒಳಪಟ್ಟ ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳು 'ಬಿ' ಸ್ಟೇಟ್ ಎಂದು ಪರಿಗಣಿಸಲ್ಪಟ್ಟಿರುವ ಮೈಸೂರು ಸಂಸ್ಥಾನಕ್ಕೆ ವರ್ಗಾಯಿಸಲ್ಪಡುತ್ತವೆ. ಈ ವರ್ಗ ಮಾಡುವಾಗ (ಬಿ) ಸಂಸ್ಥಾನದ ಮಟ್ಟದಲ್ಲಿರುವ ಮೈಸೂರನ್ನು (ಎ) ಸಂಸ್ಥಾನದ ಮಟ್ಟಕ್ಕೆ ಎತ್ತತಕ್ಕ ಪ್ರಯತ್ನ ಈ ಬಿಲ್ಲಿನಲ್ಲಿ ಇಲ್ಲ. ಇದರಿಂದ ಇಬ್ಬರಿಗೆ ತಪ್ಪಿಸಿದ ಹಾಗಾಗುತ್ತದೆ. ಆ 7 ಲಕ್ಷ ಪ್ರಜೆಗಳು (ಬಿ) ಸಂಸ್ಥಾನದ ಪ್ರಜೆಗಳಾಗಿದ್ದ ಜನ ಈ ಹೊತ್ತು (ಬಿ) ಸಂಸ್ಥಾನದ ಪ್ರಜೆಗಳಾಗಿದ್ದಾರೆ. ನಿಜವಾಗಿಯೂ ಅವರಿಗೆ ಉಪಕಾರವಾಗಬೇಕಾಗಿದ್ದ ಪಕ್ಷದಲ್ಲಿ ಈ ಮೈಸೂರು ಸಂಸ್ಥಾನವನ್ನು (ಎ) ಸಂಸ್ಥಾನ ಎಂದು ಪರಿಗಣಿಸಿ, ಆ ಸ್ಥಾನವನ್ನು ಇದೇ ಬಿಲ್ಲಿನಲ್ಲಿ ಸೇರಿಸಬೇಕಾಗಿತ್ತು ಎಂದು ಅಂದುಕೊಂಡಿದ್ದೇನೆ. ಈ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ಚರ್ಚೆ ಮಾಡಬೇಕೇ ಬೇಡವೇ ಎಂಬ ವಿಷಯವನ್ನು ಕುರಿತು ಹೆಚ್ಚು ಕಾಲ ಚರ್ಚೆ ಮಾಡುವುದು ಅನಾವಶ್ಯಕ. ನಿನ್ನೆ ಮಾನ್ಯ ಮುಖ್ಯಮಂತ್ರಿಗಳೂ ಕೂಡ ಹೇಳಿದ್ದಾರೆ ಮೈಸೂರಿಗೆ ಒಂದು ವೈಶಿಷ್ಟವಿದೆ ಎಂದು. ಭಾರತದ ಯಾವ ಪ್ರಾಂತದ ಜನವಾಗಲಿ ಭಾಗವಾಗಲಿ ಸೇರುವುದರಿಂದ ಮೈಸೂರಿನ ವೈಶಿಷ್ಟ ಅಳಿಯಬಾರದು. ಈ ವೈಶಿಷ್ಟ್ಯವನ್ನು ಉಳಿಸಿಕೊಂಡು ಬರತಕ್ಕ ಕಾರ್ಯ ಮೈಸೂರಿನ ಜನಕ್ಕೆ ಸೇರಿರತಕ್ಕ ಒಂದು ಪವಿತ್ರವಾದ ಕಾರ್ಯ ಎಂದು ಭಾವನೆ ಮಾಡಿಕೊಂಡಿದ್ದೇನೆ. ನನ್ನ ಮಾನ್ಯ ಸ್ನೇಹಿತರು ಪ್ರಸ್ತಾಪಿಸುತ್ತಾ ಸಂಡೂರಿನ ಮಹಾರಾಜರು ಮೈಸೂರು ಸಂಸ್ಥಾನಕ್ಕೆ ಬರುತ್ತಾರೆ ಎಂಥ ಸನ್ನಿವೇಶ ಎಂದು ಹೇಳಿದರು. ಭಾರತದ ರಾಜ್ಯಾಂಗ ಬಂದಮೇಲೆ ರಾಜಮಹಾರಾಜರುಗಳ ಕಾಲ ಮುಗಿಯಿತು. ಆದರೆ ಮೈಸೂರಿನ ರಾಜಪ್ರಮುಖರಿಗೆ ಮೈಸೂರಿನ ಪ್ರಜಾವರ್ಗದವರೂ ಭಾರತದ ಪ್ರಜಾ

ವರ್ಗದವರೂ ಒಂದು ಉತ್ತಮವಾದ ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿದ್ದಾರೆ. ಆದರೆ ಸಂಡೂರು ಮಹಾರಾಜರು ಇಲ್ಲಿಗೆ ಬರುತ್ತಾರೆಂದು ನಾವು ಹೆಮ್ಮೆಪಡಬೇಕಾಗಿಲ್ಲ. ಅವರು ಬಂದರೆ ಒಂದು ಶ್ರೀಮಂತ ವರ್ಗದ ಪ್ರಜೆ ಆಗುತ್ತಾರೆ ಅಷ್ಟೆ. ನಮ್ಮಲ್ಲಿಗೆ ಬರತಕ್ಕ ಜನ ಕೇವಲ ಅತಿಥಿ ಅಭ್ಯಾಗತರಾಗದೇ ನಮ್ಮವರಾಗಿ ನಿಂತು ಮೈಸೂರಿನ ವೈಶಿಷ್ಟವನ್ನು ಮೈಸೂರಿನ ಕೀರ್ತಿಯನ್ನು ಮೈಸೂರಿನ ಪ್ರತಿಷ್ಠೆಯನ್ನು ಉಳಿಸತಕ್ಕ ಜನ ಆಗಲಿ ಬಂದಿರತಕ್ಕ ಜನಗಳನ್ನು ಹೊರಗೆಹೋಗಿ ಅನ್ನತಕ್ಕ ದೌಷ್ಟ್ಯ ಮೈಸೂರಿನವರಲ್ಲಿ ಇಲ್ಲ. ಆದ್ದರಿಂದ ಆ ಏಳು ತಾಲ್ಲೂಕುಗಳಿಂದ ಬರತಕ್ಕ ಪ್ರಜಾವರ್ಗದವರಿಗೆ ಅನುಕೂಲಮಾಡಿಕೊಡಿ ಎಂದು ಸಲಹೆ ಮಾಡುತ್ತಾ ಇದ್ದೇನೆ. ಕೆಲವು ಸದಸ್ಯರು ಭಾಷಾವಾರು ಪ್ರಾಂತ ನಿರ್ಮಾಣದ ತತ್ವ ಒಪ್ಪಬೇಕು ಎಂದು ಹೇಳುತ್ತಾ ಇದ್ದಾರೆ. ಅದನ್ನು ಒಪ್ಪಿಕೊಳ್ಳುವ ಪಕ್ಷದಲ್ಲಿ ಇದು ವಿಪರೀತವಾಗಿ ಪರಿಣಮಿಸೀತು. ನಮ್ಮ ದೇಶದ ಭದ್ರತೆಗೆ, ಆಡಳಿತ ವ್ಯವಸ್ಥೆಗೆ ಸಂಚಕಾರವಾದೀತು, ಆ ವಾದವನ್ನು 1953ರಲ್ಲಿ ಒಪ್ಪುವುದು ಯೋಗ್ಯವಲ್ಲ ಎಂಬುದನ್ನು ಒತ್ತಿ ಹೇಳುತ್ತೇನೆ. ಇವೊತ್ತು ಬಂದಿರತಕ್ಕ ಜನ ಅಥವಾ ಭೂಮಿಯ ವಿಷಯದಲ್ಲಿ ಬೌಂಡರಿ ಕಮೀಷನ್ ನೇಮಕ ಮಾಡಬೇಕೆಂದು ಇತರ ಜನ ಕೇಳುತ್ತಾ ಇದ್ದಾರೆ. ಮದರಾಸು ಶಾಸನ ಸಭೆಯಲ್ಲಿ ಇವೊತ್ತು ಆಗುತ್ತಾ ಇರುವ ದೊಡ್ಡ ಚರ್ಚೆಯನ್ನು ನೋಡಿದರೆ, ಬೌಂಡರಿ ಕಮೀಷನ್ ನೇಮಕ ಮಾಡುವುದರಿಂದ ಅದು ಬಹಳ ವಿಪತ್ಕಾರಕವಾಗುತ್ತದೆ. ಇವೊತ್ತು ಬಂದು ಸೇರಿದ ಜನ ನಮ್ಮ ಜನ ಎಂದು ಭಾವನೆ ಮಾಡೋಣ. ಆ ಜನ ಮೈಸೂರಿನವರೊಡನೆ ಕಲಿತು ಮೈಸೂರಿನ ಸುಖ ಸೌಕರ್ಯಗಳನ್ನು ಅನುಭವಿಸಲಿ. ಈ ಜನ ಬಂದು ಸೇರುವುದರಿಂಧ ಮುಂದಿನ ಆಡಳಿತ ವ್ಯವಸ್ಥೆ ಕೆಡದೇ ಇರಲಿ. ಮೈಸೂರಿನ ಪ್ರಜೆಗಳು ಯಾವ ಸುಖ ಸೌಕರ್ಯಗಳನ್ನು ನಮ್ಮ ಸರ್ಕಾರದಿಂದಲೂ ದೇಶದಿಂದಲೂ ಅನುಭವಿಸುತ್ತಾ ಇದ್ದಾರೆಯೋ ಅದಕ್ಕೆ ಸಂಚಕಾರ ಒದಗದೇ ಇರಲಿ. ಇದು ಪಾರ್ಲಿಮೆಂಟಿನಲ್ಲಿ ಚರ್ಚೆಯಾಗುವುದಕ್ಕೆ ಸಭೆ ಅವಕಾಶ ಕೊಡಬಹುದು ಎಂದು ಹೇಳುತ್ತೇನೆ.

ಈ ತಿದ್ದುಪಡಿ ಸಭೆಯ ಮುಂದೆ ಬರಬಾರದಾಗಿತ್ತು ಎಂಬುದು ನನ್ನ ಅಭಿಪ್ರಾಯ. ಈ ಆಂಧ್ರಪ್ರಾಂತ ನಿರ್ಮಾಣವಾಗುವಾಗ ಈ ಜನರಿಗೆ ಎಷ್ಟು ಸಹಾಯ ಮಾಡಬೇಕೋ ಅಷ್ಟು ಮಾಡುವುದರಿಂದ ಮೈಸೂರಿನ ಕೀರ್ತಿ ಹೆಚ್ಚಾಗುತ್ತದೆ. ಮೊದಲೇ ಈ ಸಂದರ್ಭದಲ್ಲಿ ಮಾನ್ಯ ಸ್ನೇಹಿತರು ಹೇಳಿರುವ ಹಾಗೆ, ನಮಗೆ ಸಿಕ್ಕುವುದು ಎರಡು ಶಾಲೆಗಳು ಮಾತ್ರ: ಒಂದು ಕಾಕಿನಾಡಾದ್ದು ಇನ್ನೊಂದು ಬಳ್ಳಾರಿಯಲ್ಲಿರುವುದು. ಹೊಸದಾಗಿ ಇಂಥ ಕಲಾಶಾಲೆಗಳನ್ನು ಸೃಷ್ಟಿಸುವುದಕ್ಕೆ ಮುಂಚೆ ಎರಡು ವರ್ಷಗಳ ಕಾಲ ಆ ಪ್ರಾಂತದ ವಿದ್ಯಾರ್ಥಿಗಳಿಗೆ ಸೌಕರ್ಯ ಒದಗಿಸುವುದು ನಮ್ಮ ಕರ್ತವ್ಯ. ಹಾಗೆ ಸಹಾಯ ನೀಡುವುದು ಅಗತ್ಯ ಎಂಬುದು ನನ್ನ ಅಭಿಪ್ರಾಯ. ಶ್ರೀಮಾನ್ ಧರ್ಮಪ್ಪನವರು ಕೊಟ್ಟು ತೆಗೆದುಕೊಳ್ಳುವ ಒಂದು ಸೌಜನ್ಯ ನಮ್ಮಲ್ಲಿರಬೇಕು ಎಂದು ಹೇಳಿದ್ದಾರೆ. ಆಂಧ್ರರೂ, ನಾವೂ ಭಾರತೀಯ ಪ್ರಜೆ. ನಮಗೆ ಭಾರತದಲ್ಲಿ ಎಷ್ಟು ಹಕ್ಕುಭಾದ್ಯತೆಗಳಿವೆಯೋ ಆಂಧ್ರರಿಗೂ ಅಷ್ಟೇ ಹಕ್ಕು

ಭಾದ್ಯತೆಗಳಿವೆ. ಆದ್ದರಿಂದ ಈ ಸೌಜನ್ಯವನ್ನು ಮೈಸೂರು ತೋರಿಸುವುದು ಅತ್ಯಗತ್ಯ. ಈ ತಿದ್ದುಪಡಿಯನ್ನು ಶ್ರೀ ವೀರಬಸಪ್ಪನವರು, ವಾಪಸ್ಸು ತೆಗೆದುಕೊಳ್ಳುವುದು ಉಚಿತ ಎಂದು ತಮ್ಮ ಮೂಲಕ ಅವರಿಗೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

## 2. 1956ರ ಪ್ರಾಂತ್ಯ ಪುನರ್ನಿರ್ಮಾಣದ ಕರಡು ಮಸೂದೆ ಕುರಿತಂತೆ ಚರ್ಚೆಯಲ್ಲಿ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ :–**

ಮಾನ್ಯ ಸಭಾಪತಿಗಳೇ, ಈಗ ಸಭೆಯ ಮುಂದಿರತಕ್ಕ ಪ್ರಾಂತ್ಯ ಪುನರ್ನಿರ್ಮಾಣದ ಕರಡು ಮಸೂದೆಯು ಯಾವ ಉದ್ದೇಶಕ್ಕಾಗಿ ನಮ್ಮ ಇಂಡಿಯಾ ದೇಶದಲ್ಲಿ ಪ್ರಾಂತ್ಯಗಳ ಮರು ವಿಂಗಡಣೆ ಮಾಡಬೇಕೆಂದು ಉದ್ದೇಶಪಟ್ಟಿರೋ ಆ ಉದ್ದೇಶವನ್ನು ಸಾಧನೆ ಮಾಡುವುದಕ್ಕೆ ಯೋಗ್ಯವಾಗಿಲ್ಲ. ಇದಕ್ಕೆ ಕಾರಣ, ಮೊದಲಿನಿಂದಲೂ ನಮ್ಮ ದೇಶದ ಪ್ರಾಜ್ಞರು ಹೇಳಿಕೊಂಡು ಬಂದಿರತಕ್ಕ ವಿಷಯಗಳೇ ಆಗಿವೆ. ಮೊಟ್ಟಮೊದಲನೆಯದಾಗಿ ನಮ್ಮ ಇಂಡಿಯಾ ದೇಶ ಸಂಪಾದನೆ ಮಾಡಿರತಕ್ಕ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಇಂಡಿಯಾದೇಶ ಏಕರಾಷ್ಟ್ರವಾಗಿ ಅವಿಭಾಜ್ಯವಾಗಿ ಇರಬೇಕೆಂಬುದು ಅವರ ಒಂದು ಉದ್ದೇಶ. ಎರಡನೆಯ ಉದ್ದೇಶ, ಇಂಡಿಯಾ ದೇಶದಲ್ಲಿರತಕ್ಕ 37 ಕೋಟಿ ಪ್ರಜಾ ಸಂಖ್ಯೆಯು ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸರಿಯಾದ ರೀತಿಯಲ್ಲಿ ಸುಖಮಯವಾದ ಜೀವನವನ್ನು ನಡೆಸುವಂತಾಗಬೇಕು ಎಂಬುದು. ಈ ಎರಡು ದೃಷ್ಟಿಗಳಿಂದ ಮಾತ್ರ ಸರ್ಕಾರ ಮಾಡಬೇಕಾದ ಎಲ್ಲ ಕಾರ್ಯಗಳೂ ನಡೆಯಬೇಕಾದದ್ದು ಅವಶ್ಯಕ. ಸ್ಟೇಟ್ಸ್ ರೀ–ಅರ್ಗನೈಸೇಷನ್ ಕಮೀಷನ್ ಅನ್ನು ಭಾರತ ಸರ್ಕಾರದವರು ನೇಮಕಮಾಡಿದಾಗ 1953ನೆಯ ಇಸವಿಯ ಡಿಸೆಂಬರ್ 29ನೆಯ ತಾರೀಖು ಅವರು ಹೊರಡಿಸಿದ ನಿರೂಪದಲ್ಲಿರತಕ್ಕ ಅಭಿಪ್ರಾಯವೂ ಕೂಡ ಇದೇ. ಈ ನಿರೂಪವನ್ನು ಮನಸ್ಸಿನಲ್ಲಿಟ್ಟುಕೊಂಡು ಆ ತ್ರೀಮೂರ್ತಿಗಳ ಸಮಿತಿನೇಮಕವಾಯಿತು. ಅವರ ವರದಿಯ ಪೂರ್ವ ಪೀಠಿಕೆಯನ್ನು ನೋಡಿದರೆ ಅವರೂ, ನಮ್ಮ ಇಂಡಿಯಾದೇಶದ ಈಗಿನ ಪರಿಸ್ಥಿತಿಯನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದು ದೇಶದ ಆರ್ಥಿಕೋನ್ನತಿ, ಸಾಮಾಜಿಕೋನ್ನತಿಗಳನ್ನು ಮಾತ್ರ ತಮ್ಮ ಉದ್ದೇಶವಾಗಿಟ್ಟುಕೊಂಡಿದ್ದು, ಸಂಕುಚಿತ ಮನೋವೃತ್ತಿಯಿಂದ ಕೂಡಿರತಕ್ಕ ಭಾಷಾವಾರು, ಪ್ರಾಂತ್ಯನಿರ್ಮಾಣವಾಗತಕ್ಕದ್ದು ಒಳ್ಳೆಯದಕ್ಕಿಂತ ಹಾನಿಕರವೆಂಬ ಭಾವನೆಯನ್ನು ತೋರ್ಪಡಿಸಿದ್ದಾರೆ. ಆದರೆ ಇಲ್ಲಿ ನಮ್ಮ ಮುಂದಿರುವ ಕರಡು ಮಸೂದೆಯನ್ನು ನೋಡಿದರೆ ವಿಂಧ್ಯಪರ್ವತದ ಕೆಳಗಿರತಕ್ಕ ದಕ್ಷಿಣ ಭಾರತದ ಸಂಸ್ಥಾನಗಳ ಪ್ರಾಂತ್ಯ ನಿರ್ಮಾಣವು ಕೇವಲ ಭಾಷಾವಾರು ದೃಷ್ಟಿಯಿಂದ ಆಗಿದೆಯೆಂಬುದು ಕಂಡುಬರುತ್ತದೆ. ಅಂದಮೇಲೆ ಸಂಕುಚಿತ ಭಾಷಾವಾರು ಪ್ರಾಂತ್ಯನಿರ್ಮಾಣ ಮಾಡಕೂಡದೆಂದು ಯಾವ ಉದ್ದೇಶವನ್ನು ನಿರೂಪಣೆ ಮಾಡಿದರೋ ಅದಕ್ಕೆ ವಿರುದ್ಧವಾಗಿಯೇ ಈ ಕರಡು ಮಸೂದೆ ತೋರಿಸುತ್ತಿದೆ. ಇದರಿಂದ ಭಾರತದ ಐಕ್ಯತೆಯ ರಕ್ಷಣೆ ಮತ್ತು ಈ ಜನಾಂಗದ ಆರ್ಥಿಕಾಭಿವೃದ್ಧಿಯನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ಜನಕ್ಕೆ ಈ ಕರಡು ಮಸೂದೆ ಯಾವ ವಿಧವಾದ

---

2. 1956 ಪ್ರಾಂತ್ಯ ಪುನರ್ನಿರ್ಮಾಣದ ಕರಡು ಮಸೂದೆ ಕುರಿತಂತೆ (3.4.1956) ರಂದು ನಡೆದ ಚರ್ಚೆಯಲ್ಲಿ

ಸ್ವಾಸ್ಥ್ಯವನ್ನೂ ತಂದುಕೊಡುವುದಿಲ್ಲವೆಂಬುದು ನಿಜವಾದ ಮಾತು. ಇತ್ತೀಚೆಗೆ ಕಳೆದ ಫೆಬ್ರವರಿ ನಮ್ಮ ಸಂಸ್ಥಾನದಲ್ಲಿ ಮತ್ತು ಕೇಂದ್ರ ಸರ್ಕಾರದಲ್ಲಿ ಆಡಳಿತ ವಹಿಸಿರತಕ್ಕ ರಾಜಕೀಯ ಪಕ್ಷ ಅದರ ಮಹಾಧಿವೇಶದಲ್ಲಿ ಈ ಮಾತುಗಳನ್ನು ಹೇಳಿದೆ. "Language cannot be the dominating factor in the demarcating of the state" ಆ ಮಹಾಸಭೆ ಒಂದು ತೀರ್ಮಾನವನ್ನು ಕೂಡ ಮಾಡಿತು. "If linguistic demarcation of states lead to conflict between states and to the considerations of provincialialism over riding the vital interests of unity and the good of India as a whole, then linguism has over stepped its proper share and become a danger" ಎಂದವರು ಹೇಳಿದ್ದಾರೆ. ಆದರೆ ಈ ಹೊತ್ತು ನಮ್ಮ ದೇಶದಲ್ಲಿ ಭಾಷಾ ವ್ಯಾಮೋಹವೆನ್ನುವುದು ಇಂಡಿಯಾ ದೇಶದ ಭದ್ರತೆಗೆ ಮತ್ತು ಆರ್ಥಿಕ ಪುರೋಭಿವೃದ್ಧಿಗೆ ಡೇಂಜರ್ ಎಂದು ಯಾವ ಪದ ಪ್ರಯೋಗ ಮಾಡಿದ್ದಾರೆ, ಆ "ಡೇಂಜರ್" ಎಂಬ ಪದದ ಪ್ರಯೋಗದಲ್ಲಿರತಕ್ಕ ಎಲ್ಲ ಗುಣಗಳನ್ನು ಈ ಮಸೂದೆ ಪಡೆದಿದೆ ಈ ದೃಷ್ಟಿಯಿಂದ ಈ ಮಸೂದೆಯಲ್ಲಿ ಕಂಡುಬಂದಿರತಕ್ಕ 15 ಸಂಸ್ಥಾನಗಳ ನಿರ್ಮಾಣ ಮತ್ತು ಐದು ಯೂನಿಯನ್ ಟೆರಿಟೋರಿಗಳ ನಿರ್ಮಾಣ – ಒಟ್ಟು 20 ಸಂಸ್ಥಾನಗಳ ನಿರ್ಮಾಣದಲ್ಲಿ ಎಲ್ಲೆಲ್ಲಿ ಭಾಷಾದೃಷ್ಟಿಯಿಂದ ಮಾತ್ರ ಪ್ರಾಂತ್ಯಗಳು ನಿರ್ಮಾಣವಾಗಿವೆಯೋ ಅವು ಅಂಗೀಕಾರಕ್ಕೆ ಅಯೋಗ್ಯವಾಗಿದೆಯೆಂದು ನಾನು ತಿಳಿದಿದ್ದೇನೆ. ಆಮೇಲೆ ಈ ಮಸೂದೆಯಲ್ಲಿ ಮೈಸೂರು ಸಂಸ್ಥಾನದ ಜನಕ್ಕೆ ಮೈಸೂರು ಪ್ರಾಂತ್ಯಕ್ಕೆ ಆಗಿರತಕ್ಕ ಒಂದು ದ್ರೋಹವೆಂದರೆ, ಇಲ್ಲಿ 7ನೆಯ ಕಲಮಿನಲ್ಲಿ ಕಂಡು ಬರತಕ್ಕ ರೀತಿಯನ್ನು ನೋಡಿದರೆ, ನಮ್ಮ ಮೈಸೂರು ಸಂಸ್ಥಾನವನ್ನು ಒಂದು ಹೊಸ ಪ್ರಾಂತ್ಯವನ್ನು ನಿರ್ಮಾಣ ಮಾಡಿದ ಹಾಗೆ ಭಾವಿಸಿದ್ದಾರೆ.

ಏಳು ಹೊಸ ಪ್ರಾಂತ್ಯಗಳನ್ನು ಈ ಕರಡು ಮಸೂದೆಯ ದ್ವಾರಾ ನಿರ್ಮಾಣ ಮಾಡಿದ್ದಾರೆ. ಆ ರೀತಿ ಹೊಸ ಪ್ರಾಂತ್ಯಗಳನ್ನು ನಿರ್ಮಾಣ ಮಾಡುವಾಗ ಮೈಸೂರು ಪ್ರಾಂತ್ಯವನ್ನೂ ಒಂದು ಹೊಸ ಪ್ರಾಂತ್ಯವೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ, ಮೈಸೂರಿನ ಚರಿತ್ರೆ ಕೇವಲ ನೂರಾರು ವರ್ಷಗಳ ಚರಿತ್ರೆಯಲ್ಲ; ಸಾವಿರಾರು ವರ್ಷಗಳ ಚರಿತ್ರೆ ಅದರದು; ಮೈಸೂರಿನಲ್ಲಿ ಸ್ವಪ್ರತಿಷ್ಠಿತವಾದ ಸರ್ಕಾರ ಅನೇಕ ವರ್ಷಗಳಿಂದ ಇದೆ. ಮೈಸೂರಿನಲ್ಲಿ ಶಾಸನಸಭೆಗಳು ಅನೇಕ ವರ್ಷಗಳಿಂದ ಸಮರ್ಪಕವಾದ ರೀತಿಯಲ್ಲಿ ಕೆಲಸ ಮಾಡಿಕೊಂಡು ಬಂದಿವೆ. ಮೈಸೂರಿನ ಜನರ ಅಭ್ಯುದಯಕ್ಕಾಗಿ ನಾನಾ ಕಾರ್ಯಗಳನ್ನು ಇಲ್ಲಿನ ಸರ್ಕಾರ ಆಗಾಗ್ಗೆ ಕೈಗೊಳ್ಳುತ್ತಾ ಬಹಳಮಟ್ಟಿಗೆ ಸಮರ್ಪಕವಾಗಿ ರೀತಿಯಲ್ಲಿ ದೇಶ ಮುಂದುವರಿದುಕೊಂಡು ಬಂದಿದೆ. ಇಂಥ ದೇಶಕ್ಕೆ ಇತರ ಪ್ರಾಂತ್ಯಗಳ ಜನಗಳು ಬಂದು ಸೇರಬೇಕೆಂದು ಹೇಳಿದಾಗ These territories shall be added on" ಎಂದು ಹೇಳಿ ಈಗ ಮೂರು ವರ್ಷಗಳ ಕೆಳಗೆ ಆಂಧ್ರ ಪ್ರಾಂತ್ಯವನ್ನು ಹೊಸದಾಗಿ ರಚಿಸುವಾಗ ಅದನ್ನು ಹೊಸ ಪ್ರಾಂತ್ಯವೆಂದು ಕರೆದು ಏನು ಗೌರವವನ್ನು ತೋರಿಸಿದರೋ ಅದನ್ನೇ ನಮ್ಮ ಮೈಸೂರು ಸರ್ಕಾರಕ್ಕೂ ತೋರಿಸಿದ್ದಾರೆ. ಮುಂದೆ ಇನ್ನೆರಡು ಕಾರಣಗಳನ್ನು ಹೇಳುತ್ತೇನೆ. ಸಾಮಾನ್ಯವಾಗಿ ಇತರ ಸಂಸ್ಥಾನಗಳ ಸರ್ಕಾರದ ಅಧೀನದಲ್ಲಿದ್ದು ಅವರ ಭಾಷೆ, ಅವರ ಸಂಸ್ಕೃತಿ, ಅವರ ಆರ್ಥಿಕ ಪುರೋಭಿವೃದ್ಧಿ

ಇವುಗಳಿಗೆ ಉತ್ತೇಜನ ದೊರೆಯದೆ ಜನ, ನಾಲ್ಕೈದು ಸರ್ಕಾರಗಳ ಕೈಕೆಳಗೆ ಇದ್ದ ಜನ ಮೈಸೂರು ಸಂಸ್ಥಾನದಲ್ಲಿ ಸೇರಬೇಕೆಂದು ಹಾತೊರೆಯುತ್ತಿದ್ದರು ಎಂಬುದನ್ನು ನಮ್ಮ ಮನಸ್ಸಿನಲ್ಲಿಟ್ಟು ಕೊಳ್ಳಬೇಕು. ಹತ್ತಾರು ವರ್ಷಗಳಿಂದ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದ ಸ್ನೇಹಿತರು ಹೈದರಾಬಾದಿನಲ್ಲಿ ಕನ್ನಡ ಮಾತನಾಡುವ ಜನಗಳು, ನಾಗರಿಕತೆಯಲ್ಲಿ, ಸಂಸ್ಕೃತಿಯಲ್ಲಿ ಮತ್ತು ಆರ್ಥಿಕ ಪರಿಸ್ಥಿತಿಯಲ್ಲಿ ಮುಂದುವರಿದಿರತಕ್ಕ ಮೈಸೂರು ದೇಶದ ಜನಗಳೊಂದಿಗೆ ಕಲೆತು ಬೆರೆತು ತಮ್ಮ ಆರ್ಥಿಕಾಭಿವೃದ್ಧಿಯನ್ನು ಮಾಡಿಕೊಳ್ಳಬೇಕೆಂದು ಅಪೇಕ್ಷೆ ಪಡುತ್ತಿದ್ದಾರೆ. ಮೈಸೂರು ದೇಶದ ಜನ ಈ ಜನಗಳೊಂದಿಗೆ ಸೇರಿದರೆ ಆ ಸರ್ಕಾರಗಳ ಅಧೀನದಲ್ಲಿ ಇರಬೇಕೆಂದು ಬಯಸಿಲ್ಲ. ಇಂತಹ ಪರಿಸ್ಥಿತಿ ಇರುವಾಗ ನಾಲ್ಕೈದು ಸರ್ಕಾರಗಳ ಕೈಕೆಳಗೆ ಇದ್ದಂಥ ಭಾಗಗಳ ಜನರು ಬಂದು ನಮ್ಮನ್ನು ಸೇರುವಾಗ ಈಗಿರತಕ್ಕ ಮೈಸೂರು ಸಂಸ್ಥಾನಕ್ಕೆ ಈ ಪ್ರಾಂತಗಳನ್ನು ಸೇರಿಸಲಾಗುತ್ತದೆ ಎಂದು ಮದರಾಸ್ ಸಂಸ್ಥಾನಕ್ಕೆ ಯಾವ ಪದಪ್ರಯೋಗ ಮಾಡಿದರೋ ಆಂಧ್ರ ಸಂಸ್ಥಾನಕ್ಕೆ ಯಾವ ಪದಪ್ರಯೋಗ ಮಾಡಿದರೋ ಆ ಪದಪ್ರಯೋಗವನ್ನು ಮಾಡಿದ ಪಕ್ಷದಲ್ಲಿ ಮೈಸೂರಿನವರ ಕೀರ್ತಿ, ಗೌರವ ಉಳಿಯುತ್ತಿತ್ತು ಎಂದು ಭಾವಿಸಿಕೊಂಡಿದ್ದೇನೆ. ಇದರ ಜೊತೆಗೆ 7–8 ದಿವಸಗಳಿಂದ ಮೈಸೂರು ವಿಸ್ತಾರವಾಗುವ ವಿಷಯವನ್ನೂ ನೂತನಪ್ರಾಂತ ನಿರ್ಮಾಣವಾಗತಕ್ಕ ವಿಷಯವನ್ನೂ ಒಳಗೊಂಡ, ಕರಡು ಮಸೂದೆಯಲ್ಲಿರುವ 7ನೇ ಕಲಂ ಇತರ ಪ್ರಾಂತಗಳ ಶಾಸನಸಭೆಗಳಲ್ಲಿ ಚರ್ಚೆಯಾಗುತ್ತಿದೆ. ಆ ಶಾಸನಸಭೆಗಳಲ್ಲಿ ಚರ್ಚೆಯಾಗುವ ಸಮಯದಲ್ಲಿ, ಮೈಸೂರಿಗೆ ಬಂದು ಸೇರುವ ಜನ ಯಾವ ಮಾತನ್ನು ಆಡುತ್ತಿದ್ದಾರೆ ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು, ಎರಡು ಮಾತುಗಳನ್ನು ಈ ಸಭೆಯಲ್ಲಿ ಹೇಳಬೇಕೆಂದಿದ್ದೇನೆ. ಎರಡು ಕಡೆ, ಮೈಸೂರಿನ ಹೆಸರನ್ನೇ ಕಿತ್ತುಹಾಕಬೇಕು. ತೆಗೆದು ಹಾಕಬೇಕು ಎನ್ನುವ ಮಾತನ್ನು ಆಡಿದ್ದಾರೆ. ವಿಜಯನಗರ ಎನ್ನುವ ಹೊಸ ಹೆಸರನ್ನು ಮೈಸೂರಿಗೆ ಕೊಡಬೇಕೆಂದು ಹೇಳಿದ್ದಾರೆ. ಮೈಸೂರು ಎನ್ನುವ ಹೆಸರೇ ಗುಲಾಮಗಿರಿ ಸಂಕೇತ, ಆ ಗುಲಾಮಗಿರಿ ಸಂಕೇತವಾದ ಮೈಸೂರನ್ನು ತೊಡೆದುಹಾಕಿ, ಬೇರೊಂದು ಹೆಸರನ್ನು ಕೊಡಬೇಕೆಂದು ಕೆಲವು ಸದಸ್ಯರು ಸೂಚನೆ ಮಾಡಿದ್ದಾರೆ. ಆ ಜನರಲ್ಲಿ ನನಗೆ ವಿಶೇಷ ಗೌರವವಿದೆ. ಅವರಲ್ಲಿ ನನಗೆ ವಿಶೇಷ ಅಭಿಮಾನ ಇದೆ. ನಮ್ಮ ಮನೆಯ ಜನ ನನಗೆ ಎಷ್ಟು ಹಿತದವರೋ ಅವರೂ ಅಷ್ಟೇ ಹಿತದವರು ಎಂದುಕೊಂಡಿದ್ದೇನೆ. ಆದರೆ ಆ ಜನರ ಮನೋವೃತ್ತಿಯನ್ನು ಖಂಡನೆ ಮಾಡದೆ ಹೋದ ಪಕ್ಷದಲ್ಲಿ ನಮ್ಮ ದೇಶಕ್ಕೆ ಉಳಿಗಾಲವಿಲ್ಲ ಎಂದು ಭಾವನೆ ಮಾಡಿಕೊಂಡಿದ್ದೇನೆ. ಮೈಸೂರು ಗುಲಾಮಗಿರಿಯ ಸಂಕೇತವಿಲ್ಲ. ಮೈಸೂರಿನ ಚರಿತ್ರೆ ವಿಶಾಲವಾದ ಚರಿತ್ರೆ, ವಿಸ್ತೃತವಾಗಿರತಕ್ಕ ಚರಿತ್ರೆ. ವಿಜಯನಗರವು 11ನೇ ಶತಮಾನದಿಂದ ಮೂರು ಶತಮಾನಗಳವರೆಗೂ ಹೇಗೆ ಸೊಗಸಾಗಿ ಬೆಳೆದುಕೊಂಡು ಹೋಯಿತೋ ಹಾಗೆಯೇ ಇತ್ತೀಚೆಗೆ ಮೂರು ಶತಮಾನಗಳಲ್ಲಿ ಮೈಸೂರಿನ ಚರಿತ್ರೆ, ಅಷ್ಟೇ ದೇದೀಪ್ಯಮಾನವಾಗಿ ಬೆಳೆದುಕೊಂಡು ಬಂದಿದೆ. ಮೈಸೂರು ಸಂಸ್ಥಾನದಲ್ಲಿ ಕಲೆ, ಸಾಹಿತ್ಯ, ಧರ್ಮ, ಹೇಗೆ ಹಿಂದಿನಿಂದಲೂ ಬೆಳೆದುಕೊಂಡು ಬಂದಿವೆಯೋ, ಜನಗಳ ಅಭಿವೃದ್ಧಿ, ಪುರೋಭಿವೃದ್ಧಿ ಹೇಗೆ ಬೆಳೆದು ಕೊಂಡು ಬಂದಿದೆಯೋ, ಅದೇ ರೀತಿಯಲ್ಲಿ ಇತ್ತೀಚಿನ ಮಾಡ್ರನ್ ಏಜ್ ಎಂದು ಏನು ಕರೆಯುತ್ತೇವೋ, ಆ ಮಾಡ್ರನ್ ಏಜ್‌ನಲ್ಲಿ ಈ ಮೂರು ಶತಮಾನಗಳಿಂದಲೂ ವಿಜಯನಗರದ ವೈಭವಕ್ಕೆ ಸರಿಸಮಾನವಾದ

ರೀತಿಯಲ್ಲಿ ಮೈಸೂರು ಸಂಸ್ಥಾನದ ಚರಿತ್ರೆಯು ಬೆಳೆದುಕೊಂಡು ಬಂದಿದೆ ಎಂಬುದನ್ನು ಈ ಜನರು ಜ್ಞಾಪಕದಲ್ಲಿಟ್ಟುಕೊಳ್ಳಬೇಕು.

ಎರಡನೆಯದಾಗಿ ಮೈಸೂರಿನ ಹೆಸರು ಗುಲಾಮಗಿರಿಯ ಸಂಕೇತ ಎಂದು ಯಾವ ಜನ ಹೇಳಿದರೋ ಅವರು 1947ನೇ ಇಸವಿ ಆಗಸ್ಟ್ 15ನೇ ತಾರೀಖಿನವರೆಗೂ ಗುಲಾಮದಾಗಿರತಕ್ಕ ಜನ ಬ್ರಿಟಿಷ್ ಇಂಡಿಯನ್ ಪ್ರಾವಿನ್ಸಸ್ ಎಂಬುದು ಪರಕೀಯರ ದಾಸ್ಯದ ಒಂದು ಚಿಹ್ನೆ. ಅದು ನಮಗಿಂತಲೂ ಹೆಚ್ಚಿಗೆ ಅವರ ಮೇಲೆ ಇತ್ತು. ಅವರಿಗೆ ಪ್ರಜಾಪ್ರಾತಿನಿಧ್ಯ ಮೈಸೂರು ಸಂಸ್ಥಾನದಲ್ಲಿ ಇದ್ದಹಾಗೆ ಇರಲಿಲ್ಲ. ಮೈಸೂರು ಸಂಸ್ಥಾನದಲ್ಲಿ ಯಾವ ಆಡಳಿತ ಸೌಕರ್ಯವಿದೆಯೋ ಆ ಆಡಳಿತ ಸೌಕರ್ಯ ಅವರಿಗೆ ಇರಲಿಲ್ಲ. ನಮ್ಮಲ್ಲಿ ಪ್ರಜಾಪ್ರತಿನಿಧಿ ಸಂಸ್ಥೆಗಳು ಬೆಳೆದುಕೊಂಡು ಬಂದಿರತಕ್ಕದ್ದು 65 ವರ್ಷಗಳ ಹಿಂದಿನ ಚರಿತ್ರೆ. ಶಾಸನಸಭೆಗಳು ನಮ್ಮಲ್ಲಿ ಎಷ್ಟು ಸಮರ್ಪಕವಾದ ಕೆಲಸ ಮಾಡಿವೆ ಎಂದರೆ ಇಂಡಿಯಾ ಸರ್ಕಾರದ ಸೂತ್ರಗಳನ್ನು ಕೈಯಲ್ಲಿ ಹಿಡಿದ ಜನಗಳ ಹೊರಗಿನಿಂದ ಬಂದಿರತಕ್ಕ ರಾಜನೀತಿಜ್ಞರಾದ ಜನಗಳ ಗೌರವ ಮನ್ನಣೆಗಳಿಗೆ ಇದು ಪಾತ್ರವಾಗಿದೆ. ಮೈಸೂರು ಒಂದು ಗುಲಾಮಗಿರಿಯ ಸಂಕೇತ ಎಂಬ ಮಾತಿನ ಹಿಂದೆ ಇರುವ ಮನೋವೃತ್ತಿಯನ್ನು ಖಂಡನೆ ಮಾಡದ ಪಕ್ಷದಲ್ಲಿ ಅವರು ನಮ್ಮೊಡನೆ ಅವಿಭಕ್ತ ಕುಟುಂಬ ಜೀವನವನ್ನು ಚೆನ್ನಾಗಿ ಮಾಡಲಾರರು ಮತ್ತು ಇಲ್ಲಿ ಸಮರಸವಾದ ಜೀವನ ಮಾಡುವುದಕ್ಕೆ ಸಾಧ್ಯವಾಗಲಾರದು ಮತ್ತು ವಿಷರಸವಾದ ಜೀವನ ಅವರ ಪಾಲಿಗೆ ದಕ್ಕೀತು ಎಂದು ತಿಳಿದುಕೊಂಡಿದ್ದೇನೆ. ಮಾನ್ಯ ಮುಖ್ಯ ಮಂತ್ರಿಗಳು ಈ ಮಸೂದೆಯನ್ನು ಕೆಳಗಿನ ಸಭೆಯಲ್ಲಿ ಪ್ರಸ್ತಾಪಮಾಡುತ್ತಾ ಒಂದು ಪ್ರಕರಣದಲ್ಲಿ "ಪ್ರಥಮ ಚುಂಬನಂ ದಂತಭಗ್ನಂ" ಎಂಬ ಮಾತನ್ನು ಆಡಿದರು. ಆ ಮನೋವೃತ್ತಿ ಆ ಜನರಲ್ಲಿದ್ದರೆ ಪ್ರಥಮ ಚುಂಬನ ಕಾಲದಲ್ಲಿ ದಂತಭಗ್ನವಾಗುವ ಪ್ರಕರಣ ಒದಗೀತು. ಇಂತಹ ಪ್ರಕರಣ ಹೊರಗಿನಿಂದ ಈ ದೊಡ್ಡ ಸಂಸ್ಥಾನಕ್ಕೆ ಬಂದು ಸೇರುವಾಗ ನಮ್ಮೊಡನೆ ಕಲಿಯುವಾಗ, ಬೆರೆಯುವಾಗ ಜನಗಳಿಗೆ ವಿಶಾಲ ಮನೋವೃತ್ತಿ ಬರಬೇಕಾದುದು ಯೋಗ್ಯವೆಂದು ನಾನು ತಿಳಿದುಕೊಂಡಿದ್ದೇನೆ.

ಇನ್ನೊಂದು ಮಾತು ಹೇಳಬೇಕಾಗಿದೆ. ಈ ಸಮಯದಲ್ಲಿ ಈ ತರಹ ಮನೋವೃತ್ತಿಯನ್ನು ಪಡೆದಿರತಕ್ಕ ಅಲ್ಪ ಜನ ಕೂಡ ಭಾವನೆ ಮಾಡಬೇಕಾದುದೇನೆಂದರೆ; ಮೈಸೂರಿನ ಬಹುತೇಕ ಜನ, ನೂರಾರು ಜನರಲ್ಲ, ಸಾವಿರಾರು ಜನ; ಮೈಸೂರು ಎಂಬ ಒಂದುಸಂಸ್ಥಾನ ಯಾವುದು ಇದೆ, ಅದು ಸಮ್ಮಿಶ್ರ ರಾಜ್ಯ composite character ನಿಂದ ಕೂಡಿರತಕ್ಕ ರಾಜ್ಯ ಏನಿದೆ, ಆ ರಾಜ್ಯವನ್ನು ಉಳಿಸಿಕೊಂಡು ಬರಬೇಕೆಂದು ನಮ್ಮ ದೇಶದಲ್ಲಿ ಅಭಿಪ್ರಾಯಪಟ್ಟರು. ಈ ಅಭಿಪ್ರಾಯಪಟ್ಟಾಗ ಕೇವಲ ಸ್ವಂತ ಅಭಿಲಾಷೆಯಿಂದ ಹೇಳಲಿಲ್ಲ. ಇದು ಇಂಡಿಯಾ ದೇಶಕ್ಕೂ ಅನ್ವಯಿಸುವಂತಾಗಬೇಕು ಎಂದು ಹೇಳಿದರು ಎನ್ನುವುದನ್ನು ಒಪ್ಪಬೇಕಾದುದು ಯೋಗ್ಯ. ಈ ಮಾತನ್ನು ಅವರು ಆಡಿದಾಗ ಇಂಡಿಯಾ ದೇಶದ ಸುಖ ಸೌಕರ್ಯಗಳು ಅವರ ಮನಸ್ಸಿನಲ್ಲಿತ್ತು. ಆದ್ದರಿಂದಲೇ ದೊಡ್ಡ ದೊಡ್ಡ ಸಂಸ್ಥಾನಗಳನ್ನು ನಿರ್ಮಾಣ ಮಾಡಬೇಕು ಎಂದು ಒಂದು ಪ್ರಭುತ್ವ ಪಕ್ಷದಿಂದ ಆಜ್ಞೆ ಬಂದಾಗ ಇಂಡಿಯಾ ಸರ್ಕಾರದ ಜನ ಹಾಗೆ ತೀರ್ಮಾನ ಮಾಡಿದಾಗ, ಇಂಡಿಯಾ ದೇಶದ ಹಿತದ ದೃಷ್ಟಿಯಿಂದ

ದೊಡ್ಡ ಸಂಸ್ಥಾನಗಳ ರಾಜ್ಯ ನಿರ್ಮಾಣವಾಗುವ ಪಕ್ಷದಲ್ಲಿ ನಾಲ್ಕಾರು ರಾಜ್ಯಗಳು ಸೇರಿ ದಕ್ಷಿಣ ಭಾರತವಾಗಲಿ ಎಂಬ ಒಂದು ತ್ಯಾಗ ಮನೋಭಾವದಿಂದ ಆ ಮಾತನ್ನು ಆಡಿದರು. ಆ ಮಾತು ಸ್ವಪ್ರತಿಷ್ಠೆಯಿಂದ, ಸ್ವಾಭಿಲಾಷೆಯಿಂದ ಮತ್ತು ಸ್ವಾರ್ಥದಿಂದ ಕೂಡಿರದೆ ಇಡೀ ಇಂಡಿಯಾ ದೇಶದ ಸೌಕರ್ಯ, ಇಂಡಿಯಾ ದೇಶದ ಐಕ್ಯತೆ, ಇಂಡಿಯಾ ದೇಶದ ಆರ್ಥಿಕ ಪರಿಸ್ಥಿತಿ, ಇಂಡಿಯಾ ದೇಶದ ಪುರೋಭಿವೃದ್ಧಿ, ಮಾತ್ರ ಅವರ ಮನಸ್ಸಿನಲ್ಲಿತ್ತೆಂಬುದನ್ನು ಅವರು ಜ್ಞಾಪಕದಲ್ಲಿಡಬೇಕು. ಇದನ್ನು ಆಲೋಚನೆ ಮಾಡಬೇಕಾದುದು ಯೋಗ್ಯ. ಇದು ಎಲ್ಲರಿಗೂ ಗೊತ್ತಿರತಕ್ಕ ಮಾತು. states reorganisation commission ಅವರು ಬಹಳ ಮನಸ್ಸು ನೋಯುವ ರೀತಿಯಲ್ಲಿ ಮಾತನಾಡಿದ್ದಾರೆ. ಒಂದು ಕೋಟಿ ಪ್ರಜಾ ಸಂಖ್ಯೆಯಿಂದ ಕೂಡಿರತಕ್ಕ ಮೈಸೂರು ಸಂಸ್ಥಾನದಲ್ಲಿ ಮೆಜಾರಿಟಿ ಗ್ರೂಪ್ ಎನ್ನುವುದು ಒಕ್ಕಲಿಗರ ಗ್ರೂಪು. ಶೇಕಡ 20ರಷ್ಟು ಇರುವ ಒಕ್ಕಲಿಗರ ಗ್ರೂಪು ಮುಂದೆ ಬರತಕ್ಕ ವಿಸ್ತೃತ ಮೈಸೂರು ಸ್ಟೇಟಿನಲ್ಲಿ ಶೇಕಡ !4ರಷ್ಟು ಆಗುತ್ತದೆ. ನಮ್ಮಲ್ಲಿ ಶೇಕಡ 18, ಶೇಕಡ 19 ಇರತಕ್ಕ ಶೆಡ್ಯೂಲ್ಡ್ ಕ್ಯಾಸ್ಟ್ಸ್ ಶೇಕಡ 13 ಆಗಿ ರೆಡ್ಯೂಸ್ ಆಗುತ್ತದೆ.

ಅವರು ಶೇಕಡ 13ರಷ್ಟು ಆಗುತ್ತಾರೆ. ಇನ್ನು ಮಿಕ್ಕವನ್ನು linguistic groups social groups ಎಂದು ಕರೆಯುತ್ತೇವೆ ಎಂದರೆ ತಮಿಳು ಮಾತನಾಡತಕ್ಕ ಜನ, ತೆಲುಗು ಮಾತನಾಡತಕ್ಕ ಜನ, ಕಡಿಮೆಯಾಗಿ, ಚಿಕ್ಕ ಚಿಕ್ಕ ಗುಂಪುಗಳಾಗುತ್ತವೆ. ಈ ಗುಂಪುಗಳಿಗೆ ಭಾಷಾವಾರು ದೃಷ್ಟಿಯಿಂದ ಪ್ರಾಂತ ನಿರ್ಮಾಣವಾದಾಗ, ನ್ಯಾಯಾವಾಗಿ ಅವರಿಗೆ ದೊರೆಯಬೇಕಾದಂಥ ಒಂದು Justice ಮತ್ತು amenities ಅಂತಹ ಸಂದರ್ಭದಲ್ಲಿ ಒದಗುವುದಿಲ್ಲ ಎನ್ನುವ ಭೀತಿ ಹೆಚ್ಚಾಗತಕ್ಕದ್ದು – ಸಹಜವಾದುದು ಮತ್ತು ಸ್ವಾಭಾವಿಕವಾದುದು. ಆದರೆ ಮೈಸೂರು ದೇಶದ ಜನ ಹಾಗೆ ಗಾಬರಿಪಡತಕ್ಕ ಜನರಲ್ಲ. ಮೈಸೂರು ದೇಶ ವಿಸ್ತೃತ ಮೈಸೂರು ಆಗಬಹುದೆಂದು ಒಪ್ಪಿಕೊಳ್ಳಬೇಕಾದರೆ, ಸ್ವಾರ್ಥ ತ್ಯಾಗ ಬುದ್ಧಿಯಿಂದಲೇ ಒಪ್ಪಿಕೊಳ್ಳಬೇಕಾಗುತ್ತದೆ. ಇದನ್ನು ಯಾರಾದರೂ ಕೇವಲ ಅಳುಕುತನ ಎಂದುಕೊಂಡರೆ ಅದು ತಪ್ಪು ತಿಳಿದುಕೊಂಡ ಹಾಗೆ ಆಗುತ್ತದೆ. ಮೈಸೂರು ದೇಶದ ಜನ ಕುಸುಮ. ಎಷ್ಟು ಮೃದುವಾಗಿರುತ್ತದೆಯೋ ಅದಕ್ಕಿಂತಲೂ ಹೆಚ್ಚಿಗೆ ಮೃದುವಾಗಿರುವವರು ಮತ್ತು ಅಷ್ಟೇ ಸೌರಭದಿಂದ ಕೂಡಿರತಕ್ಕ ಜನ. ಆದರೆ ಒಳ್ಳೆಯ ವಜ್ರ ಎಷ್ಟು ಕಠಿಣವಾಗಿರುತ್ತದೋ ಅದಕ್ಕಿಂತಲೂ ಕಠಿಣವಾಗಬಲ್ಲ ಜನ. ಆದ್ದರಿಂದ ಹೊರಗಿನಿಂದ ಬಂದಂಥ ಜನ ಅವಿಭಕ್ತ ಕುಟುಂಬ ಜೀವನವನ್ನು ಬಯಸಬೇಕೆಂದು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದುದು ಯೋಗ್ಯವೆಂದು ಈ ಸಮಯದಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ.

ಮಾನ್ಯ ಸಭಾಪತಿಗಳೇ, ಇನ್ನು ಕರಡು ಮಸೂದೆಯಲ್ಲಿ ಸೂಚಿಸಿರತಕ್ಕ ಒಂದೆರಡು ಅಭಿಪ್ರಾಯಗಳ ವಿಷಯದಲ್ಲಿ ನಾನು ಮಾತನಾಡಬೇಕೆಂದಿದ್ದೇನೆ. ಜೋನಲ್ ಕೌನ್ಸಿಲ್ ಎಂದು ಮಾಡಿದ್ದಾರೆ. ಎರಡು ಮೂರು ಸಂಸ್ಥಾನಗಳ ಭಾಗಗಳು ಒಟ್ಟಿಗೆ ಸೇರತಕ್ಕ ಕಾಲದಲ್ಲಿ ಜೋನಲ್ ಕೌನ್ಸಿಲ್‌ನಿಂದ ಹೆಚ್ಚಿಗೆ ಸಹಾಯವಾದೀತು ಎಂದುಕೊಂಡಿದ್ದೇನೆ. ಎರಡು ಸಂಸ್ಥಾನಗಳಿಗೂ ಅನ್ವಯವಾಗತಕ್ಕ ಆರ್ಥಿಕ ವಿಚಾರಗಳಾಗಲಿ, ಇತರ ವಿಚಾರಗಳಾಗಲಿ ಅವು ಇಂತಹ ಜೋನಲ್

ಕೌನ್ಸಿಲ್‌ಗಲ್ಲಿ ವಾದ ವಿವಾದಗಳು ಆಗದೆ ಒಮ್ಮುಖ ತೀರ್ಮಾನಕ್ಕೆ ಬರುವುದಕ್ಕೆ ಸಾಧ್ಯವಾದೀತು. ಎಂದು ತಿಳಿದುಕೊಂಡಿದ್ದೇನೆ. ಜೋನಲ್ ಕೌನ್ಸಿಲ್‌ಗಳಿಗೆ border dispute ಗಳನ್ನೂ ಕೂಡ ತೆಗೆದುಕೊಳ್ಳುವುದಕ್ಕೆ ಒಂದು ಅವಕಾಶವನ್ನು ನಿರ್ಮಾಣ ಮಾಡಿದ್ದಾರೆ. ಬಾರ್ಡರ್ ಏರಿಯಾಸ್ ವ್ಯವಹಾರ, ತೀರ್ಮಾನ ಮಾಡುವುದಕ್ಕೆ ಬೌಂಡರಿ ಕೌನ್ಸಿಲ್ ಮಾಡುವುದೇ ಯೋಗ್ಯ, ಜೋನಲ್ ಕೌನ್ಸಿಲ್ ಮಾಡುವುದು ಯೋಗ್ಯವಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. ಕರಡು ಮಸೂದೆ ಬಂದ ಮೇಲೆ ನಮ್ಮ ದೇಶದಲ್ಲಿ ನೂರಾರು ಜನ ಹೇಳುತ್ತಿರುವುದನ್ನು ಕೇಳಿದ್ದೇನೆ. ನಮ್ಮ ಸರ್ಕಾರ ಇವೊತ್ತು ಆಗಿದ್ದಲ್ಲ. ನೂರಾರು ವರ್ಷಗಳಿಂದ ಒಂದು ಸಂಸ್ಥಾನವಾಗಿ ಬೆಳೆದುಕೊಂಡುಬಂದಿರತಕ್ಕ, ಮುಂದುವರಿದ ದೇಶ ಎಂದೆನಿಸಿಕೊಂಡಿರತಕ್ಕ ಮೈಸೂರಿಗೆ ಒಂದು regional council ಮಾಡಿ ಇತರೆ ಪ್ರಾಂತಗಳಿಗೆ ಇನ್ನೊಂದು regional council ಮಾಡಿ, ಒಂದು ಸಂಸ್ಥಾನ ನಿರ್ಮಾಣ ಮಾಡುವುದಕ್ಕೆ ಏನಾಗಿತ್ತು? ಆಗ ಸರ್ವಸಮರ್ಪಕವಾದ ರೀತಿಯಲ್ಲಿ ಎರಡು ಭಾಗಗಳ ಆರ್ಥಿಕ ಪುರೋಭಿವೃದ್ಧಿ ಕೂಡ ನಡೆಯುವುದಕ್ಕೆ ಬಹಳ ಸಹಾಯವಾಗುತ್ತಿತ್ತು. ಇದನ್ನು ನಿರ್ಮಾಣ ಮಾಡಲಿಲ್ಲ. ಆದ್ದರಿಂದ ಈ ಬಿಲ್ಲಿನಲ್ಲಿ ಇದು ಒಂದು ನ್ಯೂನತೆ ಎಂದು ಹೇಳುತ್ತಿದ್ದೇನೆ.

ಇನ್ನು ಶಾಸನಸಭೆಗಳ ವಿಚಾರದಲ್ಲಿ ನನ್ನ ಮಾನ್ಯ ಮಿತ್ರರಾದ ಮೇಧಾವಿಗಳಾದ ಶ್ರೀಮಾನ್ ಸೀತಾರಾಮಯ್ಯನವರು ಬಹಳ ಚೆನ್ನಾಗಿ ಮಾತಾಡಿದ್ದಾರೆ. Bi-cameral legislature ವ್ಯವಸ್ಥೆ, ಪಾರ್ಟಿಸರ್ಕಾರದ ನಡೆಯುವ ಯಾವ ಯಾವ ಸಂಸ್ಥಾನಗಳಿವೆಯೋ, ಅಲ್ಲೆಲ್ಲಾ ಇರಬೇಕಾದುದು ಅವಶ್ಯಕ. ಅನೇಕ ಅನಕ್ಷರಸ್ಥರಿಂದ ಕೂಡಿರುವ ದೇಶ ಇದು. ನಮ್ಮ ಜನರು ವಿವೇಕಿಗಳು, ಆದರೆ ಅನಕ್ಷರಸ್ಥರು, ಈ ಎಲ್ಲ ಜನರಿಗೂ ಮತದಾನದ ಅಧಿಕಾರ ಬಂದಿದೆ. ಪ್ರಜಾಪ್ರಭುತ್ವ ನಿರ್ಮಾಣವಾಗಿರುವ ಇಂಡಿಯಾ ದೇಶದಲ್ಲಿ ಜನ ಸಾಮಾನ್ಯರ ಪ್ರತಿನಿಧಿಗಳಾಗಿರುವವರು, ಅವರೊಂದಿಗೆ ಕುಳಿತಿರುವವರು, ಅವರ ಜೀವನದೊಂದಿಗೆ ನಿಕಟ ಸಂಬಂಧವನ್ನು ಬೆಳೆಸಿಕೊಂಡು ಬಂದಿರುವ ಜನರಾಗಿರಬೇಕು. ಕೆಲವು ಸಂದರ್ಭಗಳಲ್ಲಿ ಇಂಥ ವಿದ್ಯಾವಂತ ಜನರ ಸಹಾಯ ಅಂಥ ಜನಕ್ಕೆ ಕೊಂಚ ಒಳ್ಳೆಯದು ಮಾಡೀತು ಎಂದು ಕೊಂಡಿದ್ದೇನೆ. ಅವರು ಒಂದು ನೀತಿಯನ್ನು ಹಾಕಿದ ಪಕ್ಷದಲ್ಲಿ ಅದಕ್ಕನುಸಾರವಾಗಿ ಆಡಳಿತ ನಡೆಯಬೇಕಾದರೆ, ಅದನ್ನು ಕೂಲಂಕುಷವಾಗಿ ಪರಿಶೀಲನೆ ಮಾಡುವುದಕ್ಕೆ ಕೆಲವು ಜನರಿರಬೇಕಾದುದು ಯೋಗ್ಯ. ಇಂಥ ಸಭೆ ಸಂಖ್ಯೆಯಲ್ಲಿ ಕೂಡ ಕಡಿಮೆಯಿರಬೇಕಾದುದು ಯೋಗ್ಯ. ಅದುದರಿಂದಲೇ bi-cameral legislature ಎಂದರೆ ಎರಡು ಸಭೆಗಳಿಂದ ಕೂಡಿರುವ ಶಾಸಕಾಂಗವನ್ನು ಉಳಿಸಿಕೊಂಡು ಬರಬೇಕೆಂದು ಹೇಳಿದ್ದಾರೆ. ಇದನ್ನು ಇದೇ ಸಭೆಯ ಸದಸ್ಯನಾಗಿ ನಾನು ಹೇಳವುದಾದರೆ, ಇದು ಅಷ್ಟು ನಾಗರಿಕವೆಂದು ಜನರು ಭಾವಿಸಲಾರರು. ಆದರೆ ಇದು ಅಗತ್ಯವೆಂದು ನನ್ನ ಭಾವನೆ. ಇದರಲ್ಲಿ ಒಂದು ನ್ಯೂನತೆಯಿದೆ. ಈಗ ಮೈಸೂರು ಸಂಸ್ಥಾನದಲ್ಲಿ 40 ಸದಸ್ಯರಿಂದ ಕೂಡಿರುವ ವಿಧಾನಪರಿಷತ್ತಿನ ಇದರ ಸದಸ್ಯರೂ ಹೊರಗಿನಿಂದ ಮದರಾಸು, ಬೊಂಬಾಯಿನಿಂದ ಬರುವ ಜನರೂ ಕ್ರಮಬದ್ಧವಾಗಿ ರಾಜ್ಯಾಂಗದ ಅನುಚ್ಛೇದಕ್ಕನುಸಾರವಾಗಿ ಚುನಾಯಿತರಾಗಿ ಬಂದಿರುವ ಜನರು. ಇವರು ಯಾವ ಯಾವ

ಕಾಲದವರೆಗೆ ಸದಸ್ಯರಾಗಿರಬಹುದೆಂದು ನಿರ್ದಿಷ್ಟ ಮಾಡಿದ್ದಾರೋ ಆ ಕಾಲ ಮುಗಿಯುವವರೆಗೆ ಇದ್ದಿದ್ದರೆ ಅನುಕೂಲವಾಗುತ್ತಿತ್ತು. ಈ ಹೊತ್ತು ಈ ವಿಧಾನ ಪರಿಷತ್ತಿನ ಚರಿತ್ರೆಯನ್ನು ನೋಡುವುದಾದರೆ, ಎರಡು ಮೂರು ತಿಂಗಳಲ್ಲಿ ಮೂರು ನಾಲ್ಕು ಕ್ಷೇತ್ರಗಳಿಂದ ಚುನಾವಣೆ ನಡೆಯಬೇಕಾದ ಪ್ರಮೇಯ ಬಂತು. ಇದು interim ಸಭೆಯಾಗಿರುವುದರಿಂದ ಚುನಾವಣೆಯನ್ನು ನಿಲ್ಲಿಸಬಹುದಾಗಿತ್ತು, ಇದಕ್ಕಾಗಿ ಹಣಖರ್ಚು ಮಾಡಬೇಕಾದುದನ್ನು ತಪ್ಪಿಸಬಹುದಾಗಿತ್ತು, ಇದನ್ನು ತಪ್ಪಿಸಲಿಲ್ಲ. ಸ್ಥಳೀಯ ಸಂಸ್ಥೆಗಳು ಮತ್ತು ಇತರ ಚುನಾವಣಾ ಕ್ಷೇತ್ರಗಳಿಂದ ಚುನಾವಣೆ ನಡೆಸುವುದಕ್ಕೆ ಪ್ರಾರಂಭ ಮಾಡಿದ್ದಾರೆ. ಆದರೆ ಚುನಾವಣೆಯಾಗಿ ಬರತಕ್ಕ ಜನರೂ, ಇಲ್ಲಿಂದ ಹೊರಗಿನಿಂದ ಬರತಕ್ಕ ಜನರೂ interim ಕೌನ್ಸಿಲಿನ ಸದಸ್ಯರಾಗುತ್ತಾರೆ. ಈ ಮಸೂದೆಯಲ್ಲಿ ಇದಕ್ಕೇನೂ ಏರ್ಪಾಡು ಮಾಡಿಲ್ಲ.

ಈ ಕರಡು ಮಸೂದೆಯ ಮೇಲೆ ಮಾತನಾಡುತ್ತಾ ಇನ್ನೊಂದು ಸಲಹೆ ಮಾಡಬೇಕಾದುದೇನೆಂದರೆ ಈಗಿನ ಮೈಸೂರು ಸಂಸ್ಥಾನದ ಪ್ರಜಾವರ್ಗ ಯಾವ ಸೌಕರ್ಯಗಳನ್ನು ಶಿಕ್ಷಣ ಕೇಂದ್ರದಲ್ಲಿ ಮತ್ತು ಇತರ ಕ್ಷೇತ್ರಗಳಲ್ಲಿ ಪಡೆಯುತ್ತಿದೆಯೋ ಆ ಸೌಕರ್ಯಗಳು ಮುಂದೆ ಇಲ್ಲಿನ ಪ್ರಜಾವರ್ಗಕ್ಕೆ ಕಡಿಮೆಯಾಗದಂತೆ ನೋಡಿಕೊಳ್ಳುವುದು ಅತ್ಯಗತ್ಯ. ಇದಕ್ಕೆ ತಕ್ಕ ಸಲಕರಣೆಗಳನ್ನು ಈಗಿನ ಮಂತ್ರಿ ಮಂಡಲ ತಿದ್ದುಪಡಿಗಳ ಮೂಲಕವೋ ಅಥವಾ ಕೇಂದ್ರ ಸರ್ಕಾರಕ್ಕೆ ಮನವಿಯ ಮೂಲಕವೋ ಮಾಡುತ್ತಾರೆಂದು ನಂಬಿದ್ದೇನೆ. ಒಂದು ಉದಾಹರಣೆ ಕೊಡುವುದಾದರೆ, ನಮ್ಮ ಮೈಸೂರು ಸಂಸ್ಥಾನದಲ್ಲಿ ನಾಲ್ಕು ಇಂಜಿನಿಯರ್ ಕಾಲೇಜುಗಳನ್ನೂ ಎರಡು ಮೆಡಿಕಲ್ ಕಾಲೇಜುಗಳೂ ಒಂದು ವ್ಯವಸಾಯದ ಕಾಲೇಜೂ ಇವೆ. ಇವೆಲ್ಲವೂ technical or professional ಕಾಲೇಜುಗಳು. ಈ ಹೊತ್ತು ಈ ಕಾಲೇಜುಗಳಿಗೆ ಪ್ರವೇಶವಿರುವ ವಿದ್ಯಾರ್ಥಿಗಳು ಈಗಿನ ಮೈಸೂರು ಸಂಸ್ಥಾನದ ಒಂದು ಕೋಟಿ ಪ್ರಜಾವರ್ಗದ ಮಕ್ಕಳು. ಹೊರಗಿನಿಂದ ಬರತಕ್ಕ ಒಂದು ಕೋಟಿ ಪ್ರಜಾವರ್ಗಕ್ಕೂ ಪ್ರಾಯಶಃ ಇವೇ ಕಾಲೇಜುಗಳು. ಪ್ರಾಯಶಃ ಒಂದು ವ್ಯವಸಾಯದ ಕಾಲೇಜು ಧಾರವಾಡದಲ್ಲಿದೆ. ಮಂಗಳೂರಿನಲ್ಲಿರುವುದು ಒಂದು ಖಾಸಗೀ ಮೆಡಿಕಲ್ ಕಾಲೇಜು, ಈ ಸೌಕರ್ಯಗಳನ್ನು ಹಂಚಿಕೊಳ್ಳುವುದರಲ್ಲಿ ಮೈಸೂರಿನ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಿಶೇಷ ತೊಂದರೆಯಾದೀತು. ಆದರೆ ಈ ಮಸೂದೆಯ 105ನೆಯ ಕಲಮಿನಲ್ಲಿ ಹೊರಗಿನಿಂದ ಬರತಕ್ಕ ಜನರಿಗೆ ಹಿಂದೆ ಯಾವ ಯಾವ ಶಾಲೆಗಳಿಗೆ ಕಾಲೇಜುಗಳಿಗೆ ಹೋಗುವುದಕ್ಕೆ ಅವಕಾಶವಿತ್ತೋ ಅದನ್ನು ಮಾಡಿಕೊಡುವುದಕ್ಕೆ ಅವಕಾಶ ಕಲ್ಪಿಸಲಾಗಿದೆ. ಇದನ್ನು ಅಕ್ಷರಶಃ ಪಾಲನೆ ಮಾಡಿಕೊಂಡು ಬಂದ ಹೊರತು ಅಲ್ಲಿನ ಜನರಿಗೆ ಸೌಕರ್ಯವಿಲ್ಲದಂತಾಗುತ್ತದೆ. ಯಾವಾಗ ನಮ್ಮೊಡನೆ ಬಂದು ಈ ಅವಿಭಕ್ತ ಕುಟುಂಬದಲ್ಲಿ ಸೇರುತ್ತಾರೋ ಆಗ ಈ ಸೌಕರ್ಯಗಳು ಅವರಿಗೆ ದೊರಕಬೇಕೆಂಬುದು ನ್ಯಾಯ, ನಮ್ಮ ಕಷ್ಟ ಸುಖಗಳಲ್ಲಿ ಭಾಗಿಗಳಾಗಬೇಕಾದುದು ಯೋಗ್ಯ. ಹಾಗಾಗಬೇಕಾದರೆ ಇಲ್ಲಿನ ಸೌಕರ್ಯಗಳನ್ನು ಹೆಚ್ಚಿಸಿಕೊಳ್ಳಬೇಕಾದುದೂ ಯೋಗ್ಯ. ಮೈಸೂರು ಸಂಸ್ಥಾನದ ಜನರಿಗೆ ಶಿಕ್ಷಣ ಸೌಕರ್ಯ, ವೈದ್ಯ ಸಹಾಯ ಜನಾರೋಗ್ಯ ಮತ್ತು ಇತರ ಸಾಮಾಜಿಕ ಸೌಲಭ್ಯಗಳು ಕಡಿಮೆಯಾಗದೇಯಿರುವ ಹಾಗೆ ಏರ್ಪಾಡು ಮಾಡುವುದು ಯೋಗ್ಯವೆಂದು ನನ್ನ ಭಾವನೆ.

ನಮ್ಮ ಭಾರತಕ್ಕೆ ಬಂದಿರತಕ್ಕ ಸ್ವಾತಂತ್ರ್ಯ, ಇದರಲ್ಲಿರತಕ್ಕ ಐಕ್ಯತೆ, ಭಾರತವು ಆರ್ಥಿಕ ಪುರೋಭಿವೃದ್ಧಿಯನ್ನು ಪಡೆದು ಪ್ರಪಂಚದ ಇತರ ರಾಷ್ಟ್ರಗಳ ಮಧ್ಯದಲ್ಲಿ ಅದು ಸಂಪಾದಿಸ ಬಹುದಾದ ಗಣ್ಯ ಸ್ಥಾನ, ಇವು ನಶಿಸಿಹೋಗುವಂತೆ ಮಾಡಬೇಕಾದರೆ ಅದಕ್ಕೆ ಶತ್ರುಗಳು ಹೊರಗಿನಿಂದ ಬರುವುದಿಲ್ಲ; ಯುದ್ಧ ಪ್ರಕರಣದಿಂದ ಆಗುವುದಿಲ್ಲ. ಅತ್ತ ಅಮೇರಿಕಾದೊಡನೆ ಇತ್ತ ಸೋವಿಯೆಟ್ ರಷ್ಯದೊಡನೆ ಸೇರತಕ್ಕದ್ದರಿಂದ ಆಗುವುದಿಲ್ಲ. ಅದರ ಶತ್ರುಗಳೇನಿದ್ದರೂ ಅಂತಶ್ಶತ್ರುಗಳು. ಅಂಥ ಶತ್ರುಗಳು ಎರಡಿವೆ. ಒಂದು ಭಾಷಾ ವ್ಯಾಮೋಹ; ಎರಡನೆಯದು ಜಾತಿಯ ವ್ಯಾಮೋಹ. ಯಾವ ರಾಷ್ಟ್ರವೂ ಭಾಷಾ ವ್ಯಾಮೋಹದಿಂದ, ಜಾತಿಯ ವ್ಯಾಮೋಹದಿಂದ ಸಂಪದ್ಯುಕ್ತವಾದ ಪ್ರಜಾ ಸತ್ತಾತ್ಮಕವಾದ ರಾಜ್ಯವಾಗುವುದಿಲ್ಲ. ದೈವವಶಾತ್ ಜಾತಿಯ ವಾದ ನಮಗೆ ಕನಸಾಗಿ ಹಿಂದಿನ ಮಾತಾಗಿದೆ. ಅದು ನಮ್ಮ ದೇಶದ ಸೌಭಾಗ್ಯವೆಂದು ನಾನು ಭಾವಿಸಿಕೊಂಡಿದ್ದೇನೆ. ಜಾತಿಯ ವಾದ ನಮ್ಮಲ್ಲಿ ನಾಶವಾಗುತ್ತಾ ಬರುತ್ತಿದೆ. ಆದರೆ ಈಗ ಭಾಷಾ ವ್ಯಾಮೋಹವೆನ್ನುವುದು ಮಾಯವಾಗಬೇಕಾಗಿದೆ. ಭಾಷೆಯ ವಿಷಯದಲ್ಲಿ ಅಭಿಮಾನವಿರಬೇಕಾದದ್ದು ಯೋಗ್ಯ. ಅದು ವ್ಯಾಮೋಹವಾಗಿ ಪರಿಣಮಿಸಬಾರದು. ಭಾಷಾಭಿಮಾನ ಭಾಷಾ ದುರಭಿಮಾನವಾಗಬಾರದು. ಯಾವತ್ತು ಭಾಷಾ ವ್ಯಾಮೋಹ ನಮ್ಮಲ್ಲಿ ಬರುತ್ತದೋ ಅಂದು ನಮ್ಮ ಬಲ ಕುಗ್ಗೀತು. ನಾನು ಈ ಹಿಂದಿನ 20 ವರ್ಷಗಳಿಂದಲೂ ಇಂಡಿಯಾ ದೇಶದ ಸ್ವಾತಂತ್ರ್ಯ ಉಳಿಯಬೇಕಾದರೆ, ಇಲ್ಲಿ ಏಕಧ್ವಜ, ಏಕಭಾಷೆ, ಏಕ ಸಂವಿಧಾನವಿರಬೇಕೆಂದು ಹೇಳುತ್ತಾ ಬಂದಿದ್ದೇನೆ. ಈಗ ಏಕಧ್ವಜವಿದೆ; ಏಕಸಂವಿಧಾನವಿದೆ; ಇವುಗಳ ಜೊತೆಗೆ ಏಕಭಾಷೆಯಿರಬೇಕು. ಇಲ್ಲದಿದ್ದರೆ ನಮ್ಮಲ್ಲಿ ಐಕ್ಯತೆ ಸಾಧನೆಯಾಗಲಾರದು. ಇದರಿಂದ ಪ್ರಾಂತ್ಯಭಾಷೆಗೆ ಯಾವ ವಿಧವಾದ ತೊಂದರೆಯೂ ಬರುವುದಿಲ್ಲ. ಏಕ ಭಾಷೆಯಿದ್ದರೂ ಪ್ರಾಂತ್ಯ ಭಾಷೆಯು, ರಾಷ್ಟ್ರಭಾಷೆ ಎಷ್ಟರಮಟ್ಟಿಗೆ ಬೆಳೆಯುತ್ತದೆಯೋ ಅದನ್ನು ಮೀರಿಸಿ ಬೆಳೆಯಬಲ್ಲದು. ನಮ್ಮ ಕನ್ನಡದಲ್ಲಿ ಅಂಥ ಶಕ್ತಿಯಿದೆ; ಅಷ್ಟು ಸತ್ವಶಾಲಿಯಾಗಿದೆ ಅದು. ಆದ್ದರಿಂದ ಭಾಷಾಪ್ರಾಂತ್ಯ ನಿರ್ಮಾಣಮಾಡಿದ ಪಕ್ಷಕ್ಕೆ ಯಾವ ಮಹೋದ್ದೇಶವನ್ನು ಸಾಧಿಸಬೇಕೆಂದು ಹೇಳಿದ್ದಾರೋ ಆ ಮಹೋದ್ದೇಶ ಸಾಧನೆಯಾಗುವುದಿಲ್ಲ. ಈ ದೃಷ್ಟಿಯಿಂದಲೇ ಇಂದು ಸಮ್ಮಿಶ್ರ ಜೀವನವನ್ನು ನಡೆಸಿಕೊಂಡು ಬರುತ್ತಿರತಕ್ಕ ಮೈಸೂರಿನ ಪ್ರಜಾವರ್ಗ ಈ ಒಂದು ಕೋಟಿಯೇ ಒಂದು ರಾಜ್ಯವಾಗಲಿ ಎಂದು ಹೇಳಿದಂಥಾದ್ದು. ಇಂದು ಹೊರಗಿನ ಜನರನ್ನು ಸರಿಸಿಕೊಂಡು ದಕ್ಷಿಣ ಪ್ರದೇಶವಾಗಲೆಂದು ಹೇಳುತ್ತಿದೆ. ಒಂದೇ ಸಂಪ್ರದಾಯವನ್ನು ಹೊಂದಿರತಕ್ಕ, ಒಂದು ಸಂಸ್ಕೃತಿಯಿರತಕ್ಕ ಜನರೆಲ್ಲರೂ ಸೇರಿ ಒಂದು ರಾಜ್ಯವಾಗುವುದಾದರೆ ಅಂಥ ರಾಜ್ಯವನ್ನು ಮಾಡಿಕೊಳ್ಳೋಣವೆಂದು ಹೇಳಿದ್ದಾರೆ. ಈ ಮಾತುಗಳನ್ನು ನಮ್ಮ ಮಾನ್ಯ ಮುಖ್ಯಮಂತ್ರಿಗಳು ಈ ಕರಡು ಮಸೂದೆಯನ್ನು ಸಭೆಯ ಮುಂದೆ ಸೂಚಿಸುತ್ತಾ ಹೇಳಿದ್ದಾರೆ. ಅದಕ್ಕಾಗಿ ಅವರು ಅಭಿನಂದನೀಯರು. ಆದರೆ ಅವರಿಗೆ ಕೊಟ್ಟ ಕಾಲಾವಕಾಶದಲ್ಲಿ ದಕ್ಷಿಣ ಪ್ರದೇಶದ ರಚನೆಗೆ ಎಷ್ಟು ಚುರುಕಾಗಿ ಕೆಲಸ ಮಾಡಬೇಕಾಗಿತ್ತೋ ಅಷ್ಟು ಚುರುಕಾಗಿ ಕೆಲಸ ಮಾಡುವ ಚಾತುರ್ಯವನ್ನು ತೋರಿಸಲಿಲ್ಲವಲ್ಲ ಎಂದು ನಾನು ವಿಷಾದ ಪಡುತ್ತೇನೆ. ಆದ್ದರಿಂದ ದಕ್ಷಿಣ ಭಾರತದ ನಿರ್ಮಾಣ, ಈ ನೂತನ ಸಂಸ್ಥಾನದ ನಿರ್ಮಾಣ ಎಷ್ಟು ಜಾಗ್ರತೆಯಾಗಿ ಆಗುತ್ತದೋ

ಅಷ್ಟೇ ಜಾಗ್ರತೆಯಾಗಿ ಬರುವಂತಾಗಲೆಂದು ಹಾರೈಸಿ, ಇಂಥ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ಜನರ ಮನಸ್ಸಿನಲ್ಲಿಯಾಗಲಿ ಹೊರಗಿನಿಂದ ಬರತಕ್ಕ ಜನರಲ್ಲಿಯಾಗಲಿ ಯಾವ ರೀತಿಯ ಮನಃಕಷಾಯ ಇರದೆ, ಯಾವ ಜನರೇ ಆಗಲಿ ಎಲ್ಲರೂ ಭಾರತೀಯರು, ನಮ್ಮ ಆತ್ಮೀಯರು, ನಮ್ಮ ಬಂಧುವರ್ಗದ ಜನ ಎಂಬ ಭಾವನೆ ಎಲ್ಲರಲ್ಲೂ ಮೂಡಲೆಂದು ಹಾರೈಸುತ್ತೇನೆ. ಆಗಲೇ ನಮ್ಮ ಜೀವನ ಮತ್ತು ಅವರ ಜೀವನ ಸುಗಮವಾಗಿ ಬೆಳೆದೀತು, ಆಗಲೇ ಭಾರತದ ಆರ್ಥಿಕ ಸಾಧನೆಯಾದೀತು. ಅಂಥ ಮನೋಭಾವ ನಮ್ಮ ಜನರಲ್ಲೂ ಹೊರಗಿನಿಂದ ಬರತಕ್ಕ ಜನರಲ್ಲೂ ಬೆಳೆದು ನಮ್ಮ ದೇಶಕ್ಕೆ ಮಂಗಳವುಂಟಾಗಲೆಂದು ಬಯಸುತ್ತೇನೆ.

## 3. ಬೆಳಗಾಂ ಜಿಲ್ಲಾಧಿಕಾರಿಯವರ ಸೂಚನೆಗಳನ್ನು ಆಚರಣೆಗೆ ತರದಿರುವ ಕುರಿತು ಪೌರಾಡಳಿತ ಸಚಿವರಾದ ಟಿ. ಸುಬ್ರಮಣ್ಯ ಅವರೊಂದಿಗೆ ನಡೆದ ಚರ್ಚೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಮೈಸೂರು ದೇಶದಲ್ಲೆಲ್ಲಾ ಕನ್ನಡದಲ್ಲಿಯೇ ಈ ನಿರ್ದೇಶಕ ಬೋರ್ಡ್‌ಗಳಿರಬೇಕೆಂದು ವ್ಯವಸ್ಥೆ ಮಾಡಿದ್ದು, ಬೆಳಗಾಂ ಒಂದು ಪ್ರಾಂತ್ಯದಲ್ಲಿ ಮಾತ್ರ ಮರಾಠಿ ಭಾಷೆಯಲ್ಲಿಯೇ ಇರುವಂತೆ ಮಾಡಲು ಕಾರಣವೇನು?

ಶ್ರೀ ಟಿ. ಸುಬ್ರಮಣ್ಯ: ಕಳೆದ ಮೂವತ್ತೊಂದು ವರ್ಷಗಳಿಂದಲೂ ಈ ನಾಮ ನಿರ್ದೇಶಕ ಬೋರ್ಡ್‌ಗಳನ್ನು ಮರಾಠಿಯಲ್ಲೇ ಹಾಕುತ್ತಿರುವುದರಿಂದ ಈ ಸಾರಿಯೂ ಹಾಕಿದ್ದಾರೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಬೆಳಗಾವಿನಲ್ಲಿರತಕ್ಕ ಕನ್ನಡಿಗರು ಈ ಬೋರ್ಡ್‌ಗಳು ಕನ್ನಡದಲ್ಲಿಯೇ ಇರಬೇಕೆಂದು ಕೇಳಿದ್ದರೇ?

ಶ್ರೀ ಟಿ. ಸುಬ್ರಮಣ್ಯ : ಒಬ್ಬರು ಮಾತ್ರ ಕೇಳಿದರು. ಆದರೆ ಡೆಪ್ಯುಟಿ ಕಮೀಷನರಿಗೆ ಆ ರೀತಿ ಮುನಿಸಿಪಾಲಿಟಿಯವರಿಗೆ ಮಾಡುವಂತೆ ಒಂದು ನಿರ್ದೇಶನ ಕೊಡುವುದಕ್ಕೆ ಅಧಿಕಾರವಿರಲಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಈ ವಿಚಾರದಲ್ಲಿ ಸರ್ಕಾರದವರು ಆದೇಶವೇನಾದರೂ ಕೊಟ್ಟಿದ್ದರೇ?

ಶ್ರೀ ಟಿ. ಸುಬ್ರಮಣ್ಯ: ಸರ್ಕಾರದವರು ನಾಮ ನಿರ್ದೇಶಕ ಬೋರ್ಡ್‌ಗಳನ್ನೂ ಹಾಕಬೇಕೆಂದು ನಿರ್ದೇಶ ಕೊಟ್ಟಿದ್ದರು.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಕನ್ನಡಿಗರೇ ಹೆಚ್ಚಾಗಿರುವ ಈ ಬೆಳಗಾಮಿನಲ್ಲಿ ಮಹಾರಾಷ್ಟ್ರ ಏಕೀಕರಣ ಸಮಿತಿಯವರೇ ಸೇರಿಕೊಂಡು ಬೇರೊಂದು ಸೆನ್ಸಸ್ (ಜನಗಣತಿ) ಮಾಡಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

---

3. ಬೆಳಗಾಂ ಜಿಲ್ಲಾಧಿಕಾರಿಯವರ ಸೂಚನೆಗಳನ್ನು ಆಚರಣೆಗೆ ತರದಿರುವ ಕುರಿತು ಪೌರಾಡಳಿತ ಸಚಿವರಾದ ಟಿ. ಸುಬ್ರಮಣ್ಯ ಅವರೊಂದಿಗೆ ನಡೆದ (20.3.1961 ರಂದು) ಚರ್ಚೆಯಲ್ಲಿ

ಶ್ರೀ ಟಿ. ಸುಬ್ರಮಣ್ಯ: ಅದು ಸರ್ಕಾರದವರ ಗಮನಕ್ಕೆ ಬಂದಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಬೆಂಗಳೂರು ನಗರದಂತ ಅನೇಕ ಭಾಷೆಗಳಿಂದ ಕೂಡಿದ ಜನಸಮುದಾಯವುಳ್ಳ ಪ್ರದೇಶದಲ್ಲಿ ಕನ್ನಡದಲ್ಲಿಯೇ ನಾಮ ಬೋರ್ಡ್‌ಗಳನ್ನು ಹಾಕಬೇಕೆಂದು ಹೇಳಿ, ಕನ್ನಡಿಗರೇ ಪ್ರಾಧ್ಯಾನವಾಗಿರುವ ಬೆಳಗಾಮಿನಲ್ಲಿ ಮಾತ್ರ ಮರಾಠಿಯಲ್ಲಿ ಹಾಕುವುದಕ್ಕೆ ಅವಕಾಶ ಕೊಟ್ಟಿರುವುದಕ್ಕೆ ಕಾರಣವೇನು?

ಶ್ರೀ ಟಿ. ಸುಬ್ರಮಣ್ಯ: ಸೆನ್ಸಸ್ ಕಮೀಷನರು ಅವರಿಗೆ ಕಳುಹಿಸಿದ ನಿರ್ದೇಶಕರ ಪತ್ರದಲ್ಲಿ ಅವರು ಇಂಥದೇ ಭಾಷೆಯಲ್ಲಿ ಈ ಬೋರ್ಡ್‌ಗಳನ್ನು ಹಾಕಬೇಕೆಂದು ಹೇಳುವುದಕ್ಕೆ ಅಧಿಕಾರವಿಲ್ಲ. ನಾಮ ಬೋರ್ಡ್‌ಗಳನ್ನು ಹಾಕಬೇಕೆಂದು ಮಾತ್ರ ಹೇಳಿತ್ತು. ಇಂಥ ಭಾಷೆಯಲ್ಲಿರಬೇಕೆಂದು ಹೇಳಲಿಲ್ಲ.

ಶ್ರೀ ವಿ.ಆರ್. ನಾಯ್ಡು: ಮರಾಠಿಗರು ಬೈಯ್ಯುತ್ತಾರೆ, ಸತ್ಯಾಗ್ರಹ ಹೂಡುತ್ತಾರೆ ಎಂದು ಭಯ ಬಿದ್ದು ಈ ರೀತಿ ಮಾಡಲೆಂದು ಬಿಟ್ಟಿರಾ?

ಶ್ರೀ ಟಿ. ಸುಬ್ರಮಣ್ಯ: ಸರ್ಕಾರದವರಿಗೆ ಅಂಥ ಹೆದರಿಕೆ ಯಾವುದೂ ಇಲ್ಲ. ಎಷ್ಟೋ ಸತ್ಯಾಗ್ರಹಗಳನ್ನು ಸರ್ಕಾರದವರು ಎದುರಿಸಿದ್ದಾರೆ.

ಶ್ರೀ ವಿ. ವೆಂಕಟಪ್ಪ: ಮೂವತ್ತೈದು ವರ್ಷಗಳಿಂದ ಮರಾಠಿಯಲ್ಲೇ ಹಾಕುತ್ತಿದ್ದರೆಂದು ಹೇಳಿದ್ದೀರಿ. ಆಗ್ಗೆ ಈ ಭಾಗ ಕರ್ನಾಟಕಕ್ಕೆ ಕನ್ನಡ ರಾಜ್ಯಕ್ಕೆ ಸೇರಿರಲಿಲ್ಲ ಅಲ್ಲವೇ?

ಶ್ರೀ ಟಿ. ಸುಬ್ರಮಣ್ಯ: ಈಗಲೂ ಕರ್ನಾಟಕಕ್ಕೆ ಸೇರಿಲ್ಲ. ಮೈಸೂರು ದೇಶದಲ್ಲಿದೆ ಅಷ್ಟೆ.

ಶ್ರೀ ಹಾರ್ನಹಳ್ಳಿ ರಾಮಸ್ವಾಮಿ: ಕನ್ನಡ ರಾಜ್ಯದ ಒಂದು ಭಾಗವಾದ ಬೆಳಗಾಮಿನಲ್ಲಿ ನಾಮ ನಿರ್ದೇಶಕ ಬೋರ್ಡುಗಳನ್ನು ಹಾಕಬೇಕೆಂದು ಕೇಳುವಾಗ ಅಲ್ಲಿನ ಕನ್ನಡಿಗರ ಹಿತರಕ್ಷಣೆಯ ದೃಷ್ಟಿಯಿಂದ ಕನ್ನಡದಲ್ಲಿಯೇ ಹಾಕಬೇಕೆಂದು ಆ ಮುನಿಸಿಪಾಲಿಟಿಯವರಿಗೆ ನಿರ್ದೇಶನ ಕೊಡಲಿಲ್ಲವೆ?

ಶ್ರೀ ಟಿ. ಸುಬ್ರಮಣ್ಯ : ಇವರಲ್ಲಿ ಭಾಷೆಯ ಪ್ರಶ್ನೆಯೇ ಇರಲಿಲ್ಲ. ಅಲ್ಲಿನ ಜನಗಣತಿಗೆ ಅನುಕೂಲವಾಗುವ ಹಾಗೆ ಮುನಿಸಿಪಾಲಿಟಿಯವರು ಬೋರ್ಡುಗಳನ್ನು ಹಾಕಬೇಕೆಂದು ಮಾತ್ರ ಇದೆ. ಎಲ್ಲಾ ಮುನಿಸಿಪಾಲಿಟಿಯವರಿಗೂ ಹೇಳಿದಂತೆ ಅವರಿಗೂ ಹೇಳಿದ್ದೆವು.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಜನಗಣತಿಯನ್ನು ತೆಗೆಯುವುದರಲ್ಲಿಯೂ ಸೆನ್ಸಸ್ \ ನಿರ್ದೇಶಕರಾಗಿ ಮರಾಠಿಗರನ್ನೇ ಹಾಕುವಲ್ಲಿ ಕನ್ನಡ ತಿಳಿದಿದ್ದವರನ್ನು ಹಾಕಿದ್ದೀರಾ?

ಶ್ರೀ ಟಿ. ಸುಬ್ರಮಣ್ಯ: ಕನ್ನಡಿಗರು, ಮರಾಠಿಗರು– ಎಲ್ಲರನ್ನು ನೇಮಕ ಮಾಡಿದ್ದೇವೆ. ಕನ್ನಡ ಬರೆದಿರುವುದರಿಂದ ಅವರಿಗೆ ತೊಂದರೆಯಾಯಿತೆಂದು ಯಾರೂ ರಿಪೋರ್ಟ್ ಮಾಡಿಲ್ಲ.

ಶ್ರೀ ಎಂ.ಪಿ. ಈಶ್ವರಪ್ಪ: ಬೆಳಗಾಂ ನಗರಸಭೆಯ ಆಡಳಿತ ಭಾಷೆ ಯಾವುದು?

ಶ್ರೀ ಟಿ. ಸುಬ್ರಮಣ್ಯ: ನಗರ ಸಭೆಯವರು ತಮಗೆ ಬೇಕಾದ ಭಾಷೆಯಲ್ಲಿ ನಡವಳಿಕೆ ಮಾಡಿಕೊಳ್ಳಬಹುದೆಂದಿದೆ.

ಶ್ರೀ ಎಂ.ಪಿ. ಈಶ್ವರಪ್ಪ : ಆಡಳಿತ ಭಾಷೆ ಯಾವುದು?

ಶ್ರೀ ಟಿ. ಸುಬ್ರಮಣ್ಯ: ಅವರು ಅಲ್ಲಿನ ನಿರ್ಣಯಗಳನ್ನು ತಮಗೆ ಬೇಕಾದ ಭಾಷೆಯಲ್ಲಿ ಮಾಡಿಕೊಳ್ಳಬಹುದಾಗಿದೆ. ಮುನಿಸಿಪಾಲಿಟಿ ಆಕ್ಟ್ ಪ್ರಕಾರ ಇಂಥ ಭಾಷೆಯಲ್ಲೇ ನಡೆಸಬೇಕೆಂದೇನೂ ಇಲ್ಲ.

ಶ್ರೀ ಎಂ.ಪಿ. ಈಶ್ವರಪ್ಪ : ನಮ್ಮ ರಾಜ್ಯ ಸರ್ಕಾರದವರು ತನ್ನ ವಿವಿಧ ಸರ್ಕಾರಿ ಖಾತೆಗಳಲ್ಲಿ ಹಾಗೂ ಸ್ಥಳೀಯ ಸಂಸ್ಥೆಗಳಲ್ಲಿ ಕನ್ನಡ, ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳನ್ನು ಬಿಟ್ಟು ಬೇರೆ ಭಾಷೆಯನ್ನು ಮಾನ್ಯ ಮಾಡಿದೆಯೇ?

ಶ್ರೀ ಟಿ. ಸುಬ್ರಹ್ಮಣ್ಯ: ಮಾಡಿದೆ.

ಶ್ರೀ ಎಂ.ಪಿ. ಈಶ್ವರಪ್ಪ: ಯಾವ್ಯಾವುದನ್ನು?

ಶ್ರೀ ಟಿ. ಸುಬ್ರಹ್ಮಣ್ಯ: ಕನ್ನಡ, ತೆಲುಗು, ಹೈದರಾಬಾದ್ ಪ್ರದೇಶದಲ್ಲಿ ಕೆಲವು ಸಂದರ್ಭಗಳಲ್ಲಿ ಉರ್ದು ಭಾಷೆಯಿರುವುದನ್ನು ಒಪ್ಪಿದ್ದೇವೆ. ಹಾಗೆಯೇ ಮರಾಠಿ ಉಪಯೋಗಿಸಿದ್ದನ್ನು ಮಾನ್ಯ ಮಾಡಿದ್ದೇವೆ.

ಶ್ರೀ ಎಂ.ಪಿ. ಈಶ್ವರಪ್ಪ: ನಮ್ಮ ರಾಜ್ಯದ ಆಡಳಿತ ಭಾಷೆ ಯಾವುದು?

ಶ್ರೀ ಟಿ. ಸುಬ್ರಹ್ಮಣ್ಯ: ಆಡಳಿತ ಭಾಷೆ ಕನ್ನಡ.

ಶ್ರೀ ಎಂ.ಪಿ. ಈಶ್ವರಪ್ಪ: ಮುನಿಸಿಪಲ್ ಕೌನ್ಸಿಲ್‌ನವರು ಅವರಿಗೆ ಬೇಕು ಬೇಕಾದ ಭಾಷೆಯನ್ನು ಉಪಯೋಗಿಸಬೇಕೆಂದು ಹೇಳಿದ್ದೀರಿ. ಎಷ್ಟು ದಿವಸ ಈ ರೀತಿಯಾಗಿ ಬಿಡುವುದಕ್ಕೆ ಸರ್ಕಾರಕ್ಕೆ ಇಚ್ಛೆಯಿದೆ. ಉರ್ದು, ಮರಾಠಿ ತೆಲುಗು–ಎಲ್ಲವನ್ನು ಇದೇ ರೀತಿ ಆಡಳಿತ ಭಾಷೆಯಾಗಿ ಮುಂದುವರಿಸುವುದಕ್ಕೆ ಅವಕಾಶ ಕೊಡುತ್ತೀರ? ಅಥವಾ ಯೂನಿಫಾರ್ಮಿಟಿ ತರುವುದಕ್ಕೆ ಪ್ರಯತ್ನಪಡುತ್ತೀರಾ?

ಶ್ರೀ ಟಿ. ಸುಬ್ರಹ್ಮಣ್ಯ: ಆಡಳಿತ ಭಾಷೆಯೆಂದು ಹೇಳುವುದಿಲ್ಲ. ಬಹು ಸಂಖ್ಯಾತರು ಯಾವ ಭಾಷೆಯಲ್ಲಿ ಇಡಬೇಕೆಂದು ಹೇಳುತ್ತಾರೋ ಅದರಲ್ಲಿ ಇಡುತ್ತಾರೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಮೈಸೂರು ಸರ್ಕಾರದ ಆಡಳಿತ ಭಾಷೆ ಕನ್ನಡ, ಇಂಗ್ಲೀಷ್ ಅಥವಾ ಹಿಂದಿ ಈ ಭಾಷೆಗಳಲ್ಲೇ ಸರ್ಕಾರಿ ಕಾಗದ ಪತ್ರಗಳೂ ನಡೆಯಬೇಕೆಂದಿದೆ. ಹೀಗಿರುವಾಗ ಸ್ಥಳೀಯ ಸಂಸ್ಥೆಗಳಲ್ಲೂ ಅದೇ ಭಾಷೆ ವ್ಯವಸ್ಥೆಯಿರಬೇಕೆಂದು ಸರ್ಕಾರದ ಗಮನದಲ್ಲಿದೆಯೇ?

ಶ್ರೀ ಟಿ. ಸುಬ್ರಹ್ಮಣ್ಯ: ಸರ್ಕಾರದಲ್ಲಿ ಆ ರೀತಿ ಇದೆ. ಸ್ಥಳೀಯ ಸಂಸ್ಥೆಗಳಲ್ಲಿ ಅದೇ ರೀತಿ ಇರಬೇಕೆಂದಿಲ್ಲ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಬೆಳಗಾಮಿನಲ್ಲಿ ಮಹಾರಾಷ್ಟ್ರ ಭಾಷೆಯಲ್ಲಿ ಬೋರ್ಡುಗಳನ್ನು ಯಾವುದೋ ಕೆಲವು ಬೀದಿಗಳಲ್ಲಿ ಹಾಕಿದ್ದಾರೋ ಅಥವಾ ಎಲ್ಲಾ ಬೀದಿ ಕೇರಿಗಳಲ್ಲೂ ಹಾಕಿದ್ದಾರೋ?

ಶ್ರೀ ಟಿ. ಸುಬ್ರಹ್ಮಣ್ಯ: ನಮಗೆ ಬಂದಿರುವ ರಿಪೋರ್ಟಿನ ಪ್ರಕಾರ ಎಲ್ಲಾ ಬೋರ್ಡುಗಳು ಮರಾಠಿಯಲ್ಲೆ ಇರಲಿಲ್ಲ.

– * –

# IV. ಸ್ಥಳೀಯ ಸರ್ಕಾರಗಳ ಕುರಿತು ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

## 1. ಮೈಸೂರು ನಗರ ಮತ್ತು ಪಟ್ಟಣ ಮುನಿಸಿಪಾಲಿಟಿಗಳ (ತಿದ್ದುಪಡಿ) ಕಾಯಿದೆ, 1955

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : (ಉಪಾಧ್ಯಾಯರ ಕ್ಷೇತ್ರ) – ಈ ಸಭೆಯ ಮುಂದೆ ಸ್ಥಳೀಯ ಸಂಸ್ಥೆಗಳ ಮಾನ್ಯ ಸಚಿವರು ಮಂಡಿಸಿರತಕ್ಕ ಮಸೂದೆಯನ್ನು ವಿರೋಧ ಮಾಡತಕ್ಕದ್ದಲ್ಲ ಪ್ರಜಾಪ್ರಭುತ್ವ ದೃಷ್ಟಿಯಿಂದ ತೀವ್ರವಾಗಿ ಪ್ರತಿಭಟಿಸಬೇಕಾಗಿದೆ. ಈ ಮಸೂದೆ, ಇದುವರೆಗೆ ನಮ್ಮ ಸಂಸ್ಥಾನದಲ್ಲಿರತಕ್ಕ ಎರಡು ಕಾನೂನುಗಳನ್ನು ತಿದ್ದುಪಡಿ ಮಾಡತಕ್ಕ ಪ್ರಯತ್ನ ಮಾಡಿದೆ. ಮೊದಲನೆಯದಾಗಿ 1951ನೆ ಇಸವಿಯಲ್ಲಿ ಮೈಸೂರು ಟೌನ್ ಮುನಿಸಿಪಾಲಿಟಿಗಳ ಕಾನೂನು ತಿದ್ದುಪಡಿ ಮಾಡತಕ್ಕದ್ದು. 1951ನೆ ಇಸವಿಯ ಈ ಮೈಸೂರು ಆಕ್ಟ್ ಏನು ಇದೆ ಅದನ್ನು ತಿದ್ದುಪಡಿ ಮಾಡತಕ್ಕ ಪ್ರಯತ್ನ ಇಲ್ಲಿ ನಡೆದಿದೆ. ಇಲ್ಲಿ ಏನು ತಿದ್ದುಪಡಿ ಮಾಡಬೇಕೆಂದು ಸರ್ಕಾರದವರು ಯೋಚನೆ ಮಾಡಿದ್ದಾರೆ ಎನ್ನುವುದನ್ನು ತಿಳಿಯಬೇಕಾಗಿದ್ದರೆ ಈ ಕಾನೂನಿನ 17ನೆಯ ಅನುಚ್ಛೇದವನ್ನು ತಿಳಿಯಬೇಕಾದ್ದು, ಅತ್ಯಗತ್ಯ. ಈ ಕಾನೂನಿನ 17ನೆಯ ಅನುಚ್ಛೇದ 'ಟರ್ಮ್ ಆಫ್ ಆಫೀಸ್' ಎನ್ನುವುದಕ್ಕೆ ಅನ್ವಯಿಸತಕ್ಕದ್ದು. ಸಾರ್ವಜನಿಕರಿಂದ ಚುನಾಯಿತರಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಅಂದರೆ ಟೌನ್ ಮುನಿಸಿಪಾಲಿಟಿಗಳು ಮತ್ತು ಸಿಟಿ ಮುನಿಸಿಪಾಲಿಟಿಗಳು ಇವುಗಳಲ್ಲಿರತಕ್ಕ ಸದಸ್ಯರ ಕಾಲಪರಿಮಿತಿ ಏನಿದೆ ಅದರ ಬದಲಾವಣೆಯನ್ನು ಮಾಡತಕ್ಕ ಅನುಚ್ಛೇದ.

ಈ ಪೌರಸಭೆಗಳ ಸದಸ್ಯರಾಗಿರತಕ್ಕವರು ಒಂದು ಬಾರಿ ಸಾರ್ವಜನಿಕರಿಂದ ಚುನಾಯಿತರಾಗಿ ಬಂದ ಮೇಲೆ ನಾಲ್ಕು ವರ್ಷಗಳ ಕಾಲ ಆಯಾ ಪೌರಸಭೆಗಳ ಸದಸ್ಯರಾಗಿದ್ದು ಸಾರ್ವಜನಿಕ ಸೇವೆಯನ್ನು ಸಲ್ಲಿಸುವುದಕ್ಕೆ ಅವಕಾಶವಿದೆ. ಆದರೆ ಸರ್ಕಾರ ಇವರ ಕಾರಣಗಳಿಗೋಸ್ಕರವಾಗಿ ಚುನಾವಣೆಗಳನ್ನು ಮುಂದುವರೆಸಿ ಅದೇ ಸದಸ್ಯರೇ ಸೇವೆಯನ್ನು ಸಲ್ಲಿಸಬಹುದು ಎಂಬ ಅಭಿಪ್ರಾಯ ಪಟ್ಟ ಪಕ್ಷದಲ್ಲಿ, ಒಂದು ವರ್ಷಕ್ಕೆ ಮೀರದೆ ಇರತಕ್ಕ ರೀತಿಯಲ್ಲಿ, ಆ ಕಾಲ ಪರಿಮಿತಿಯನ್ನು ಹೆಚ್ಚಿಸಬಹುದು ಎಂದು ಇದೆ. ಒಂದು ಬಾರಿ ಚುನಾಯಿತರಾಗಿರತಕ್ಕ ಸದಸ್ಯರು 4 ವರ್ಷಗಳ ಕಾಲ ಆ ಮುನಿಸಿಪಾಲಿಟಿಗಳಲ್ಲಿ ಸದಸ್ಯರಾಗಿರತಕ್ಕ ಕಾಲ ಪರಿಮಿತಿ ಯೋಗ್ಯವಾಗಿದೆ. ಯಾವುದಾದರೂ ಒಂದು ಕೆಲಸವನ್ನು ಕೈಗೊಂಡು ಜನರು ಹೇಳಿರತಕ್ಕ ಮಾತಿನ ಪ್ರಕಾರ ಜನಗಳಿಗೆ ಸೌಕರ್ಯವಾಗಿರತಕ್ಕ ಯೋಜನೆಗಳನ್ನು ಹಾಕಿಕೊಂಡು ಕೆಲಸ ಮಾಡತಕ್ಕ ಕಾಲ 1 ವರ್ಷಗಳು ಎಂದಿರತಕ್ಕದ್ದು ಯೋಗ್ಯ. ವಿಶೇಷ ಕಾರಣಗಳಿಗಾಗಿ ಒಂದು ವರ್ಷ ಕಾಲ ಹೆಚ್ಚು ಮಾಡತಕ್ಕ ಅಧಿಕಾರ ಸರ್ಕಾರಕ್ಕಿದೆ. ಈಗ ಈ ಅನುಚ್ಛೇದವನ್ನು ತಿದ್ದುಪಡಿ ಮಾಡಬೇಕು ಎಂದು ಸರ್ಕಾರದವರು ಈ ಮಸೂದೆಯಲ್ಲಿ ಸೂಚನೆ ಮಾಡುತ್ತಿದ್ದಾರೆ.

---

1. ಮೈಸೂರು ನಗರ ಮತ್ತು ಪಟ್ಟಣ ಮುನಿಸಿಪಾಲಿಟಿಗಳ (ತಿದ್ದುಪಡಿ) ಕಾಯಿದೆ. 1955 ರ ಕುರಿತಂತೆ 21.10.1955 ರಂದು ನಡೆದ ಚರ್ಚೆಯಲ್ಲಿ

ಕಾಲ ಪರಿಮಿತಿ ಮುಗಿದು ಹೋಗುವುದಕ್ಕೆ ಮೊದಲು ಸರ್ಕಾರ ಚುನಾವಣೆಗಳನ್ನು ನಡೆಸತಕ್ಕಂತ ಗುರುತರವಾದ ಕಾರ್ಯವನ್ನು ನೆರವೇರಿಸುವುದಿಲ್ಲ. ಎರಡನೆಯದಾಗಿ, ಒಂದು ವರ್ಷ ಕಾಲ ಇರುವ ಸದಸ್ಯರೇ ಮುಂದುವರೆಯಬಹುದೆಂದು ಹೇಳಿದ ಮೇಲೆ ಕೂಡ ಸರ್ಕಾರ ಚುನಾವಣೆಗೆ ಏರ್ಪಾಡು ಮಾಡದೆ ತಮ್ಮ ಇಷ್ಟ ಬಂದಂತೆ ವರ್ತಿಸಿದ್ದಾರೆ. ಸ್ವಾಮಿ, ಸಭಾಪತಿಗಳೇ ತಾವು ಪರ್ಯಾಲೋಚಿಸಬೇಕಾದ್ದು ಈ ಸರ್ಕಾರ ಮುನಿಸಿಪಾಲಿಟಿಗಳಿಗೆ ಸಂಬಂಧಪಟ್ಟ ಕಾನೂನನ್ನು ತಿದ್ದುಪಡಿ ಮಾಡುವುದು ಅಥವಾ ಮಾಡದಿರುವುದು ಮುಖ್ಯವಲ್ಲ. ಈ ಮಸೂದೆಯ ಮೂಲಕ ನಮ್ಮ ಸರ್ಕಾರ ಪ್ರಜಾ ಪ್ರಭುತ್ವಕ್ಕೆ ಸಂಚಕಾರ ತರುತ್ತಿದೆ, ತಿಲಾಂಜಲಿ ಕೊಡುತ್ತಿದೆ ಎಂಬುದು ಪ್ರಜಾಪ್ರಭುತ್ವ ಪ್ರಾತಿನಿಧ್ಯವನ್ನು ಹೊತ್ತಿರುವ ಯಾವ ಸರ್ಕಾರ ಕಾನೂನಿಗನುಸಾರವಾಗಿ ನಡೆಯದೆ ಕಾನೂನನ್ನು ತಿರಸ್ಕಾರಮಾಡಿ ಕಾನೂನಿನ ದೆಸೆಯಿಂದ ಒಂದು ವಿಶೇಷ ಅಧಿಕಾರವನ್ನು ಪಡೆದು ಪ್ರಜಾಭಿಪ್ರಾಯವನ್ನು ತೊರೆದು ತನ್ನಇಷ್ಟಬಂದಂತೆ ವರ್ತಿಸುತ್ತಿದೆ. ಈ ತಿದ್ದುಪಡಿಗಿಂತ ಹೆಚ್ಚಾಗಿ ಇದರ ಹಿಂದಿರುವ ಮನೋಸಕ್ತಿಯನ್ನು ತಿಳಿಯಬೇಕಾದ್ದೂ ಅತ್ಯಗತ್ಯ ಎಂದು ಭಾವನೆ ಮಾಡಿಕೊಂಡಿದ್ದೇನೆ. ಈ 4 ವರ್ಷಗಳ ಕಾಲದಲ್ಲಿ ಮುನಿಸಿಪಲ್ ಕೌನ್‌ಸಿಲ್ ಎಲೆಕ್ಷನ್ ಸಹ ನಡೆಸುವುದಕ್ಕೆ ಅವಕಾಶ ಮಾಡದ ಸರ್ಕಾರ ಇನ್ನಾವ ಕೆಲಸವನ್ನು ತಾನೇ ಸರಿಯಾಗಿ ಮಾಡೀತು ಎಂಬುದನ್ನು ಯೋಚನೆ ಮಾಡಿ ವಿಶೇಷ ಸಂದರ್ಭ ಒದಗಿದಾಗ ಇರುವ ಪ್ರತಿನಿಧಿಗಳನ್ನದರೂ ಮುಂದುವರಿಸದೆ ಸರ್ಕಾರಿ ಅದೇ ಅಧಿಕಾರಿಗಳ ಜವಾಬ್ದಾರಿಗೆ ವಹಿಸಿ ಹಿಂದೆ ನಿಗದಿ ಮಾಡಿದ ಒಂದು ವರ್ಷಕಾಲವಾದ ಮೇಲೂ ಸಹ ಚುನಾವಣೆ ನಡೆಸದೆ ಮುನಿಸಿಪಾಲಿಟಿಗಳನ್ನು ಸೂಪರ್‌ಸೀಡ್ ಮಾಡಿ ಪ್ರಜಾಪ್ರಭುತ್ವಕ್ಕೆ ತಿಲಾಂಜಲಿಯಿತ್ತು ಸರ್ಕಾರಿ ಅಧಿಕಾರಿಗಳನ್ನು ನೇಮಿಸಲು ಪ್ರಯತ್ನ ಮಾಡಿರುವುದು ದೇಶದ ದುರಾದೃಷ್ಟವೆಂದು ಭಾವಿಸುತ್ತೇನೆ.

ಇನ್ನೊಂದು ಪರ್ಯಾಲೋಚಿಸಬೇಕಾದ ವಿಷಯ ಇಂಥ ಪ್ರಕರಣ ಸಾಮಾನ್ಯ ಕಾಲಗಳಲ್ಲಿ ಒದಗುವುದಿಲ್ಲ, ವಿಶೇಷ ಕಾಲಗಳಲ್ಲಿ ಒದಗುತ್ತದೆ. ಇದಕ್ಕೆ ಪೀರಿಯಡ್ಸ್ ಆಫ್ ಎಮರ್ಜೆನ್ಸಿ ಎಂದು ಹೇಳುತ್ತಾರೆ. ಇಂಥ ವಿಶೇಷ ಪರಿಸ್ಥಿತಿಯಾದರೂ ಈಗ ನಮ್ಮ ದೇಶದಲ್ಲೇನು ಒದಗಿದೆಯೆಂಬುದನ್ನು ಸೂಕ್ಷ್ಮವಾಗಿ ಮಾನ್ಯ ಮಂತ್ರಿಗಳು ಮಸೂದೆಯನ್ನು ಮಂಡಿಸುವಾಗ ಹೇಳಬೇಕಾಗಿತ್ತು. ಮಾನ್ಯ ಸ್ನೇಹಿತರು ಒಬ್ಬಿಬ್ಬರು ಹೇಳಿದ ಮೇಲೆ ಯಾವುದಾದರೂ ಮುನಿಸಿಪಾಲಿಟಿ ಚುನಾವಣೆ ನಡೆಯಬೇಕಾಗಿದ್ದು ಸದಸ್ಯರ ಕಾಲ ಪರಿಮಿತಿ ಮೀರುವುದಾದರೆ ಚುನಾವಣೆ ನಿಲ್ಲಿಸಿ ಸರ್ಕಾರಿ ಅಧಿಕಾರದಲ್ಲಿರುವವರನ್ನು ನೇಮಿಸಿ ಸ್ಥಳೀಯ ಸರ್ಕಾರ ಸಂಸ್ಥೆಯೇನಿದೆಯೋ ಅದನ್ನು ನಿರ್ನಾಮ ಮಾಡುವ ಪ್ರಯತ್ನ ನಡೆಯುತ್ತಿದೆಯೋ ಏನೋ ಎಂಬ ಶಂಕೆ ಬಂದಿದೆ. ಈ ದಿವಸ 19ನೆಯ ತಾರೀಖು ಮೈಸೂರು ಸರ್ಕಾರದವರು ಸಾಹರು ಮಾಡಿರುವ ನೋಟಿಫಿಕೇಷನ್ ನೋಡುವ ಪಕ್ಷದಲ್ಲಿ ಈ ಸಂದೇಹ, ಕಳವಳ ಮನಸ್ಸಿನಲ್ಲಿ ಕೆಲವರಿಗಿರುವುದು ಬೇರೂರಿ ನಿಲ್ಲುವ ಪ್ರಕರಣವಿದೆ.

ಅಕ್ಟೋಬರ್ 20ರ ದಿವಸ ತಿದ್ದುಪಡಿಯಾಗಿರುವ ಮಸೂದಾ ಕಾನೂನು ಮುಂದೆ ಜಾರಿಗೆ ಬಂದು ಬೇರೂರಿ ಮುನಿಸಿಪಾಲಿಟಿಗಳಿಗೆ ಯಾವ ರೀತಿ ಅನರ್ಥವಾಗುತ್ತದೆಯೋ ಎಂಬ ಬೀತಿ

ಸಹ ಈ ನೋಟಿಫಿಕೇಷನ್‌ನಿಂದ ಕಂಡು ಬರುತ್ತಿದೆ. ಇದರಿಂದ ಇರುವ ಕಳವಳ, ಸಂದೇಹ ಹೆಚ್ಚಾವುದಕ್ಕೆ ಅವಕಾಶವಿದೆ.

ಇನ್ನೊಂದು ಮನಸ್ಸಿನಲ್ಲಿಟ್ಟುಕೊಳ್ಳಬೇಕಾದ್ದು ನಾವು ಸರ್ಕಾರ, ಈ ಹೊತ್ತು ಡೆಮಾಕ್ರಸಿ ಎಂದು ಕರೆಯುವುದು ಪಾರ್ಲಿಮೆಂಟರಿ ಟೈಪ್ ಆಫ್ ಇನ್‌ಸ್ಟಿಟ್ಯೂಷನ್ ಬಂದಿರುವಾಗ ಪ್ರಜಾಪ್ರತಿನಿಧಿಗಳ ಒಂದು ಅಭಿಪ್ರಾಯಕ್ಕೆ ತಲೆದೂಗಿ ಕೆಲಸ ಮಾಡುವುದು ಸರ್ಕಾರದ ಕರ್ತವ್ಯ. ಪ್ರಜೆಗಳ ಅಭಿಪ್ರಾಯ. ಪ್ರಜಾ ಪ್ರತಿನಿಧಿಗಳ ಮೂಲಕ ಸರ್ಕಾರಕ್ಕೆ ತಿಳಿಯುತ್ತಿರುತ್ತದೆ. ಅದಕ್ಕೆ ತಕ್ಕಂತೆ ಈ ಕಾನೂನು ಕೂಡ ಆಗಾಗ್ಗೆ ಬದಲಾವಣೆಯಾಗಿದೆ. ಕಾನೂನು ಪ್ರಕಾರ ಕೆಲಸ ಕಾರ್ಯಗಳನ್ನು ನೆರವೇರಿಸಿ ಆಡಳಿತವನ್ನು ನಡೆಸುವುದಕ್ಕೆ ಮೈಸೂರು ಸರ್ಕಾರ ಈ ಹೊತ್ತು ಏಕೆ ಸಮರ್ಥವಾಗಿಲ್ಲ ಎಂದು ಪ್ರಶ್ನೆ ಮಾಡಬೇಕಾಗಿದೆ. ಎಲೆಕ್ಷನ್ ನಡೆಸುವುದಕ್ಕೆ ಬಂದಿರುವ ತೊಂದರೆಯಾದರೂ ಏನು? ಈಗ ಯುದ್ಧದ ಕಾಲವಾಗಿರುವ ಪಕ್ಷದಲ್ಲಿ ಎಲೆಕ್ಷನ್ ನಡೆಸುವುದಕ್ಕಾಗುವುದಿಲ್ಲ ಎಂದು ಹೇಳಬಹುದು; ಬಾಂಬ್ ಹಾಕುವಾಗ ಎಲೆಕ್ಷನ್ ನಡೆಸುವುದಕ್ಕಾಗುವುದಿಲ್ಲ ಎಂದು ಹೇಳಬಹುದು. ಶಾಂತಿ ನೆಲಸಿರುವಾಗ, ಜನ ಮುಖ್ಯರಾಗಿ ಯೋಗ್ಯವಾಗಿ ನಿತ್ಯ ಜೀವನ ನಡೆಸಿಕೊಂಡು ಹೋಗುತ್ತಿರುವಾಗ ಸತ್ಪುರುಷವಾಗಿರುವ ಜನ ಮೈಸೂರು ದೇಶದಲ್ಲಿರುವಾಗ, ಜನಾಭಿಪ್ರಾಯಕ್ಕೆ ಮನ್ನಣೆ ಕೊಡದೆ ಮುನಿಸಿಪಾಲಿಟಿಗಳನ್ನು ರದ್ದು ಮಾಡಿ ಸ್ಪೆಷಲ್ ಆಫೀಸರುಗಳನ್ನು ನೇಮಕ ಮಾಡುತ್ತೇವೆಂದು ಹೇಳುವಂಥ ಪರಿಸ್ಥಿತಿಯಾದರೂ ಏನಿದೆ? ಇದಕ್ಕೆ ಕಾರಣವೇನು? ಇದನ್ನು ಮಾನ್ಯ ಸಚಿವರು ಈ ಸಭೆಯ ಪ್ರತಿನಿಧಿಗಳಿಗೆ ತಿಳಿಸಬೇಕಾದ್ದೂ ಅತ್ಯಗತ್ಯ.

ಇನ್ನೊಂದು, ಇಂಥ ಮಸೂದೆಗಳು, ತಿದ್ದುಪಡಿಗಳು ಆಗಾಗ ಈ ಮಾರ್ಗದಲ್ಲಿ ಬರುವುದನ್ನು ನೋಡಿದರೆ ಮಲೆನಾಡಿನಲ್ಲಿರುವ ಜಿಗಣೆಯ ವಿಷಯ ಜ್ಞಾಪಕಕ್ಕೆ ಬರುತ್ತದೆ. ಆ ಜಿಗಣೆಗಳು ಮೈ ಮೇಲೆ ಅಂಟಿಕೊಂಡಿರುವುದೇ ಗೊತ್ತಾಗುವುದಿಲ್ಲ. ಆದರೆ ಅಲ್ಪಕಾಲದಲ್ಲೇ ಮನುಷ್ಯನಲ್ಲಿರುವ ರಕ್ತವನ್ನು ವಿಪರೀತವಾಗಿ ಹೀರಿಬಿಡುತ್ತದೆ. ಈ ಮಸೂದೆ ಕೂಡ ಮಲೆನಾಡಿನ ಜಿಗಣೆಯೋಪಾದಿಯಲ್ಲಿರುವಂತೆ ಕಾಣುತ್ತಿದೆ. ಇದರ ಪ್ರಭಾವ, ಶಕ್ತಿ ಎಷ್ಟು ಇದರಿಂದ ದೇಶಕ್ಕಾಗಬಹುದಾದ ಅನರ್ಥವೇನು, ಎಷ್ಟರ ಮಟ್ಟಿಗೆ ಪ್ರಜಾ ಪ್ರಭುತ್ವಕ್ಕೆ ದ್ರೋಹವೆಸಗುತ್ತದೆ. ಎಂಬುದನ್ನು ಮನಗಾಣಬೇಕು. ಇದು ಕಾನೂನು ಕಡತಕ್ಕೆ ಸೇರಿದಾಗ ಇದರಿಂದ ದೊರೆಯುವ ವಿಶೇಷ ಅಧಿಕಾರ ಸರ್ಕಾರದಕೈಲಿ ನಿಂತಾಗ ಜನರ ಮನೋಭಿಪ್ರಾಯವನ್ನು ತುಚ್ಛವಾಗಿ ನೋಡಿ ಸರ್ಕಾರ ರಚಿಸುವ ಕಾಲ ಬರುತ್ತದೆ. ಮೊದಲನೆಯ ಮಹಾ ಯುದ್ಧವಾದ ಮೇಲೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ, ಪ್ರಜಾಪ್ರಭುತ್ವವಿರುವ ದೇಶಗಳಲ್ಲಿ ಇಂಥ ಕಾನೂನು ಬಂದು ಸರ್ವಾಧಿಕಾರ ಪ್ರಜಾಪ್ರಭುತ್ವ ನಿಂತು ಹೋದುದು ಎಲ್ಲರೂ ಅರಿತಿರಬಹುದು. ಈ ದೃಷ್ಟಿಯಿಂದ ಕೂಡ ಈ ಮಸೂದೆ ಈ ಸಭೆಯ ಒಪ್ಪಿಗೆ ಅನರ್ಹವಾದುದೆಂದು ಘಂಟಾಘೋಷವಾಗಿ ಹೇಳಬೇಕಾಗಿದೆ. ಮತ್ತೊಂದು ಮಾತು ತಮ್ಮ ಮೂಲಕ ಮಾನ್ಯ ಸ್ಥಳೀಯ

ಸಂಸ್ಥೆಗಳ ಸಚಿವರಲ್ಲಿ ವಿಜ್ಞಾಪನೆ ಮಾಡಿಕೊಳ್ಳುವುದಾದರೆ ಈ ಸ್ಥಳೀಯ ಸರ್ಕಾರವೆಂಬುದು ಮೈಸೂರು ದೇಶದಲ್ಲಿ ಹೂವಿನ ಸರ ಎತ್ತಿದ ಹಾಗೆ ಅಷ್ಟು ಸೊಗಸಾಗಿ 40 ವರ್ಷಗದವರೆಗೆ ಚೆನ್ನಾಗಿ ಕೆಲಸ ನಡೆಸಿಕೊಂಡು ಬಂತು. ಈ ಸ್ಥಳೀಯ ಸರ್ಕಾರದ ಸಂಸ್ಥೆಗಳಲ್ಲಿ ಕೆಲಸ ಮಾಡಿರುವ ಜನರಿಗೆ ಪ್ರಜಾಪ್ರತಿನಿಧಿಗಳಾಗಿ ಸ್ಥಳೀಯ ಅಭಿಮಾನವಿರುವ ಜನ ಯಾರು ಅಲ್ಲಿ ಕೆಲಸ ಮಾಡುತ್ತಿದ್ದರೋ ಅವರಿಗೆ ಈ ದಿವಸ ಅವಕಾಶ ತಪ್ಪಿಸಿ ಸರ್ಕಾರದ ಮೂಲಕ, ಅಧಿಕಾರಿಗಳ ಮೂಲಕ ಈ ಸಂಸ್ಥೆಗಳ ಆಡಳಿತ ನಡೆಸುವಂತೆ ಏರ್ಪಡಿಸಿ, ಅಪಚಾರ ಮಾಡಿ, ಈ ಕೆಲಸ ಮಾಡುತ್ತೇವೆಂದು ಸರ್ಕಾರ ಹೇಳುವುದು ಯೋಗ್ಯವಾದುದಲ್ಲ, ಈ ತಿದ್ದುಪಡಿಯನ್ನು ಈ ಸಭೆ ಅನುಮೋದನೆ ಮಾಡಬಾರದು, ಪ್ರತಿಭಟಿಸಬೇಕು ಎಂದು ತಮ್ಮ ಮೂಲಕ ನನ್ನ ಮಾನ್ಯ ಮಿತ್ರರಿಗೆ ಭಿನ್ನೈಸುತ್ತೇನೆ.

## 2. ಮೈಸೂರು ರಾಜ್ಯದಲ್ಲಿ ಅನುವಂಶಿಕ ಗ್ರಾಮ ನೌಕರಿಗಳ ರದ್ದಿಯಾತಿ ಮಸೂದೆ 1959ರ ಕುರಿತಂತೆ ಚರ್ಚೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ: ಮಾನ್ಯ ಸಭಾಪತಿಗಳೇ, ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಈ ಸಭೆಯ ಮುಂದೆ ಮಂಡಿಸಿರತಕ್ಕ ಕಾನೂನು ಏನಿದೆ ಅದು ಮೈಸೂರು ರಾಜ್ಯದಲ್ಲಿ ಅನುವಂಶಿಕ ಗ್ರಾಮ ನೌಕರಿಗಳ ರದ್ದಿಯಾತಿಗೆ ಸಂಬಂಧಪಟ್ಟ 1959ನೇ ಇಸವಿಯ ವಿಧೇಯಕವಾಗಿದೆ. ನಮ್ಮ ರಾಷ್ಟ್ರದ ಇವತ್ತಿನ ಪರಿಸ್ಥಿತಿಯಲ್ಲಿ ನಮ್ಮ ರಾಜ್ಯ ಸರ್ಕಾರ ಎದುರಿಸಬೇಕಾಗಿರತಕ್ಕ ಪ್ರಬಲವಾದ ಸಮಸ್ಯೆಗಳ ದೃಷ್ಟಿಯಿಂದ ಇದು ಕೇವಲ ಅನಗತ್ಯ. ಈ ವಿಧೇಯ ಇವತ್ತು ಅಕಾಲಿಕವಾಗಿದೆ, ಅನುಚಿತವಾಗಿದೆ. ದೇಶದಲ್ಲಿ ಇದು ಒಂದು ವಿಧವಾದ ಅತೃಪ್ತಿಯನ್ನುಂಟುಮಾಡುವುದು ಎಂಬುದಾಗಿ ತಮ್ಮ ಮೂಲಕ ವಿನಂತಿ ಮಾಡಿಕೊಳ್ಳುತ್ತೇನೆ. ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಅನೇಕ ವರ್ಷಗಳಿಂದಲೂ ನನ್ನ ಪರಮ ಮಿತ್ರರು. ಅವರು ಸಾಧಿಸಬೇಕೆಂದು ತೀರ್ಮಾನ ಮಾಡಿರತಕ್ಕ ನಾಲ್ಕು ಪುರುಷಾರ್ಥಗಳಲ್ಲಿ ಇದು ಮೂರನೆಯ ಪುರುಷಾರ್ಥ ಸಾಧನೆ. ಮೊಟ್ಟ ಮೊದಲನೆಯದಾಗಿ ಪರ್ಸನಲ್ ಇನಾಂ ಅಬಾಲಿಷನ್ ಆಕ್ಟನ್ನು ತಂದುದು ಮೊದಲನೆಯ ಪುರುಷಾರ್ಥ ಸಾಧನೆ ಮಾಡಿದುದೆಂದು ನಾನು ಅಂದುಕೊಂಡಿದ್ದೇನೆ. ಚಾರಿಟಬಲ್ ಅಂಡ್ ರಿಲಿಜಿಯಸ್ ಇನಾಂ ಅಬಾಲಿಷನ್ ಆಕ್ಟನ್ನು ಜಾರಿಗೆ ತಂದುದು ಎರಡನೆಯ ಪುರುಷಾರ್ಥ ಸಾಧನೆ. ಹಾಗೆಯೇ ಈ ಅನುವಂಶಿಕ ಗ್ರಾಮಾಧಿಕಾರಿಗಳು ಮತ್ತು ಗ್ರಾಮ ನೌಕರರು ಯಾರು ಇದ್ದಾರೆ ಅವರು ಈ ವಿಧೇಯಕದ ಪ್ರಕಾರ ಅನುವಂಶಿಕವಾಗಿ ಗ್ರಾಮ ಸೇವೆಯನ್ನು ನಮ್ಮ ರಾಜ್ಯದಲ್ಲಿ ಪರಂಪರೆಯಾಗಿ ಕೇವಲ ಹತ್ತಾರು ವರ್ಷಗಳ ಕಾಲದಿಂದ ಮತ್ತು ಶತಮಾನಗಳ ಕಾಲದಿಂದ ಯಾರು ನಡೆಸಿಕೊಂಡು ಬಂದಿದ್ದಾರೋ ಅವರ ಒಂದು ಹಕ್ಕು ಏನಿದೆ ಅದನ್ನು ರದ್ದಿಯಾತಿ ಮಾಡತಕ್ಕದ್ದು ಅವರ ಮೂನೆಯ ಪುರುಷಾರ್ಥ ಸಾಧನೆ. ಇನ್ನು ಭೂಸುಧಾರಣೆಯಾದ ಪಕ್ಷದಲ್ಲಿ

---

2. ರದ್ದಿಯಾತಿ ಮಸೂದೆ 1959 ಕುರಿತಂತೆ (8.9.1960 ಮತ್ತು 9.9.1960) ರಂದು ನಡೆದ ಚರ್ಚೆಯಲ್ಲಿ

ಅವರಜನ್ಮದ ನಾಲ್ಕನೆಯ ಪುರುಷಾರ್ಥ ಜೀವನ್ಮುಕ್ತ ಆದ ಹಾಗೆಯೇ ಎಂದು ನಾನು ಭಾವಿಸಿ ಕೊಂಡಿದ್ದೇನೆ.

ನಾನು ಸುಮಾರು 35 ವರ್ಷಗಳಿಂದಲೂ ಅವರಮಾನಸಿಕ ಭಾವನೆಯನ್ನು ಚೆನ್ನಾಗಿ ತಿಳಿದುಕೊಂಡಿರುವವನು. ಅವರಷ್ಟೇ ಅವರ ಸ್ವರೂಪವನ್ನು ಸಹ ನಾನು ತಿಳಿಸಿದ್ದೇನೆ.

ನಾನು ಹೇಳುವ ಉದ್ದೇಶವನ್ನು ಅವರು ಮನಸ್ಸಿನಲ್ಲಿಯೇ ತಿಳಿದಿದ್ದಾರೆ. ಅವರು ಸಾತ್ವಿಕರು, ಆದರೆ ಈಗ ಇವರು ಮಾಡುತ್ತಿರುವ ಸಾಧನೆ ಬಹಳ ದೊಡ್ಡದು ಎಂದು ಸಾಧಿಸಲಿಕ್ಕೆ ಹೊರಟಿದ್ದಾರೆ, ಯಾವ ಉದ್ದೇಶ ಸಾಧನೆಯನ್ನು ಬೆಳೆಸುತ್ತಿದ್ದೇವೆ ಎಂಬುದನ್ನು ಅವರು ಸ್ವಲ್ಪ ಸೂಕ್ಷ್ಮವಾಗಿಯಾದರೂ ಆಲೋಚನೆ ಮಾಡಬೇಕಾಗಿತ್ತು. ಆ ರೀತಿ ಉದ್ದೇಶ ಯಾವುದು ಎಂಬುದನ್ನು ಆಲೋಚನೆ ಮಾಡಿದ್ದ ಪಕ್ಷದಲ್ಲಿ ಬಹಳ ಚೆನ್ನಾಗಿತ್ತು. ಮುಖ್ಯವಾಗಿ ಈ ವಿಧೇಯಕ ಅಕಾಲಿಕವಾಗಿದೆ. ಅಸಾಧುವಾಗಿದೆ ಎಂದು ನನಗನ್ನಿಸುತ್ತದೆ. ಒಂದು ದೃಷ್ಟಿಯಿಂದ ನೋಡಿದರೆ ಮಾನ್ಯ ಶ್ರೀ ಕಡಿದಾಳ್ ಮಂಜಪ್ಪನವರು ಕೋಪ ಮಾಡಿಕೊಳ್ಳದೇ ಹೋದ ಪಕ್ಷದಲ್ಲಿ ನಾನು ಒಂದು ಮಾತನ್ನು ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಗ್ರಾಮ ನೌಕರರುಗಳಿಗಾಗಿರತಕ್ಕ ಆಗ್ರಹಕ್ಕೆ ಇವರು ಪಾತ್ರರಾಗಿದ್ದಾರೆಂದು ಹೇಳಬೇಕು. ಸಾಮಾನ್ಯವಾಗಿ ಅಧಿಕಾರಿಗಳಾಗಿರುವವರು ಇಂತಹ ವಿಷಯವನ್ನು 1867ಎನ್ನತಕ್ಕ ಪುಸ್ತಕದಿಂದ ಓದಿ ತಿಳಿಯಬೇಕು. ಅದರಲ್ಲಿ ಏನು ಹೇಳಿದೆಯೆಂದರೆ ಸೂರ್ಯ ಹುಟ್ಟಿದ ಮೇಲೆ ಸೂರ್ಯ ಹುಟ್ಟಿಲ್ಲ ಎಂದು ಹೇಳಿಸುತ್ತಾರೆ. ಸೂರ್ಯ ಹುಟ್ಟಿಲ್ಲ ಎಂದು ಜನ ಹೇಳಿದರೂ ತಮ್ಮದು ಅಸತ್ಯವೆಂದು ಹೇಳುತ್ತಾರೆ.

ಸ್ಟೇಟ್‌ಮೆಂಟ್ ಆಫ್ ಅಬ್ಜಕ್ಟ್ಸ್ ಅಂಡ್ ರೀಸನ್ಸ್‌ನಲ್ಲಿ ಏನು ಹೇಳಿದ್ದಾರೆ ಎಂದರೆ ಅದರಲ್ಲಿ ವಿಶೇಷವಾಗಿ ಹೇಳಿರತಕ್ಕಂಥಾದ್ದು ಆಧುನಿಕ ಮನೋಭಾವನೆಗೆ ಹೊಂದಿಕೊಂಡು ಹೋಗುವುದು. ಆಧುನಿಕ ಮನೋಭಾವನೆಯನ್ನು ನಮ್ಮ ಜೀವನದಲ್ಲಿ ತರುವುದಕ್ಕೋಸ್ಕರ ಈ ಅನುವಂಶಿಕ ಗ್ರಾಮಾಧಿಕಾರಿಗಳು ಯಾರು ಇದ್ದಾರೆ ಅವರಹಕ್ಕನ್ನು ರದ್ದುಮಾಡಬೇಕೆಂದು ಹೇಳಿರುವುದನ್ನು ನಾನು ಪ್ರಶ್ನೆ ಮಾಡುತ್ತೇನೆ. ಮಾಡ್ರನ್ ಸ್ಪಿರಿಟ್ ಎಂದು ಕರೆದಿದ್ದಾರೆ. ಯಾವುದು ಆಧುನಿಕ ಮನೋಭಾವ ಎಂದು ನಾನು ಪ್ರಶ್ನೆ ಕೇಳುತ್ತೇನೆ. 35–40 ನಿಮಿಷಗಳ ಕಾಲ ಮಾನ್ಯ ಮಂತ್ರಿಗಳು ಭಾಷಣ ಮಾಡಿದರು. ಆದರೆ ಅದರಲ್ಲಿ ಈ ಆಧುನಿಕ ಮನೋಭಾವನೆಯನ್ನು ಹೇಳಲಿಲ್ಲ. ಆಧುನಿಕ ಮನೋಭಾವ ಎನ್ನುವುದು ಹೇಗಿದೆ ಎಂದರೆ ಧರ್ಮಬಾಹಿರವಾದ ಜೀವನವನ್ನು ನಡೆಸಿಕೊಂಡು ಹೋಗಬೇಕು ಎಂಬುದು ಅದೇ ಆಧುನಿಕ ಮನೋಭಾವ. ಲಿಪ್‌ಸ್ಟಿಕ್ ಹಾಕಿಕೊಂಡು ಬೀದಿಯಲ್ಲಿ ಹೋಗುವುದು ಆಧುನಿಕ ಮನೋಭಾವನೆ? ತಾವು ಇಂಥಾ ಸೊಗಸಾದ ಮತ್ತು ಸೌಂದರ್ಯವಾಗಿರತಕ್ಕ ಸ್ಥಳದಲ್ಲಿ ಅಸನಾರೂಢರಾಗಿರತಕ್ಕದ್ದು ಆಧುನಿಕ ಮನೋಭಾವವೆ? ಅಥವಾ ದೇಶದ ಜೀವನವನ್ನು ಸಮಾಜ ಜೀವನವನ್ನು ಕುಟುಂಬ ಜೀವನವನ್ನು ಛಿದ್ರ ಛಿದ್ರವಾಗಿ ಮಾಡಿರತಕ್ಕ ಜನರ ಮನೋಭಾವ ಆಧುನಿಕ ಮನೋಭಾವವೆ? ಹಾಗಾದರೆ ಯಾವುದು ಆಧುನಿಕ ಮನೋಭಾವ. ನನ್ನ ದೃಷ್ಟಿಯಲ್ಲಿ ಭರತ ಖಂಡಕ್ಕೆ ಲೋಕೋತ್ತರವಾಗಿರತಕ್ಕ ರೀತಿಯಲ್ಲಿ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟ ಮಹಾ ತಪಸ್ವೀ

ಗಾಂಧೀಜಿಯವರು ಯಾವ ಮನೋಭಾವನೆಯನ್ನು ತಾಳಿದ್ದರೋ ಅದು ಸಮಾಜ ಜೀವನ. ಗ್ರಾಮ ಜೀವನದಲ್ಲಿ ಅವರಿಗೆ ಅದು ಆಧುನಿಕ ಮನೋಭಾವವೆಂದು ನಾನು ತಿಳಿದಿದ್ದೇನೆ. ಶ್ರೀಮಾನ್ ಈಶ್ವರಪ್ಪನವರು ಹೊಸದಾಗಿ ಗಾಂಧಿಜಿಯವರನ್ನು ತಿಳಿದಂಥವರು. ಆದರೆ ನಾನು ಹಿಂದೆ ಗಾಂಧಿಜಿಯರು ಇದ್ದಾಗ ಕೆಲವು ಕಾಲ ಅವರೊಡನೆ ಇದ್ದವನು.

ಗ್ರಾಮ ಜೀವನದ ವಿಷಯದಲ್ಲಿ ಅವರು ಎಲ್ಲಾವಿಧದಲ್ಲೂ ಸಮಸ್ತ ಜನರೂ ಸೇರಿ ಗ್ರಾಮೋದ್ದಾರ ಮಾಡಬೇಕೆಂದು ಹೇಳಿದ್ದಾರೆಯೇ ಹೊರತು ಈ ರೀತಿ ಅನುವಂಶಿಕ ಹಕ್ಕನ್ನು ಒಡೆದುಹಾಕಿ ಎಂದೇನು ಹೇಳಲಿಲ್ಲ. ನಮ್ಮಲ್ಲಿ ಗ್ರಾಮಾಧಿಕಾರಿಗಳೇ ಒಂದು ಗುಂಪು. ಗ್ರಾಮ ನೌಕರರದೇ ಒಂದು ಗುಂಪು. ಈ ಬಾರಾಬಲೂತಿ ಸಿಸ್ಟಮ ನಮ್ಮಲ್ಲಿ ಮೊದಲಿನಿಂದಲೂ ಜಾರಿಯಲ್ಲಿತ್ತು. ಅಲ್ಲದೆ ಮಹಾರಾಷ್ಟ್ರ ಕಾಲದಲ್ಲಿಯೂ, ಮುಂದುವರಿಸಿಕೊಂಡು ಬರಲಾಯಿತು. ಆ ಕಾಲದಲ್ಲಿ ರೆವಿನ್ಯೂ ಅಡ್ಮಿನಿಸ್ಟ್ರೇಷನ್ ಬಹಳ ಯೋಗ್ಯ – ರೀತಿಯಲ್ಲಿ ಕಂಡು ಹಿಡಿಯಲಾಯಿತು. ಅದನ್ನೇ ಬ್ರಿಟೀಷರು ತಮ್ಮ ಆಡಳಿತ ಪ್ರಾರಂಭ ಮಾಡಿದ ಮೇಲೆಯೂ ಮುಂದುವರೆಸಿಕೊಂಡು ಬಂದರು. ಕೇವಲ ಮೊಗಲ್ ಅಡ್ಮಿನಿಸ್ಟ್ರೇಷನ್ನಿನ ಅಧಿಕಾರ ವ್ಯಾಪ್ತಿ ಏನಿತ್ತು ಆಗ ಮಾತ್ರ ಹಳ್ಳಿಗೆ ಮತ್ತು ರಾಜಧಾನಿಗೆ ಪ್ರಭುತ್ವ ಸಂಪರ್ಕವನ್ನು ಉಂಟು ಮಾಡತಕ್ಕ ವ್ಯವಸ್ಥೆ ಜಾರಿಗೆ ಬಂತು. ಹಳ್ಳಿಗಳಲ್ಲಿ ವಸೂಲಾದ ಕಂದಾಯದ ಹಣವನ್ನು ಬೊಕ್ಕಸಕ್ಕೆ ತಂದು ಕಟ್ಟುವುದು, ಹಳ್ಳಿಯ ಜೀವನವನ್ನು ಹತೋಟಿಗೆ ತರುವುದು ಇವೆಲ್ಲವೂ ಅವರಕೆಲಸವಾಗಿತ್ತು. ಮಾನ್ಯ ಈಶ್ವರಪ್ಪನವರು ಮಹಾರಾಜರ ಕಾಲೇಜಿನಲ್ಲಿ ಓದಿರತಕ್ಕವರು. ಅವರಿಗೆ ಈ ವಿಚಾರ ಗೊತ್ತಿರಬಹುದು. ಚಂದ್ರಗುಪ್ತನ ಆಸ್ಥಾನದಲ್ಲಿದ್ದ ಕೌಟಿಲ್ಯನು ಅರ್ಥ ಶಾಸ್ತ್ರವನ್ನು ಬರೆದಾಗ್ಗೆ ಅದರಲ್ಲಿ 45ನೇ ಅಧ್ಯಾಯ 32ನೇ ಸೂತ್ರದಲ್ಲಿ ಈ ವಾಕ್ಯವನ್ನು ಉದಾಹರಿಸಿದ್ದಾರೆ. ಅದು ಈ ರೀತಿ ಇದೆ.

ಅಧ್ಯಕ್ಷ ಸಂಖ್ಯಾಯತಾ........... ವಿಕ್ರಯ ಧಾನ್ಯ ವರ್ಜ್ಯಮ್ ::

ಈ ಬಾರಾ ಬಲೂತಿ ಸಿಸ್ಟಮ್ ಏನಿತ್ತು, ಅದು ಮೊಗಲರ ಆಡಳಿತ ಕಾಲದಿಂದಲೂ ಬಂದಿದೆ. ಮಹಾರಾಷ್ಟ್ರರ ಆಡಳಿತ ಕಾಲದಲ್ಲಿ ಅದನ್ನು ಮುಂದುವರಿಸಲಾಯಿತು. ಬ್ರಿಟಿಷರ ಕಾಲದಲ್ಲಿಯೂ ಅದು ಜಾರಿಗೆ ಬಂತು. ಈ ಪದ್ಧತಿ ಸುಮಾರು 2,400 ವರ್ಷಗಳ ಹಿಂದೆಯೇ ಪ್ರಾರಂಭವಾಯಿತು. ಇವೊತ್ತಿನ ಹಾಗೆ ಗ್ರಾಮಗಳಲ್ಲಿ 12 ಅಧಿಕಾರಿಗಳ ಅವಶ್ಯಕತೆ ಇರಲಿಲ್ಲ. ಹಿಂದೆ ಸುಮಾರು 6–7 ಅಧಿಕಾರಿಗಳ ಅವಶ್ಯಕತೆ ಇತ್ತು. ಲೆಕ್ಕ ಬರೆಯುವವರು, ಹಣ ವಸೂಲು ಮಾಡುವವರು ಹೀಗೆ ಇರಬೇಕೆಂದು ಸೂಚನೆ ಮಾಡಿದ್ದರು. ಬಾರಾ ಬಲೂತ್ರಿ ಪದ್ದತಿ ಪ್ರಕಾರ ಗ್ರಾಮಗಳಲ್ಲಿ 6–7 ಗ್ರಾಮಾಧಿಕಾರಿಗಳು ಇರಬೇಕೆಂದು ಇದೆ. ಇದು ಬಹಳ ಕಾಲದಿಂದ ಬಂದಿರತಕ್ಕದ್ದು ಎಂದು ನನಗನ್ನಿಸುತ್ತದೆ. ಈ ಗ್ರಾಮ ಜೀವನವನ್ನು ನಡೆಸಲಿಕ್ಕೆ ಹಿಂದೆ 4–6 ಅಧಿಕಾರಿಗಳು ಇದ್ದದ್ದು ಇವೊತ್ತು ಹೋಗಿ ಈ ರೀತಿ ಉಳಿದಿವೆ. ಅದನ್ನು ಹೇಗಾದರೂ ಬಹಿಷ್ಕಾರ ಮಾಡಬೇಕು. ಚಿನ್ನಕ್ಕೆ ಪುಟವಿಕ್ಕುವ ಹಾಗೆ ಅದನ್ನು ಶುದ್ಧಿಗೊಳಿಸಿ ಆ ಪದ್ಧತಿಯನ್ನು ಉಳಿಸಿಕೊಂಡು ಗ್ರಾಮಗಳ ಸಮಸ್ತ ಜೀವನ ನಡೆಸುವುದಕ್ಕೆ ಆಗುತ್ತಿರಲಿಲ್ಲವೇ ಎಂದು ನಾನು ಪ್ರಶ್ನೆ ಮಾಡುತ್ತೇನೆ. ಅದು ಈಗ ಆಗಿಲ್ಲ ಎಂದು

ಹೇಳುತ್ತೀರಿ. ಇತ್ತೀಚಿನ 10–6 ವರ್ಷಗಳ ಲೀಡರ್‌ಷಿಪ್‌ನಲ್ಲಿ ಸಾಧ್ಯವಾಗಿಲ್ಲ ಎಂದು ಹೇಳಿದರೆ ಹೇಗೆ? ತಮ್ಮ ಲೀಡರ್ ಷಿಪ್‌ನಲ್ಲಿ ತಪ್ಪುದಾರಿಯನ್ನು ಹಿಡಿದಿದ್ದರಿಂದ ಅದು ಆಗಿಲ್ಲ. ತಪ್ಪುಜನ ತಪ್ಪುದಾರಿಯನ್ನು ಹಿಡಿದರೆ ಹೀಗೆಯೇ ಆಗುವುದು. ಉದಾಹರಣೆಗೆ ಹೇಳುವುದಾದರೆ ಈಗ ವೇಶ್ಯಾಸ್ತ್ರೀಯ ಕಟಾಕ್ಷ ಅಥವಾ ಅನುಗ್ರಹ ಅಲ್ಲಿ ಇಲ್ಲಿ ಬಿದ್ದರೆ ಯಾರೂ ಏನೂ ಮಾಡುವುದಿಲ್ಲ. ಆದರೆ ಗರತಿ ಇದ್ದಾಳಲ್ಲ ಅವಳು ಅತ್ತ ಇತ್ತ ನೋಡಿದರೆ ಮಾತನಾಡಿದರೆ, ಎಲ್ಲರೂ ಅವಳನ್ನೇ ನೋಡುತ್ತಾರೆ. ಮಾನ್ಯ ರೆವಿನ್ಯೂ ಸಚಿವರು ಮಲೆನಾಡಿನ ಹಿರಿಯ ಗರತಿಯ ಹಾಗೆ. ಆದ್ದರಿಂದ ಇವರು ತಪ್ಪು ಮಾಡದೆಯೇ ಇದ್ದು ಮುಂದೆ ತಪ್ಪು ಮಾಡಿದರೆ ಜನ ನೋಡುತ್ತಾರೆ ಎಂದು ನಾನು ತಮ್ಮಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಈ ಮಸೂದೆಯ ಆಕ್ಟ್ ಆದಾಗ ಇದರಿಂದ ಯಾವ ರೀತಿ ಪರಿಣಾಮ ಮೊಟ್ಟ ಮೊದಲನೆಯದಾಗಿ ನಮ್ಮ ದೇಶದಲ್ಲಿ ಆದೀತು ಎಂದು ಎಷ್ಟೋಜನ ಅಂದು ಕೊಳ್ಳುತ್ತಿದ್ದಾರೆ. ನಮ್ಮ ಇಡೀ ಹೊಸ ರಾಜ್ಯದಲ್ಲಿ 17,137 ಶ್ಯಾನುಬೋಗರುಗಳು ಇದ್ದಾರೆ. 30633 ಪಟೇಲರುಗಳಿದ್ದಾರೆ. ಕೆಲವರು ಇಫೀರಿಯರ್ ಗ್ರಾಮ ನೌಕರರು. ಅಂದರೆ ತೋಟಿ ತಳವಾರ ನೀರಗಂಟಿ ಇವರುಗಳು ಒಟ್ಟು 4613 ಜನ ಇದ್ದಾರೆ. ಈ ಕಾನೂನು ಆದ ದಿವಸವೇ ಶ್ರೀ ಕಡಿದಾಳ್ ಮಂಜಪ್ಪ ತಮ್ಮ ಪುರುಷಾರ್ಥ ಸಾಧನೆ ಸಾಧಿಸಲಾಯಿತು ಎಂದು ಏನು ಅಂದುಕೊಂಡಿದ್ದಾರೋ ಆ ಒಂದು ಹಿರಿಯ ಉದ್ದೇಶ ಏನು ಆಗಲಾರದು ಎಂದು ನಾನು ಹೇಳುತ್ತೇನೆ. ಇದರಿಂದ ಒಟ್ಟು 88500 ಜನಗಳನ್ನು ಸರ್ಕಾರದವರೇ ನಿರುದ್ಯೋಗಿಗಳನ್ನಾಗಿ ಮಾಡುತ್ತಾರೆ. ಈ ಆಕ್ಟ್ ಈಗ ಜಾರಿಗೆ ಬಂತು ಎಂದರೆ ಈ ಮೈಸೂರು ರಾಜ್ಯದಲ್ಲಿ ಸುಮಾರು ಒಂದು ಲಕ್ಷ ಪ್ರಜಾಸಂಖ್ಯೆ ಈಗ ನಿರುದ್ಯೋಗಿಗಳ ಗುಂಪು ಏನಿದೆ ಆ ಗುಂಪಿಗೆ ಅವರೂ ಸೇರಿರುತ್ತಾರೆ.

ಎರಡನೆಯದಾಗಿ ಶ್ಯಾನುಬೋಗರು ಪಟೇಲರು ಇನ್‌ಫೀರಿಯರ್ ವರ್ಕ್‌ರ್ಸ್ ಯಾರು ಇದ್ದಾರೆ, ಅವರುಗಳ ಮೇಲೆ ಸರ್ಕಾರದವರು ವೆಚ್ಚ ಮಾಡುವ ದ್ರವ್ಯ ಏನಿದೆ ಅದು 6,79,377 ರೂಪಾಯಿಗಳು. ಸರ್ಕಾರದವರು ಇದಕ್ಕಾಗಿ ಒಬ್ಬ ವಿಶೇಷಾಧಿಕಾರಿಯನ್ನು ನೇಮಕ ಮಾಡಿದ್ದಾರೆ. ಅದು ಅವರು ಕೊಟ್ಟಿರತಕ್ಕ ವರದಿಯಲ್ಲಿ ಇದೆ. ಶ್ಯಾಮಬೋಗರುಗಳಿಗೋಸ್ಕರ ಕೊಡತಕ್ಕ ಪ್ರೋಟಿಗೆಗಾಗಿ 31,17,116 ಪಟೇಲರುಗಳಿಗಾಗಿ 20,78,347 ಇನ್‌ಫೀರಿಯರ್ ಸರ್ವಿಸ್‌ಗಳಿಗಾಗಿ ಕೊಡತಕ್ಕದ್ದು. 10,96,316 ಎಂದರೆ ಸುಮಾರು 63 ಲಕ್ಷ ರೂಪಾಯಿಗಳಷ್ಟು. ಶ್ಯಾನುಭೋಗರು, ಗ್ರಾಮಾಧಿಕಾರಿಗಳು, ಗ್ರಾಮ ನೌಕರರಿಗೆ ಇವೊತ್ತು ಸಂದಾಯವಾಗುತ್ತಿದೆ. ವಿಶೇಷ ಅಧಿಕಾರಿಗಳ ವರದಿಯ ಪ್ರಕಾರ ಇವರೆಲ್ಲರನ್ನೂ ಬಿಟ್ಟು ಇಷ್ಟು ಕೆಲಸ ಮಾಡಲು ಯಾರನ್ನಾದರೂ ನೇಮಕ ಮಾಡಿಕೊಂಡ ಪಕ್ಷದಲ್ಲಿ ಶ್ಯಾನುಭೋಗರಿಗೆ ಲೆಕ್ಕಗಳನ್ನು ಇಡಲು 4920034 ಪಟೇಲರಿಗಾಗಿ 44,98,200 ಮತ್ತು ಇತರರಿಗಾಗಿ 38,51,704 ಒಟ್ಟು 13269938 ವೆಚ್ಚ ಆಗಬೇಕೆಂದು ಹೇಳುತ್ತಾರೆ. ಈ ರೀತಿಯ ಅಂದಾಜು ಸರಿಯಾದುದಲ್ಲ. ಏತಕ್ಕೆಂದರೆ ಈ ಕೆಲಸವನ್ನು ನಿರ್ವಹಣೆ ಮಾಡಲು ಗ್ರಾಮ ಪಂಚಾಯತಿಗಳ ಕಾರ್ಯದರ್ಶಿಗೆ ವೇತನ ಸಂಭಾವನೆಗಳನ್ನು ಕೊಟ್ಟು ಅವರ ಸಹಾಯಕ್ಕೆ ಇನ್ನೊಬ್ಬರನ್ನು ನೇಮಿಸಿ ಅವನಿಗೆ ಸಂಬಳ ಸಾರಿಗೆಗಳನ್ನು ಕೊಡಲು ಇದರ ಎರಡರಷ್ಟು ಬೇಕಾಗುತ್ತದೆ. ಇದರಿಂದ ದೇಶದ ಜನಕ್ಕೆ ದೊರೆಯತಕ್ಕ ಫಲ ಏನು ಎಂದರೆ, ಸುಮಾರು ಒಂದು ಲಕ್ಷ ಜನಗಳನ್ನು

ನಿರುದ್ಯೋಗವಂತರನ್ನಾಗಿ ಮಾಡುವುದು ಒಂದು. ಕೇವಲ 62 ಲಕ್ಷ ರೂಪಾಯಿಗಳಷ್ಟು ಸರಕಾರದಿಂದ ವೆಚ್ಚವಾಗುತ್ತಿದ್ದುದನ್ನು ಸುಮಾರು ಒಂದೂವರೆ ಕೋಟಿಗಳಷ್ಟು ಹೆಚ್ಚಿಸತಕ್ಕದ್ದು, ಎರಡನೆಯದು, ಮೂರನೆಯದು ಯಾವುದೆಂದರೆ, ಈ ಬಿಲ್ಲಿನ 10ನೆಯ ಕಲಮ್ಮಿನ (ಬಿ) ಸೆಕ್ಷನ್ನಿನ ಪ್ರಕಾರ ಅವರಿಗೆ ಕೊಡತಕ್ಕ ಕಂಪ್‌ನೆನೇಷನ್ ಎಂದರೆ ಪರಿಹಾರ ದ್ರವ್ಯ ಎಂದು ಏಳುಪಟ್ಟು ಕೊಡಬೇಕು ಎಂದು ತೀರ್ಮಾನ ಮಾಡಿದ್ದಾರೆ. ಏಳುಪಟ್ಟು ಎನ್ನುವುದನ್ನು ಲೆಕ್ಕ ಹಾಕಿಕೊಂಡರೆ ಎಷ್ಟು ಹಣ ನಮ್ಮ ಮೈಸೂರು ಸರಕಾರದ ಬೊಕ್ಕಸಕ್ಕೆ ಬೇಕಾಗುತ್ತದೆ ಎಂದರೆ, 440423353 ರೂಪಾಯಿಗಳಷ್ಟು ಕೊಡಬಹುದು. ಅವರಿಗೆ ಕೊಡತಕ್ಕದ್ದು 1942ನೇ ಇಸವಿಗೆ ಹಿಂದೆ ಏನು ಪೋಟಿಗೆ ಇತ್ತೋ ಅದರ ಏಳರಷ್ಟು ಕೊಡಬೇಕೆಂದಿದೆ. ಭರತ ಖಂಡದ ಪರಿಸ್ಥಿತಿ ಏನು, ನಮ್ಮ ರಾಜ್ಯದ ಪರಿಸ್ಥಿತಿ ಏನು, ನಮ್ಮ ಹಣಕಾಸಿನ ಮುಗ್ಗಟ್ಟೇನು ನಮ್ಮ ಜನಗಳು ಪಡುತ್ತಿರುವ ಕಷ್ಟ ಕಾರ್ಪಣ್ಯಗಳೇನು ಮತ್ತು ಆಡಳಿತವು ಭದ್ರವಾಗಿಲ್ಲವೇ ಶಿಥಿಲವಾಗಿರುವಂತಹ ಈ ಕಾಲದಲ್ಲಿ, ಮಂತ್ರಿಮಂಡಲದಲ್ಲಿ ವಿಧವಿಧವಾದ ಪರಿಸ್ಥಿತಿಗಳನ್ನು ಎದುರಿಸಿ, ಒಂದು ಲಕ್ಷ ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡಿ ಬೇರೆ ಒಬ್ಬ ಗುಮಾಸ್ತರನ್ನು ಇಟ್ಟು ಅವರಿಂದ ಕೆಲಸಗಳನ್ನು ಮಾಡಿಸುವುದು ಸಾಧ್ಯವಾಗುತ್ತದೆಯೆ?

ಹೀಗೆ ಸುಮಾರು ಐದು ಕೋಟಿ ರೂಪಾಯಿಗಳಷ್ಟು ಕೊಡಬೇಕೆಂದು ಮಾಡಿರುವ ಅಂದಾಜು ಸಾಧುವಾದುದೇ, ಕಾಲಕ್ಕೆ ತಕ್ಕಂತಹುದೇ, ಸಮಯೋಚಿತವಾದುದೇ, ಎನ್ನುವುದನ್ನು ತಾವು ಹೇಳಬೇಕು. ಆದುದರಿಂದಲೇ ಇದು ಈಗಿನ ಸದ್ಯದ ಪರಿಸ್ಥಿತಿಯಲ್ಲಿ ಅಕಾಲಿಕವಾದದ್ದು ಮತ್ತು ಅನುಚಿತವಾದದ್ದು. ನನ್ನ ಮಾನ್ಯ ಸ್ನೇಹಿತರಾದ ಶ್ರೀಮಾನ್ ಈಶ್ವರಪ್ಪನವರು ಮಾತನಾಡುವಾಗ ಒಂದು ವಿಚಾರವನ್ನು ಹೇಳಿದರು. ಕೇವಲ ತತ್ವನಿರೂಪಣೆಯಲ್ಲಿ ರಾಜ್ಯದಲ್ಲಿ ಗೊಂದಲ ಉಂಟಾಗುವ ಹಾಗೆ ಆಗಬಾರದು ಎಂದು.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ:- ನಿನ್ನೆಯ ದಿವಸ ಅನುವಂಶಿಕ ಹಕ್ಕುಗಳನ್ನು, ಮೈಸೂರು ರಾಜ್ಯದಲ್ಲಿ ಗ್ರಾಮಾಧಿಕಾರಿಗಳು ಮತ್ತು ಗ್ರಾಮ ನೌಕರರು ಯಾರಿದ್ದಾರೆ ಅವರ ಅನುವಂಶಿಕ ಹಕ್ಕನ್ನು ರದ್ದುಮಾಡತಕ್ಕ ಮಸೂದೆ ಸಕಾಲದಲ್ಲಿ ಬಂದಿಲ್ಲ, ಸಾಧುವಾಗಿಲ್ಲ; ಅನುಚಿತವಾಗಿದೆ, ಮೈಸೂರು ರಾಜ್ಯ ಸರ್ಕಾರವೇನಿದೆ ಅದರ ಮೇಲೆ ವಿಧವಿಧವಾದ ಹೊಣೆಯನ್ನು ಹೊರಿಸತಕ್ಕಾದ್ದಾಗಿದೆ ಎಂದು ವಿಜ್ಞಾಪನೆ ಮಾಡಿಕೊಂಡೆ. ಮಾನ್ಯ ಕಡಿದಾಳ್ ಮಂಜಪ್ಪನವರು ನನ್ನ ಆತ್ಮೀಯ ಮಿತ್ರರು. ಇಂಥ ಬಹಳ ಪ್ರಬಲವಾಗಿರತಕ್ಕ ಮಸೂದೆಯನ್ನು ಅವರು ಮಂಡಿಸಿ ಅವರಿಗೆ ಮಿತ್ರರಾಗಿರತಕ್ಕವರ ಮಾತುಗಳನ್ನು ಕೇಳಲು ಅವಕಾಶವಿಲ್ಲದೆ ಇರುವುದು ಅವರ ದೌರ್ಭಾಗ್ಯವೇ ಅಥವಾ ನೇರವಾಗಿ ಹೇಳುವುದಕ್ಕೇ ಅವಕಾಶವಿಲ್ಲದೆ ಇರುವುದು ನನ್ನ ದುರಾದೃಷ್ಟವೋ ತಿಳಿಯದು.

ಈ ಮಸೂದೆಯಲ್ಲಿ 'ಟು ಬಿ ಇನ್ ಕಾನ್ಸೋನನ್ಸ್ ವಿತ್‌ದ ಮಾಡ್ರನ್ ಸ್ಪಿರಿಟ್ ಎಂದು ಹೇಳಿದ್ದಾರೆ. ಈ ಆಧುನಿಕ ಮನೋಭಾವವನ್ನು ರಾಜ್ಯದಲ್ಲಿ ತಂದು ಹಾಕಬೇಕು, ಈ ಆಧುನಿಕ ಮನೋಭಾವ ಬರುವುದಕ್ಕೋಸ್ಕರವಾಗಿ ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದ ಅಥವಾ ನೂರಾರು ವರ್ಷಗಳಿಂದ ಯಾರು ಗ್ರಾಮ ಜೀವನದಲ್ಲಿ ಭಾಗಿಗಳಾಗಿ, ಗ್ರಾಮ ರಕ್ಷಣೆಯ

ಕಾರ್ಯಗಳನ್ನು ಅನುಚಾನವಾಗಿ ಮಾಡಿಕೊಂಡು ಬಂದಿದ್ದಾರೆ. ಅವರನ್ನು ತೆಗೆದು ಹಾಕಿದ ಪಕ್ಷದಲ್ಲಿ ಆಗುತ್ತದೆ ಎಂದು ನಂಬಿಕೊಂಡಿದ್ದಾರೆ. ಆದರೆ ಅದಕ್ಕೆ ಕಾರಣಗಳೇನು ಈ ಆಧುನಿಕ ಮನೋಭಾವ ಎನ್ನತಕ್ಕದ್ದು ಯಾವುದು ಎನ್ನುವುದನ್ನು ಮಾನ್ಯ ಸಚಿವರು ತಮ್ಮ ಉದ್ಘಾತ ಭಾಷಣದಲ್ಲಿ ಯಾವ ರೀತಿಯಾಗಿಯೂ ಮಂಡಿಸಿಲ್ಲ. ಇದು ಕೇವಲ ತತ್ವ ಪ್ರತಿಪಾದನೆ, ಆಧುನಿಕ ಮನೋಭಾವದ ಆಡಳಿತ ನಾವು ತರಬೇಕು ಎಂದು ಹೇಳುತ್ತಿದ್ದಾರೆ. ಅದರ ಅರ್ಥವೇನು? ಅದರಿಂದ ಜನತೆಗೆ ಆಗತಕ್ಕ ಪ್ರಯೋಜನವೇನು, ಅದರಿಂದ ಆಗತಕ್ಕ ಪರಿಣಾಮಗಳೇನು ಎಂದು ಹೇಳದೆ ಹೋದ ಪಕ್ಷದಲ್ಲಿ ಈ ಮಾಯಾ ವಾದವನ್ನು ಜನತೆಯ ತಲೆಯ ಮೇಲೆ ಹೊರಿಸಿದ ಹಾಗೆ, ಆಡಳಿತವನ್ನು ಸುಸೂತ್ರವಾಗಿ ನಡೆಸಿಕೊಂಡು ಬರುವುದಕ್ಕೆ ಸಹಾಯಕರಾಗಿದ್ದ ಜನರನ್ನು ಕೇವಲ ಒಂದು ಮಸೂದೆ ತಂದು, ಒಂದು ಲಕ್ಷ ಜನರನ್ನು ಕೇವಲ ಒಂದು ಮಸೂದೆ ತಂದು, ಒಂದು ಲಕ್ಷ ಜನರನ್ನು ನಿರ್ಗತಿಕರನ್ನಾಗಿ ಮಾಡಿ, ಮನೆಯಲ್ಲಿ ಮಾನವಾಗಿ ಬದುಕುತ್ತಿದ್ದವರನ್ನು ಬೀದಿಗೆ ಎಳೆದು ನಾಲ್ಕು ಕೋಟಿ ರೂಪಾಯಿಗಿಂತಲೂ ಕಡಿಮೆ ಇಲ್ಲದೆ ಹೊಣೆಗಾರಿಕೆಯನ್ನು ತಕ್ಷಣದಲ್ಲಿ ಹೊತ್ತು, ಈ ಕೆಲಸವನ್ನು ಮಾಡುವುದಕ್ಕೆ ಇದಕ್ಕಿಂತ 90ಲಕ್ಷ ರೂಪಾಯಿಗಳವರೆಗೂ ಹೆಚ್ಚು ವೆಚ್ಚ ಮಾಡುವುದಕ್ಕೆ ತಾವು ಸಿದ್ಧರಾಗಿದ್ದೇವೆಂದರೆ ಅದು ಯಾವ ತತ್ವವೆಂದು ಕೇಳುತ್ತೇನೆ. ಇದರ ಹಿಂದುಗಡೆ ನಿಂತಿರತಕ್ಕ ತತ್ವವಾದರೂ ಏನು? ಆ ಜೀವನವನ್ನು ಉತ್ತಮಗೊಳಿಸತಕ್ಕ ಸೂತ್ರವಾದರು ಏನು? ಇದಕ್ಕೆ ಮಾನ್ಯ ಸಚಿವರು ಉತ್ತರ ಹೇಳತಕ್ಕದ್ದು ಅತ್ಯಗತ್ಯ. ಇದರಿಂದ ಸರ್ಕಾರಕ್ಕೆ ಯಾವ ವಿಧವಾದ ಸಹಾಯವೂ ಆಗಲಿಲ್ಲ. ಕೆಲಸ ಮಾಡುತ್ತಿರತಕ್ಕ ಜನರ ಮನಸ್ಸಿಗೆ ಸಮಾಧಾನವಾಗಲಿಲ್ಲ. "ಆಚಾರ್ಯರಿಗೆ ಕಷ್ಟ ತಪ್ಪಲಿಲ್ಲ. ರಾಯರಿಗೆ ಊಟ ರುಚಿಸಲಿಲ್ಲ" ವೆಂದು ನಮ್ಮಲ್ಲಿ ಒಂದು ಗಾದೆ ಇದೆ. ಇಂಥ ತತ್ವ ಪ್ರತಿಪಾದನೆ ಮಾಡಿ ಒಂದು ದೊಡ್ಡ ಮಸೂದೆಯನ್ನು ತಂದ ಪಕ್ಷದಲ್ಲಿ ಅದು ಯೋಗ್ಯವಾಗಲಾರದು ಎಂದು ನಾನು ತಮ್ಮ ಮೂಲಕ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಈ ಅನುವಂಶಿಕ ಹಕ್ಕನ್ನು ಪಡೆದಿರತಕ್ಕ ಜನ ಯಾರಿದ್ದಾರೆ, ಆ ಜನರ ಮೇಲೆ ಡಿಸಿಪ್ಲಿನ್ ಹೊರಿಸುವುದಕ್ಕೆ ಸಾಧ್ಯವಾಗುವುದಿಲ್ಲವಾದ್ದರಿಂದ ಇದನ್ನು ರದ್ದುಮಾಡಬೇಕಾಗುತ್ತದೆ ಎಂಬ ಧ್ವನಿಬರುವ ಹಾಗೆ ಆ ಹೊತ್ತು ನನ್ನ ಮಿತ್ರರು ಮಾತನಾಡಿದರು. ನಾನು ನಿನ್ನೆಯ ದಿವಸ ತಮ್ಮಲ್ಲೆ ವಿಜ್ಞಾಪನೆ ಮಾಡಿಕೊಂಡೆ, ಈ ವಿಚಾರವಾಗಿ ಕೂಲಂಕುಷವಾಗಿ ನಿವೃತ್ತ ಅಧಿಕಾರಿಗಳೊಬ್ಬರನ್ನು ನೇಮಕ ಮಾಡಿದರು. ಆದರೂ ಕೂಡ ಸ್ವಾಮಿ ಚಿತ್ತಾನುವರ್ತಿಗಳಾಗಿದ್ದಂಥ ಅಧಿಕಾರಿಗಳು.

ನಮ್ಮ ರಾಜ್ಯದಲ್ಲಿ ಅನುವಂಶಿಕವಾಗಿ, ಪರಂಪರಾಗತವಾಗಿ ಗ್ರಾಮ ಸೇವೆ ಮಾಡತಕ್ಕ ಅಧಿಕಾರವರ್ಗ ಪಟೇಲ್ ಶ್ಯಾನುಭೋಗರು ಒಂದು ಕಡೆ, ಬಾರಾಬಲೂತಿಯಲ್ಲಿರತಕ್ಕ ಇತರ ನೌಕರರ ವರ್ಗ, ನೇಮಕವರ್ಗ ಮತ್ತೊಂದು ಕಡೆ; ಅವರು ಕೆಲಸ ಮಾಡತಕ್ಕದ್ದು ಅವರ ಕರ್ತವ್ಯ. ಅವರಿಗೆ ಸಲ್ಲುತಕ್ಕ ವೇತನ, ಸಂಭಾವನೆ, ಸಲ್ಲಬೇಕು. ಇದಕ್ಕಾಗಿ 1878 ನೆಯ ಇಸವಿಯಲ್ಲಿ ಸರ್ಕಾರದ ಆರ್ಡರ್‌ಗಳ ಅಥವಾ ನಿರೂಪಗಳ ಮೂಲಕ ಮತ್ತು 1908ರಲ್ಲಿ ಮೈಸೂರಿನಲ್ಲಿ ಹಿಂದೆ ಇದ್ದ ಮಹಾರಾಜರು ಕಾನೂನು ಮಾಡಿ ಅದರಲ್ಲಿ ಅಡಕ ಮಾಡಿದರು. ಮಾನ್ಯ ರೆವಿನ್ಯೂ ಮಂತ್ರಿಗಳು, ಈ ಗ್ರಾಮಾಧಿಕಾರಿಗಳ

ಮೇಲೆ ಡಿಸಿಪ್ಲಿನರಿ ಆ್ಯಕ್ಷನ್ ತೆಗೆದುಕೊಳ್ಳುವುದಕ್ಕೆ ಅವಕಾಶವಿಲ್ಲ. ಅದಕ್ಕೋಸ್ಕರ ಕಾನೂನು ಮಾಡಬೇಕೆಂಬ ತೀರ್ಮಾನ ಮಾಡಿದ್ದೇವೆಂದು ಹೇಳಿದರು. ಅದು ಕೊಂಚ ಸತ್ಯಕ್ಕೆ ದೂರವಾದ ಮಾತು ಅಥವಾ ಅವರ ಗಮನಕ್ಕೆ ಬಂದಿಲ್ಲವೋ ಏನೋ ಅನ್ನಿಸುತ್ತದೆ. ಈ ಗ್ರಾಮಾಧಿಕಾರಿಗಳನ್ನು ಮತ್ತು ಗ್ರಾಮ ನೌಕರರನ್ನು ನಿವೃತ್ತಿಗೊಳಿಸಬೇಕು, ಎನ್ನುವ ವಾದ ನಮ್ಮಲ್ಲಿ ಹತ್ತಾರು ವರ್ಷಗಳಿಂದ ಇದೆ. ಅದಕ್ಕೆ ಕಾರಣಗಳು ನಾಲ್ಕಾರು ಇವೆ. ಅವನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುವಂಶಿಕವಾಗಿರತಕ್ಕ ಹಕ್ಕುಬಾಧ್ಯತೆಗಳನ್ನು ಅವರಿಂದ ತಪ್ಪಿಸಿ ಇನ್ನೊಬ್ಬರನ್ನು ಆ ಸ್ಥಳದಲ್ಲಿ ನೇಮಕ ಮಾಡಬೇಕು ಎನ್ನುವ ವಾದ. ಅದರಲ್ಲಿ ಮುಖ್ಯವಾಗಿ ಕಂಡು ಬಂದದ್ದು ಗ್ರಾಮಾಧಿಕಾರಿಗಳು, ಶ್ಯಾನುಬೋಗರು ಮತ್ತು ಪಟೇಲರುಗಳು ಯಾರಿದ್ದಾರೆ ಅವರು ಆ ಗ್ರಾಮದಲ್ಲಿ ಪ್ರಮುಖವಾಗಿರುತ್ತಾರೆ ಮತ್ತು ಅಂಥವರು ಸರ್ಕಾರಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡಿದ್ದಾರೆ. ಆದುದರಿಂದ ಪ್ರಬಲವಾಗಿರತಕ್ಕ ಜನರನ್ನು ದುರ್ಬಲರನ್ನಾಗಿ ಮಾಡಬೇಕೆಂಬ ಮನೋವೃತ್ತಿ ಅಧಿಕಾರವರ್ಗದಲ್ಲಿರುವ ಜನರದು. ಅಲ್ಲದೆ ಅನೇಕ ಜನ ಪಟೇಲರು ಹಾಗೂ ಶ್ಯಾನುಬೋಗರು ಕಂದಾಯ ಮೊದಲಾದುವನ್ನು ಜನರಿಂದ ವಸೂಲ್ಮಾಡಿ ತಿಂದು ಹಾಕಿದ್ದಾರೆ. ದಸ್ತು ಮಾಡಿದ್ದಾರೆ. ಇಂಥ ಜನರ ಕೈಯಲ್ಲಿ ಗ್ರಾಮ ಜೀವನದಲ್ಲಿ ಅವರ ಅಧಿಕಾರ ಸರ್ವವ್ಯಾಪ್ತಿಯಾಗಿ ನಿಲ್ಲುವಂತೆ ಮಾಡಿದರೆ ಸರಕಾರಕ್ಕೆ ನಷ್ಟವಾದೀತೆಂಬುದು ಒಂದು ವಾದ. ಇವರ ಗಮನಕ್ಕೆ ಬಂದಿರುವುದು ಕೇವಲ ಹತ್ತು ವರ್ಷಗಳಿಂದ ಮಾತ್ರ. ನಮ್ಮ ರಾಜ್ಯಾದಾಯ ಬಹುಮುಖವಾಗಿ ಬರುವುದಕ್ಕೆ ಪ್ರಾರಂಭವಾದುದು ಇತ್ತೀಚೆಗೆ. ಅದಕ್ಕೆ ಮೊದಲು ವಿಶೇಷವಾಗಿ ನಮ್ಮ ರಾಜ್ಯದ ಆದಾಯ ಬರುತ್ತಿದ್ದುದು ಭೂ ಕಂದಾಯದಿಂದಲೇ. ರಾಜ್ಯಾಡಳಿತ ನಡೆಯುವುದಕ್ಕೆ ಧನ ಸಹಾಯವಿದ್ದದ್ದು ಭೂ ಕಂದಾಯದಿಂದಲೇ. ಈ ರಾಜ್ಯಾಡಳಿತವನ್ನು ನಡೆಸಲು ಕೇವಲ ಹತ್ತು ವರ್ಷಗಳಿಂದೀಚೆಗೆ ಬರತಕ್ಕ ಇತರ ಸಹಾಯ ಸಂಪತ್ತುಗಳನ್ನು ಬಿಟ್ಟರೆ, ಭೂ ಕಂದಾಯದ ಹಣವನ್ನು ಸರ್ಕಾರದ ಬೊಕ್ಕಸಕ್ಕೆ ಹಾಕುತ್ತಿದ್ದ ಜನ ಅವರು.

ಇದೇ ವರದಿಯಲ್ಲಿ ಕೊಟ್ಟಿರುವ ಅಂಕಿ ಅಂಶಗಳ ಪ್ರಕಾರ ಸುಮಾರು 11737 ಜನ ಶ್ಯಾನುಭೋಗರೂ ಮತ್ತು 30633 ಜನ ಪಟೇಲರೂ ನಮ್ಮ ಮೈಸೂರು ರಾಜ್ಯದಲ್ಲಿದ್ದಾರೆ. ಅವರ ಪೈಕಿ ಎಷ್ಟು ಜನ ಕಂದಾಯದ ರೂಪದಲ್ಲಿ ವಸೂಲ್ಮಾಡಿದ ಹಣವನ್ನು ತಿಂದು ಹಾಕಿದ್ದಾರೆ ಎಂದು ಕೇಳುತ್ತೇನೆ. ಸಾವಿರಾರು ಜನ ಗ್ರಾಮಾಧಿಕಾರಿಗಳಲ್ಲಿ ನಾಲ್ಕಾರು ಜನ ಯಾರಾದರೂ ಹಣವನ್ನು ತಿಂದು ಹಾಕಿದ್ದ ಪಕ್ಷದಲ್ಲಿ ಆ ಹಣವನ್ನು ಸರ್ಕಾರದ ಬೊಕ್ಕಸಕ್ಕೆ ತೆಗೆದುಕೊಳ್ಳುವುದಕ್ಕಾಗಲೀ, ಅಥವಾ ಅವರು ಮಾಡುವ ತಪ್ಪಿತಕ್ಕೆ ಶಿಕ್ಷೆ ಮಾಡುವುದಕ್ಕಾಗಲೀ ಬೇರೆ ವಿಧವಾದ ಕಾನೂನಾಗಲೀ, ನಿಯಮವಾಗಲೀ, ಅಥವಾ ಶಕ್ತಿಯಾಗಲೀ ಸರ್ಕಾರಕ್ಕೆ ಇಲ್ಲವೇ ಎಂದು ಕೇಳುತ್ತೇನೆ. ಈ ಹೊತ್ತು ರಾಜ್ಯ ನಡೆಸತಕ್ಕ ಜನ ಯಾರಿದ್ದಾರೆ, ಅವರಿಗೆ ನೀತಿ ನಿಯಮಗಳನ್ನು ಹಾಕತಕ್ಕ ಜನ ಯಾರಿದ್ದಾರೆ, ಅಂಥ ಜನರು ಕೇವಲ ಹತ್ತು ರೂಪಾಯಿಗಳ ನೂರು ರೂಪಾಯಿಗಳ ಹಣ ದಸ್ತು ಮಾಡಿದ ಒಂದೆರಡು ಪ್ರಸಂಗಗಳು ಗ್ರಾಮಾಧಿಕಾರಿಗಳಲ್ಲಿ ನಡೆದಿರಬಹುದು -- ಕೇವಲ ರೀಜನಲ್ ಟ್ರಾನ್ಸ್‌ಪೋರ್ಟ್ ಆಫೀಸಿನಲ್ಲಿ ಆರೂವರೆ ಲಕ್ಷ ರೂಪಾಯಿಗಳನ್ನು ತಿಂದು ಹಾಕಿದ್ದಾರೆಂದು ಸರ್ಕಾರದ ಪ್ರಕಟಣೆಗಳ ಮೂಲಕ ಸೂಚಿಸುತ್ತಾರೆ. ಪ್ರಭುತ್ವ ಪಕ್ಷ ಯಾವ ಬಲದ ಬುನಾದಿಯ ಮೇಲೆ, ತಳಹದಿಯ

ಮೇಲೆ ನಿಂತಿದೆಯೋ ಆ ತಳಹದಿಯ ರೂಪದಲ್ಲಿರತಕ್ಕ ರಾಜ್ಯ ಕಾಂಗ್ರೆಸ್ ಕಮಿಟಿಯಲ್ಲಿರತಕ್ಕ ಜನ ಇಷ್ಟು ಹಣವನ್ನು ತಿಂದಿದ್ದಾರೆಂದು ಹೇಳುವಾಗ ನಾನು ಯಾವಾಗಲೂ ಇತರರ ವಿಷಯದಲ್ಲಿ ಗೌರವ ಬುದ್ಧಿಯಿಂದ ಮಾತನಾಡುವವನು, ಆದುದರಿಂದ ಮಾಂಡಲೀಕರು ಎಂದೆನಿಸಿಕೊಂಡವರು ಏನಿದ್ದಾರೆ ಅವರು ಮಂಡಲ ಕಾಂಗ್ರೆಸ್ ಕಮಿಟಿ ಅಧ್ಯಕ್ಷರು ಅಥವಾ ಸದಸ್ಯರು, ಅವರಲ್ಲಿ ಅನೇಕರು ಗ್ರಾಮಾಧಿಕಾರಿಗಳ ಜೊತೆಯಲ್ಲಿ ಸೇರಿಕೊಂಡು ಮಂಡಲ ಕಾಂಗ್ರೆಸ್ ಕಮಿಟಿಯ ಲಕ್ಷಾಂತರ ರೂಪಾಯಿಗಳನ್ನು ತಿಂದಿರತಕ್ಕವರಿದ್ದಾರೆ. ತಿಂದಿದ್ದಾರೆಂದು ಜನ ಭಾವಿಸಿಕೊಂಡಿರುವವರೂ ಇದ್ದಾರೆ. ನಾನು ಎಲ್ಲರ ಪರವಾಗಿ ವಾದ ಮಾಡುವವನಲ್ಲ. ಆದರೆ ನನ್ನ ಕಣ್ಣಿಗೆ ಕಾಣುವಷ್ಟು ಮಾತನ್ನು ಹೇಳುವವನು. ಈ ರೀತಿ ಇದ್ದ ಪಕ್ಷದಲ್ಲಿ ಆ ರೀತಿ ನ್ಯೂನತೆ ಮತ್ತು ಕೊರತೆಗಳು ಸರ್ಕಾರಕ್ಕೆ ಒದಗಿದ್ದ ಪಕ್ಷದಲ್ಲಿ ಬೇರೆ ವಿಧವಾದ ಕಾನೂನನ್ನು ಉಪಯೋಗಮಾಡಿ ಅವನ್ನು ಸರಿಪಡಿಸಬಹುದಾಗಿತ್ತು ಎಂದು ಹೇಳುತ್ತೇನೆ. ಆದರೆ ಅನುವಂಶಿಕವಾಗಿ ಯಾರು ಈ ...... ಸೇವೆ ಸಲ್ಲಿಸಿಕೊಂಡು ಬರುತ್ತಿದ್ದರೋ ಅವರು ಶುದ್ಧವಾದ ರೀತಿಯಲ್ಲಿ ನಡೆಸಿಕೊಂಡು ಬರುವಂತೆ ಮಾಡಬೇಕಾಗಿತ್ತು. ಹಿಂದೆ ನಮ್ಮ ಒಮ್ಮುಖವಾದ ಗ್ರಾಮ ಜೀವನ ಹೇಗೆ ನಡೆಯುತ್ತಿತ್ತು ಎಂದರೆ, ಗಾಂಧೀಜಿಯವರು ಅದನ್ನು ಮುಂದೆ ಸಂಯುಕ್ತ ಜೀವನ, ಅವಿಭಕ್ತ ಜೀವನ ಎಮದು ಕರೆಯುತ್ತಿದ್ದರು. ಮಹಾತ್ಮಾ ಗಾಂಧೀಜಿಯವರ ನಾಯಕತ್ವದಲ್ಲಿ ಪ್ರಜಾಪ್ರತಿನಿಧಿಗಳಿಗಿದ್ದ ಗೌರವ, ಮನ್ನಣೆ ಈಗ ಏತಕ್ಕೆ ಇಲ್ಲ ಎಂದು ನಾನು ಕೇಳುತ್ತೇನೆ.

ಇನ್ನೊಂದು ವಿಷಯ. ಮಂತ್ರಿಗಳು ಸಂಚಾರ ಹೋಗುವ ಕಾಲದಲ್ಲಿಯಾಗಲೀ ಅಥವಾ ಅಧಿಕಾರಿಗಳು ಸಂಚಾರ ಹೋಗುವ ಕಾಲದಲ್ಲಿ ಯಾಗಲೀ ಬೆನ್ನು ಮೂಳೆಯಂತಿರುವ ಕೆಲವು ನಾಡಗೌರು, ಊರು ಗೌಡರು, ಅವರಿಗೆ ಪರಾಕು ಹೇಳಲಿಲ್ಲವೆಂದು ಅನೇಕ ಸಾರಿ ಸರ್ಕಾರ ಅಂತಹವರನ್ನು ತೆಗೆದುಹಾಕಿ ಪರಾಕು ಹೇಳುವ ಜನರನ್ನು ತಮ್ಮ ಕೈಯಲ್ಲಿಟ್ಟು ಕೊಳ್ಳುತ್ತಿದ್ದಾರೆಂದು ಜನ ಭಾವಿಸುತ್ತಿದ್ದಾರೆ. ಅವರ ಆಗುಹೋಗುಗಳ ಭವಿಷ್ಯ ನಮ್ಮ ಕೈಯಲ್ಲಿದೆ ಎಂದುಕೊಂಡು ಆ ರೀತಿ ಬೆನ್ನು ಮೂಳೆಯಂತಿರುವ ಜನರನ್ನು ತಮ್ಮ ಕೈಯಲ್ಲಿಟ್ಟುಕೊಂಡರೆ ಅಧಿಕಾರ ಚೆನ್ನಾಗಿ ನಡೆದೀತೆಂದು ಸರ್ಕಾರ ಈ ರೀತಿ ಕಾನೂನು ಮಾಡುತ್ತಿದ್ದಾರೆಂದು ಜನ ನಿಜವಾಗಿ ಹೇಳಿಕೊಳ್ಳುತ್ತಿದ್ದಾರೆಂಬ ವಿಷಯವನ್ನು ತಮ್ಮ ಮೂಲಕ ಸರ್ಕಾರಕ್ಕೆ ತಿಳಿಸುತ್ತಿದ್ದೇನೆ.

ನನ್ನ ಹಿರಿಯ ಮಿತ್ರರಾದ ಶ್ರೀಮಾನ್ ಸುಬ್ರಹ್ಮಣ್ಯಂ ಅವರಿಗೆ ಒಂದು ಮಾತನ್ನು ತಿಳಿಸಬೇಕಾಗಿದೆ. ಸ್ವಾತಂತ್ರ್ಯ ಬಂದ ಮೇಲೆ ಈ ಕಾಂಗ್ರೆಸ್ ಸರ್ಕಾರ ರಚನೆಯಾಯಿತು. ಅದರ ನಂತರ ಕೆಲವು ಮಾನ್ಯ ಸಚಿವರು ಕೆಲವರು ಕಿರುಕುಳಕ್ಕೆ ಸಿಕ್ಕಿ ಸಿಕ್ಕಿ ಆ ಒಂದು ಹಿಂಸೆಯಿಂದ ಪಾರಾಗುವುದಕ್ಕೋಸ್ಕರ ಇಂತಹ ಮಸೂದೆಯನ್ನು ತೆಗೆದುಕೊಂಡು ಬಂದಿದ್ದಾರೆಂದು ಹೇಳುವ ಜನ ಇದ್ದಾರೆ. ಆದ್ದರಿಂದ ಆ ರೀತಿ ನಾನು ಹೇಳಿದ್ದಕ್ಕೆ ದಯವಿಟ್ಟು ಕ್ಷಮಿಸಬೇಕು.

ಮಾನ್ಯ ಶ್ರೀ ಟಿ. ಸುಬ್ರಹ್ಮಣ್ಯರವರ ಶ್ಯಾನುಭೋಗಿಕೆಯ ವಿಚಾರ ನಾನು ಬಲ್ಲೆ. ಈ ಮಸೂದೆಯ ಅನೇಕ ಖಂಡಗಳ ಒಳಖಂಡಗಳ ವಿಷಯ ಮಾತನಾಡುವಾಗ ಆ ವಿಷಯವನ್ನು ನಾನು

ಮಾತನಾಡುತ್ತೇನೆ. ಮಾನ್ಯ ಸಚಿವರು ಇದನ್ನು ಗ್ರಹಿಸಬೇಕು. ಅವರು ಸಂಪೂರ್ಣ ಭವಿಷ್ಯವನ್ನು ಆಲೋಚಿಸುವ ಶಕ್ತಿಯುಳ್ಳ, ಮಂತ್ರಿಗಳಾಗಿದ್ದಾರೆ. ನನಗೆ ಅದೇ ಸಂತೋಷ. ಕೇವಲ ಇನ್ನು ಕೆಲವೇ ತಿಂಗಳುಗಳಲ್ಲಿ ಅಂದರೆ ಸುಮಾರು 15–16 ತಿಂಗಳುಗಳಲ್ಲಿ ನಮ್ಮ ದೇಶದ ರಾಜ್ಯದಲ್ಲಿ ಸಾರ್ವತ್ರಿಕ ಚುನಾವಣೆ ನಡೆದು ಒಂದು ಭದ್ರವಾದ ಸರ್ಕಾರ ಸ್ಥಾಪನೆಯಾಗತಕ್ಕ ಪ್ರಕರಣ ಒದಗುವ ಕಾಲದಲ್ಲಿ ಒಂದು ಲಕ್ಷ ಗ್ರಾಮಾಂತರ ಪ್ರದೇಶದ ಜನರನ್ನು ಅತೃಪ್ತರನ್ನಾಗಿಮಾಡಿ ಅಲ್ಲಿ ಜನಗಳಲ್ಲಿ ಗೊಂದಲವನ್ನುಂಟುಮಾಡಿ ಅವರಿಗೆ ಅಸಮಾಧಾನವನ್ನು ಉಂಟು ಮಾಡುವ ಪಕ್ಷದಲ್ಲಿ ಈ ರಾಜ್ಯದ ಪ್ರಜಾಪ್ರಭುತ್ವ ಪಕ್ಷವೇನಿದೆ ಈ ಪ್ರಭುತ್ವಪಕ್ಷ ನಿಜವಾಗಿ ಬಲವಾಗಿ ಉಳಿಯುವುದು ಸಾಧ್ಯವೇ ಮತ್ತು ಇಂತಹ ಸಂದರ್ಭದಲ್ಲಿ ಇಂತಹ ಮಸೂದೆಯನ್ನು ಈ ಸಭೆಯಲ್ಲಿ ಮಂಡಿಸುವುದು ಸರ್ಕಾರಕ್ಕೆ ವಿವೇಕಯುತವಾಗಿದೆಯೋ ಎಂಬುದನ್ನು ಪ್ರಭುತ್ವಪಕ್ಷ ಮೊದಲೇ ಆಲೋಚನೆ ಮಾಡಬೇಕಾಗಿತ್ತು. ಆದ್ದರಿಂದಲೇ ನಾನು ಮೊಟ್ಟಮೊದಲನೆಯದಾಗಿ ಈಗ ಈ ಮಸೂದೆಯನ್ನು ತಂದಿರುವುದು ಅಕಾಲಿಕವಾದುದು ಎಂದು ವಿಜ್ಞಾಪನೆ ಮಾಡಿದ್ದು. ಮುಖ್ಯವಾಗಿ ಜನ ಹೇಳಿದ್ದು ಅನೇಕ ಬಾಕಿ ನೇರವಾಗಿ ಮಂತ್ರಿಗಳಿಗೆ ಮುಟ್ಟುವುದಿಲ್ಲ. ಚುನಾವಣೆ ಬರುತ್ತದೆಂದು ಈಗಾಗಲೇ ಗ್ರಾಮಗಳಲ್ಲಿರತಕ್ಕ ಪ್ರಬಲವಾದ ಜನರಗಳನ್ನು ತೆಗೆದುಹಾಕಿ ತಮ್ಮ ಏಜೆಂಟರುಗಳನ್ನು ಹಾಕಿಕೊಳ್ಳಬೇಕೆಂಬ ಉದ್ದೇಶದಿಂದ ಸರ್ಕಾರದವರು ಫೈನಾಕ್ಷಿಯಲ್ ರುಮಾರ್ಯಾಂಡಂನಲ್ಲಿ 8 ಸಾವಿರ ವಿಲೇಜ್ ಅಕೌಂಟೆಂಟ್‌ಗಳನ್ನೂ ಮತ್ತು 8 ಸಾವಿರ ಅಟೆಂಡೆಂಟ್‌ಗಳನ್ನೂ ನೇಮಕ ಮಾಡುವುದಕ್ಕಾಗಿ ಆಗತಕ್ಕ ಖರ್ಚನ್ನು ಉಳಿಸಿ, ಮುಂದೆ ಬರತಕ್ಕ ಚುನಾವಣೆಯಲ್ಲಿ ಅವರ ಕೈವಾಡ ಇರಲಿ ಎಂದು ಪ್ರಭುತ್ವಪಕ್ಷ ಈ ರೀತಿ ಮಸೂದೆಯನ್ನು ತಂದಿದ್ದಾರೆಂದು ಭಾಸವಾಗುತ್ತದೆಂದು ಜನ ಹೇಳುತ್ತಾರೆ. ಆದ್ದರಿಂದ ಈ ದೋಷಕ್ಕೆ ಸರ್ಕಾರದವರು ಭಾಗಿಗಳಾಗಬಾರದೆಂದೂ ಆ ರೀತಿ ಆಗಲಾರದು ಎಂಬ ನಂಬಿಕೆಯನ್ನೂ ನಾನು ಇಟ್ಟುಕೊಂಡಿದ್ದೇನೆ. ಆ ರೀತಿ ಸರ್ಕಾರದವರು ನಡೆಸಿಕೊಂಡು ಹೋಗಬೇಕಾದುದು ಯೋಗ್ಯ. ಆದರೆ ಈ ಮಸೂದೆಯಲ್ಲಿ ಅಳವಡಿಸಿರತಕ್ಕ ಅನುಚ್ಛೇದಗಳೇನಿವೆ ಅವುಗಳಿಂದ ಸರ್ಕಾರಕ್ಕೆ ಎಷ್ಟರಮಟ್ಟಿಗೆ ಸಾರ್ಥಕವಾದೀತು ಎಂದು ನಾನು ಹೇಳುತ್ತೇನೆ. ಈಗಾಗಲೇ ಗ್ರಾಮಜೀವನ ಸರಿಯಾಗಿ ನಡೆಸಿಕೊಂಡು ಹೋಗಲು ಪಂಚಾಯಿತಿಗಳು ರಚನೆಯಾಗಿವೆ. ಅದಕ್ಕೆ ಒಬ್ಬ ಸೆಕ್ರೆಟರಿ ಇರುತ್ತಾನೆ. ಅವನಿಗೆ ಒಬ್ಬ ಸಹಾಯಕನನ್ನು ನೇಮಕ ಮಾಡಬೇಕು. ಅವನಿಗೆ ಕೊಡತಕ್ಕ ವೇತನ, ಸಂಭಾವನೆ ಶ್ಯಾನುಭೋಗರಿಂದ ಏನು ಕೊಡುತ್ತಿದ್ದರೋ ಅದನ್ನು ಕೊಡುತ್ತೇವೆಂದು ಸ್ಟೇಟ್‌ಮೆಂಟ್ ಆಫ್ ಆಬ್ಜಕ್ಟ್ಸ್ ಅಂಡ್ ರೀಜನ್ಸ್‌ನಲ್ಲಿ ಹೇಳಿದ್ದೀರಿ. ಇವತ್ತು ನಮ್ಮ ರಾಜ್ಯದಲ್ಲಿ ಗ್ರಾಮ ಜೀವನ ಬಹಳ ಛಿದ್ರವಿಚ್ಛಿದ್ರವಾಗಿದೆ. ಶ್ರೀಮಾನ್ ಟಿ. ಸುಬ್ರಹ್ಮಣ್ಯ ಅವರು ಬಹಳ ಕಷ್ಟಪಟ್ಟು ಪ್ರಾಯಶಃ ಹಗಲಿರುಳು ದುಡಿದು ಈ ಮಸೂದೆಯನ್ನು ರಚನೆ ಮಾಡಿದರು. ಆದರೆ ಗ್ರಾಮ ಜೀವನ ಉತ್ತಮಗೊಂಡಿತೇ ಎಂದು ಅವರು ಉಪಯೋಗ ಮಾಡಿದರು. ಅದು ಯಾವ ತರಹ ಎಂಬುದನ್ನು ಯೋಚನೆ ಮಾಡಬೇಕು. ಈಗ ಗ್ರಾಮ ಪಂಚಾಯಿತಿ ಚುನಾವಣೆಯಾದ ಮೇಲೆ ಹಳ್ಳಿಗಳಲ್ಲಿ ವಿಶೇಷ ಗುಂಪು ಗುಂಪುಗಳಾಗಿ ಮನೆ ಮನೆಗೂ ಇವತ್ತೂ ದ್ವೇಷಾಸೂಯೆಗಳು ಹಬ್ಬಿವೆ. ಅಂಥಾದ್ದರಲ್ಲಿ ಇವತ್ತು ಶ್ಯಾನುಭೋಗನ

ಕೆಲಸ ಮಾಡುವುದಕ್ಕೆ ಯಾವ ಮನುಷ್ಯನೂ ತಯಾರಿಲ್ಲ. ಆತನಿಗೆ ಕೆಲಸ ಮಾಡಲು ಸಾಧ್ಯವಿಲ್ಲವೆಂದು ಹೇಳುತ್ತಾನೆ ಎಂಬುದಾಗಿ ಮಂತ್ರಿಗಳು ಹೇಳಿದರು. ಅದು ಹೇಗೆ?

ತಮ್ಮ ಶ್ಯಾನುಬೋಗಿಕೆಯ ವಿಚಾರವೂ ನನಗೆ ಗೊತ್ತು. ನಮ್ಮ ಊರಿನಲ್ಲಿ ಒಬ್ಬ ಶ್ಯಾನುಭೋಗ ಇದ್ದ. ಆತ ದಿವಾನರ ಪಕ್ಕದಲ್ಲಿ ಕುಳಿತು ಅವರ ಯೋಗಕ್ಷೇಮವನ್ನು ವಿಚಾರ ಮಾಡುತ್ತಿದ್ದ. ಹಾಗಿರುವಾಗ್ಗೆ ಇತ್ತೀಚೆಗೆ ಹೊಸ ಮಾರ್ಪಾಟು ಕೆಲವರ ಹಾವಳಿಯಿಂದ ಬಂತು. ಅದನ್ನು ಹೊಸ ಮೈಸೂರು ರಾಜ್ಯದ ಅರ್ಧ ಭಾಗ ಜನರೂ ಒಪ್ಪುವುದಿಲ್ಲ. ಆದುದರಿಂದ ಎಷ್ಟು ಜನ ಇದರಿಂದ ಕಷ್ಟಕ್ಕೆ ಸಿಕ್ಕಿದ್ದಾರೆಂಬುದನ್ನು ಸರ್ಕಾರ ಯೋಚನೆ ಮಾಡಬೇಕು. ಅಂಥಾದ್ದನ್ನು ತಿಳಿದುಕೊಳ್ಳುವ ವಿನಯ ತಮ್ಮಲ್ಲಿ ಇಲ್ಲದೇ ಹೋದರೆ ನಾನೇನು ಮಾಡಬೇಕು? ಹಿಂದೆ ಗ್ರಾಮ ಜೀವನದಲ್ಲಿ ಜನರಲ್ಲಿ ಯಾವ ವಿಧವಾದ ಅನುರಾಗ, ಪ್ರೇಮ, ಶ್ರದ್ಧೆ, ಇತ್ತೋ ಅದು ಇವೊತ್ತು ಮಾಯವಾಗಿ ಹೋಗಿದೆ. ಮೊನ್ನೆ ತಾನೇ ಒಂದು ಪ್ರಶ್ನೆಗೆ ಶ್ರೀಮಾನ್ ಸುಬ್ರಹ್ಮಣ್ಯ ಅವರು ಉತ್ತರ ಹೇಳಿದರು. ಚಿತ್ರದುರ್ಗ ಒಂದು ಜಿಲ್ಲೆಯಲ್ಲಿ ಐದು ರಿಟ್ ಪಿಟಿಷನ್‌ಗಳು ಗ್ರಾಮ ಪಂಚಾಯಿತಿ ಚುನಾವಣೆಯಾದ ಮೇಲೆ ಹೋಗಿವೆಯೆಂದು ಇದರಿಂದ ಏನು ಗೊತ್ತಾಗುತ್ತದೆಂದರೆ, ಎಷ್ಟರ ಮಟ್ಟಿಗೆ ಆಡಳಿತದಲ್ಲಿ ಬಿಗಿಯಿದೆ ಎಂಬುದು ಚೆನ್ನಾಗಿ ಗೊತ್ತಾಗುತ್ತದೆ. ನಾನು ನೋಡಿದ್ದೇನೆ. ಕೋಲಾರ ಜಿಲ್ಲೆಯಲ್ಲಿ ಗ್ರಾಮ ಪಂಚಾಯಿತಿ ಚುನಾವಣೆಯಾದಾಗ ಜನರು ಬಹಳವಾಗಿ ಓಡಾಡಿದರು. ಅಷ್ಟೇ ಅಲ್ಲ. ಮಧ್ಯದ ಬುರುಡೆಗಳೂ ಆಗ ಓಡಾಡುತ್ತಿದ್ದವು. ಅಂಥಾದ್ದನ್ನು ಲೈಫ್ ಈಸ್ ಕಮಿಂಗ್ ಆಪ್ ಎಂದು ಹೇಳಿದ್ದರೆ, ಆಗ ಅದು ಅರ್ಥವಾಗುತ್ತದೆ.

ಇಂಥಾ ಗ್ರಾಮ ಜೀವನಕ್ಕೆ ಛಿದ್ರವಿಚ್ಛಿದ್ರ ಆಗುವಂತಹ ಕಾನೂನುಗಳನ್ನು ಮಾಡಿ ಅದನ್ನು ಹೊಲಸುಗೊಳಿಸುವುದಕ್ಕೆ ಬದಲು ಈಗ ಇರುವುದನ್ನೇ ಪರಿಷ್ಕಾರ ಮಾಡಿ ಒಮ್ಮುಖವಾದ ಜೀವನ ನಡೆಸುವುದಕ್ಕೆ ಏತಕ್ಕೆ ಇವರು ಪ್ರಯತ್ನಪಟ್ಟಿಲ್ಲವೋ ಗೊತ್ತಾಗಲಿಲ್ಲ. ಅವರು ಅಶಕ್ತರು ಅಸಮರ್ಥರಾದುದರಿಂದ ಇಂತಹ ಕಾನೂನುಗಳನ್ನು ಮಾಡಿ ಇರತಕ್ಕದ್ದನ್ನು ತೊಡೆದು ಹಾಕಿ ಇನ್ನೊಂದು ತರುತ್ತೇವೆ ಎನ್ನುವ ದೃಷ್ಟಿಯಿಂದ ಮಾಡಿದರೆ ನಮ್ಮ ರಾಜ್ಯದ ಗ್ರಾಮ ಜೀವನ ಯೋಗ್ಯವಾಗಲಾರದು, ಉತ್ತಮವಾಗಲಾರದು ಎಂದು ನಾನು ಅಭಿಪ್ರಾಯಪಟ್ಟಿದ್ದೇನೆ.

ಎರಡನೆಯದಾಗಿ ಹತ್ತಾರು ವರ್ಷಗಳಿಂದ ಗ್ರಾಮಗಳಲ್ಲಿ ಲೆಕ್ಕಪತ್ರಗಳನ್ನು ಇಟ್ಟಿರತಕ್ಕ ಆ ಜನರಿಗೆ ನಮ್ಮ ಹಳ್ಳಿಯ ಸುತ್ತಮುತ್ತಲೂ ಇರತಕ್ಕ ಹೊಲಗದ್ದೆ ಎಷ್ಟು ಎಕರೆ ಎಷ್ಟು ಗುಂಟೆ ಇದೆ ಎಂಬುದು ಆ ಒಂದು ವೃತ್ತಿಯಿಂದ ಗೊತ್ತಿರುತ್ತದೆ. ಆ ಒಂದು ಅನುಭವ ಬುದ್ಧಿವಂತನಾದ ಅಕ್ಷರಸ್ಥನಾದವನಿಗೂ ಗೊತ್ತಿಲ್ಲ. ಅದನ್ನು ಇವರು ಹೇಗೆ ತಿಳಿದುಕೊಂಡಿದ್ದಾರೆ? ಅದನ್ನು ತಿಳಿದುಕೊಳ್ಳುವುದಕ್ಕೆ ಹೇಗೆ ಸಾಧ್ಯವಾಯಿತು ಎಂದರೆ ಪರಂಪರಾಗತವಾಗಿ ತಂದೆ ಮಗ, ಮೊಮ್ಮಗ ಹೀಗೆ ವಂಶ ಪಾರಂಪರ್ಯವಾಗಿ ಅವರು ಈ ವೃತ್ತಿಯನ್ನು ಮಾಡಿಕೊಂಡು ಬಂದಿರುವುದರಿಂದ ಮತ್ತು ಗ್ರಾಮ ಜೀವನದಲ್ಲಿಯೇ ಹಾಸು ಹೊಕ್ಕಾಗಿದ್ದು ರಕ್ತಗತವಾಗಿ ಬಂದಿರುವುದರಿಂದ ಆ ರೀತಿ ಅವರು ಹಳ್ಳಿಯ ಸುತ್ತಮುತ್ತ ಇರತಕ್ಕ ಹೊಲಗದ್ದೆಗಳು ಇಷ್ಟೇ ಎಕರೆ, ಇಷ್ಟೇ ಗುಂಟೆ ಇದೆ ಎಂದು

ಹೇಳುವುದಕ್ಕೆ ಸಾಧ್ಯವಾಯಿತು. ಆದರೆ ಕೆಟ್ಟವರನ್ನು ತೆಗೆದುಹಾಕುವುದು ಸರ್ಕಾರದ ಆದ್ಯ ಕರ್ತವ್ಯ. ಅಶೀಲವಂತರನ್ನು ತೊಡೆದುಹಾಕುವುದು, ಅವಿದ್ಯಾವಂತರನ್ನು ತೆಗೆದುಹಾಕುವುದೂ ತಮ್ಮ ಕರ್ತವ್ಯ. ರುಜು ಮಾಡುವುದಕ್ಕೆ ಬಾರದೆ ಇರುವ ಪಟೇಲರು ಮತ್ತು ಶ್ಯಾನುಭೋಗರನ್ನು ಸೆಕ್ರೆಟರಿಗಾಗಿ ಮಾಡಿಕೊಂಡಿದ್ದಾರೆ ಎಂದು ಕೆಲವು ಮಾನ್ಯ ಸದಸ್ಯರು ಹೇಳಿದರು. ಅದು ತುಂಬಾ ತಪ್ಪು. ಅಕ್ಷರಸ್ಥರಾದವರನ್ನೇ ಈ ಹುದ್ದೆಗೆ ಇಟ್ಟುಕೊಳ್ಳಬೇಕು. ಆದರೆ ಅವರಲ್ಲಿ ಯೋಗ್ಯರಾಗಿರುವವರನ್ನು ತೆಗೆದುಹಾಕುವ ಪ್ರಮೇಯ ಏನಿತ್ತು? ಯಾರು ರಾಜ್ಯದ ತಾಲ್ಲೂಕಿನ ಬೊಕ್ಕಸಕ್ಕೆ ನಿರಂತರವಾಗಿ ಅವಿಚ್ಛಿನ್ನವಾಗಿ ಹಣವನ್ನು ಒಪ್ಪಿಸುತ್ತಿದ್ದರೋ ಮತ್ತು ಗ್ರಾಮ ಜೀವನದಲ್ಲಿ ಮುಖಂಡರಾಗಿದ್ದರೋ ಅವರು ಪಟೇಲ ಮತ್ತು ಶ್ಯಾನುಭೋಗರ ವೃತ್ತಿಯನ್ನು ಮಾಡುತ್ತಾ ಇರಲಿಲ್ಲ. ಗ್ರಾಮದ ಪ್ರತಿನಿಧಿಗಳ ಮುಖಂಡರಾಗಿ ಕೆಲಸ ಮಾಡುತ್ತಿದ್ದರು. ಇಂಥಾ ಜನಗಳನ್ನು ತಪ್ಪಿಸಿ ಹೊಸಬರನ್ನು ಹಾಕುತ್ತೇವೆಂದು ಹೇಳುತ್ತೀರಿ. ಈಗ ಆ ಹುದ್ದೆಗಳಲ್ಲಿ ಹೊಸಬರನ್ನು ತಂದುಹಾಕಿದ ಪಕ್ಷದಲ್ಲಿ ಖಂಡಿತವಾಗಿ ಅದರಲ್ಲಿ ಅನೇಕರಿಗೆ ರುಜು ಹಾಕುವುದಕ್ಕೆ ಬದಲು ಇನ್‌ಷಿಯಲ್ ಹಾಕುವುದಕ್ಕೆ ಬರುವುದಿಲ್ಲ ಈ ಗ್ರಾಮ ನೌಕರರು ತಮಗೆ ರೂಢಮೂಲವಾದ ಭೂಮಿ ಏನಿದೆ ಅದನ್ನು ಕಳೆದುಕೊಳ್ಳುವುದಕ್ಕೆ ಸಿದ್ಧರಾಗಿದ್ದಾರೆ ಮತ್ತು ತೊಂದರೆಗೂ ಒಳಗಾಗುತ್ತಾರೆ. ಇದರಿಂದ ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕ ಜನಗಳಿಗೆ ತೊಂದರೆಯಾಗುತ್ತದೆ. ಹಿಂಸೆಯಾಗುತ್ತದೆ. ಸುಖ ದೊರೆಯಲಾರದು ಎಂದು ನಾನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಇದಕ್ಕೆ ವಿಶೇಷವಾಗಿ ದೃಷ್ಟಾಂತಗಳನ್ನೂ ಉದಾಹರಣೆಗಳನ್ನೂ ಕೊಡಬೇಕಾದ್ದಿಲ್ಲ. ಈಗ ಅನೇಕ ಸಣ್ಣ ಪುಟ್ಟ ಮುನಿಸಿಪಾಲಿಟಿಗಳಿವೆ. ಅಲ್ಲಿ ಯಾವುದಾದರೂ ಒಂದು ಫೈಲು ಹುಡುಕಬೇಕಾದರೆ ಅದಕ್ಕೆ ಯಾರು ಸಂಬಂಧಪಟ್ಟವರು ಇರುತ್ತಾರೋ ಅವರು ಒಬ್ಬ ಅಧಿಕಾರಿಯನ್ನು ನೇಮಕ ಮಾಡುತ್ತಾರೆ. ಇದರಿಂದ ಅಧಿಕಾರಿಗಳ ಅಥವಾ ಮಂತ್ರಿಗಳ ಅನುಗ್ರಹಕ್ಕೆ ಪಾತ್ರರಾಗಿದ್ದಾರೆಂದು ಪ್ರದರ್ಶನ ಮಾಡಿಕೊಳ್ಳದ ಈ ಜನರ ಆಡಳಿತ ವಿಚಕ್ಷಣತೆ ಕೆಟ್ಟು ಹೋಗಿದೆ. ಹೀಗಾಗಿ ಫೈಲು ಮುನಿಸಿಪಲ್ ಮತ್ತು ಕಾರ್ಪೊರೇಷನ್ ಆಫೀಸುಗಳಲ್ಲಿ ಸಿಕ್ಕುವುದಿಲ್ಲ. ಸೆಕ್ರೆಟರಿಯಟ್‌ಯಲ್ಲಿಯೂ ಅನೇಕ ಬಾರಿ ಮಂತ್ರಿಗಳಿಗೆ ಒಂದು ಅರ್ಜಿ ಬರೆದರೆ ಅದರ ಹಿಂದೆಯೇ ಬಂದು ಆದೇಪೇಪರನ್ನು ರೆಪ್ರ್‌ಜಂಟೇಷನ್ ಅನ್ನು ಅಥವಾ ಡಾಕ್ಯುಮೆಂಟನ್ನು ಅಧಿಕಾರ ವರ್ಗಕ್ಕೆ ತೋರಿಸಿದರೆ ಆಗ ಫೈಲು ಏನಾದರೂ ಬಂದಿದ್ದು ಗೊತ್ತಾದೀತು. ಹಾಗೆಯೇ ಈ ಎಂಟು ಸಾವಿರ ಜನಗಳೂ ಕೂಡ ಕೇವಲ ಮಂತ್ರಿಗಳ ಮನೋವೇದಿಕೆಯಲ್ಲಿ ನಿಂತಿರಬೇಕು. ಯಾರು ಯಾರನ್ನು ಇಂಥಿಂಥಾ ಪ್ರದೇಶದಲ್ಲಿ ಹಾಕಿದರೆ ಮುಂದೆ ಆಡಳಿತ ಸುಭದ್ರವಾಗಿರುವುದಕ್ಕೆ ಸಾಧ್ಯವಾದೀತು ಎಂಬುದನ್ನು ನೋಡಬೇಕು, ಮಂತ್ರಿಗಳ ಮನೋವೇದಿಕೆಯಲ್ಲಿ ಇರತಕ್ಕ ಈ ಎಂಟು ಸಾವಿರ ಜನ ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಎಲ್ಲಾ ಜನರ ರೆಕಾರ್ಡುಗಳಲ್ಲಿ ಅಂಕಿ ಅಂಶಗಳನ್ನು ಹತ್ತಾರು ವರ್ಷಗಳಿಂದ ಕೆಡದೆ ಇರುವ ರೀತಿಯಲ್ಲಿ ಇಡುವ ಸಾಮರ್ಥ್ಯವನ್ನು ಈ ಗ್ರಾಮಾಧಿಕಾರಿಗಳು ಪಡೆದಿದ್ದರು ಎಂಬುದನ್ನು ಸರ್ಕಾರದವರು ತಿಳಿದಿದ್ದಾರೆಯೇ ಎಂದು ನಾನು ಈಗ ಅವರನ್ನು ಪ್ರಶ್ನೆ ಮಾಡುತ್ತೇನೆ. ಸಾಮಾನ್ಯವಾಗಿ ಹಳ್ಳಿಗಳಲ್ಲಿ ಹತ್ತಾರು ರೆಕಾರ್ಡುಗಳು ಬೆಳೆಯುವುದಕ್ಕೆ ಸಾಧ್ಯವಿಲ್ಲ. ಅಲ್ಲಿರುವ ಕ್ರಮ ಹೇಗಿತ್ತು ಎಂದರೆ ಗ್ರಾಮ ನೌಕರರು ಹಿಂದಿನಿಂದ ತಾಲ್ಲೂಕು ಕಛೇರಿಯ ಅಂಕಿಅಂಶಗಳ ರೆಕಾರ್ಡುಗಳನ್ನು ಮೈನ್‌ಟೈನ್

ಮಾಡಿಕೊಂಡು ಬರುತ್ತಿದ್ದರು. ಸುಮಾರು 15 ವರ್ಷಗಳಿಂದ ಅವರು ಭೂಕಂದಾಯ ವಸೂಲು ಮಾಡುವುದು ಒಂದೇ ಅಲ್ಲ, ಇತರ ಎಲ್ಲಾ ಕೆಲಸಗಳನ್ನೂ ಅವರಿಗೇ ಹಂಚುತ್ತಿದ್ದರು. ಆಹಾರ ಧಾನ್ಯಗಳ ಸಂಗ್ರಹಣೆ, ಲೆಕ್ಕ ಬರೆಯುವುದು ಇತ್ಯಾದಿ ಎಲ್ಲಾ ಕೆಲಸಗಳನ್ನೂ ಅವರಿಗೆ ಹಂಚುತ್ತಿದ್ದರು. ಹೀಗಿರುವಾಗ ಎಲ್ಲಾ ರೆಕಾರ್ಡುಗಳನ್ನೂ ಉಳಿಸುವುದಕ್ಕೆ ಸಾಧ್ಯವೇ ಎಂಬುದನ್ನು ನೋಡಬೇಕು. ಏತಕ್ಕೆ ಇದನ್ನು ಇಷ್ಟು ವಿಸ್ತಾರವಾಗಿ ಹೇಳುವುದಕ್ಕೆ ಪ್ರಯತ್ನಪಟ್ಟೆನೆಂದರೆ ನಮ್ಮ ರಾಜ್ಯದಲ್ಲಿ ಹಳ್ಳಿ ಎನ್ನತಕ್ಕದ್ದು ಆಡಳಿತ ವ್ಯವಸ್ಥೆಗೆ ಮೂಲಭೂತವಾದದ್ದು. ಇಂಥಾದ್ದರಲ್ಲಿ ಸರಿಯಾದ ರೆಕಾರ್ಡುಗಳು ಇಲ್ಲದೆ ಹೋದರೆ ಅನೇಕ ಜನ ಕಷ್ಟ ನಷ್ಟಗಳಿಗೆ ತೊಂದರೆಗಳಿಗೆ ಈಡಾಗುತ್ತಾರೆ. ಅದು ಆಗಬಾರದು ಎಂದು ನಾನು ಈ ಸಂದರ್ಭದಲ್ಲಿ ಹೇಳುತ್ತೇನೆ.

ಇನ್ನು ಈ ಮಸೂದೆಯಲ್ಲಿ 3–4 ಸೆಕ್ಷನ್‌ಗಳಿವೆ. ಅವುಗಳಲ್ಲಿ ಎರಡನೇ ಸೆಕ್ಷನ್ ಅರ್ಥವ್ಯಾಪ್ತಿ ಡೆಫಿನಿಷನ್‌ಗೆ ಸಂಬಂಧಪಟ್ಟದ್ದು ಎಂದು ಹೇಳಿದ್ದಾರೆ. ಈ ಮಸೂದೆಯ 10 ಮತ್ತು 11 ನೆಯ ಅನುಚ್ಛೇದಗಳಲ್ಲಿ ಯಾರು ಪರಂಪರೆಯಿಂದ ಈ ಗ್ರಾಮಾಧಿಕಾರಿಗಳ ಕೆಲಸವನ್ನು ನೋಡಿಕೊಂಡು ಬಂದಿದ್ದರೋ ಅಂತಹ ಜನ 46,132 ಜನ ಇದ್ದಾರೆ ಎಂದು ಹೇಳಿದ್ದಾರೆ. ಇಂತಹ ಶ್ಯಾನುಭೋಗರು ಮತ್ತು ಪಟೇಲರುಗಳಿಗೆ, ಒಪ್ಪತ್ತು ಊಟಕ್ಕೆ ಸಿಗದೆ ಅಹನ್ಯಹನಿ ಕಾಲಕ್ಷೇಪ ಮಾಡುತ್ತಿರುವಂತಹ ಪರಿಸ್ಥಿತಿ ಇದೆ. ಹಿಂದೆ ನೀವು ಅಸ್ಪೃಶ್ಯರು ಎಂದು ಹೇಳುತ್ತಿದ್ದವರನ್ನು ಗಾಂಧೀಜಿಯವರು ಹರಿಜನರೆಂದು ಕರೆದು ಅವರ ಸ್ಥಾನಮಾನವನ್ನು ಏರಿಸುವುದಕ್ಕೆ ಪ್ರಯತ್ನ ಪಟ್ಟಿದ್ದೀರಿ ಆದರೆ ವಂಶ ಪಾರಂಪರ್ಯವಾಗಿ ರಾಜ್ಯದ ಆಡಳಿತವನ್ನು ನಿರ್ವಹಣೆ ಮಾಡುತ್ತಿದ್ದ 46,132 ಮಂದಿಗೆ ನೌಕರಿ ಇಲ್ಲದಂತೆ ತಾವು ಮಾಡಿರುವುದು ಯೋಗ್ಯವೇ ಎಂದು ಹೇಳುತ್ತಿದ್ದೇನೆ. ಇದು ಯಾವ ರೀತಿಯಾದ ಮಾಡ್ರನ್ ಸ್ಪಿರಿಟ್ ಎಂದು ನಾನು ಕೇಳುತ್ತೇನೆ. ಅವರನ್ನು ಪಟ್ಟಭದ್ರರನ್ನಾಗಿ ಮಾಡಬೇಕು. ಅವರಿಗೆ ವಿಶೇಷ ಅಧಿಕಾರಿಗಳನ್ನು ಕೊಡಬೇಕು ಮತ್ತು ಅವರ ಜೀವನವನ್ನು ಸುಗಮವಾಗಿ ಮಾಡಲು ಏರ್ಪಾಡು ಮಾಡಬೇಕಾಗಿತ್ತು. ಇದರ ಮೇಲೆ ಅವರ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಲಕ್ಷ್ಯವಿಡಬೇಕಾಗಿತ್ತು. ಅವರು ಮನಃ ಪೂರ್ವಕವಾಗಿ ಕೆಲಸ ಮಾಡುವುದಕ್ಕೆ ತಕ್ಕಷ್ಟು ಸಹಾಯಗಳನ್ನು ಒದಗಿಸಿ ಕೊಡಬೇಕಾಗಿತ್ತು. ಇಂತಹ ಮಸೂದೆಯನ್ನು ತಂದು ಗ್ರಾಮಾಧಿಕಾರಿಗಳ ಜೀವನವನ್ನು ಸುಸೂತ್ರವಾಗಿ ಮಾಡುವ ಮತ್ತು ಇವರ ಜೀವನವನ್ನು ಸ್ವರ್ಗವನ್ನಾಗಿ ಮಾಡುವ ಚಿತ್ರದ ಹಾಗೆ ಇದೆ ಎಂದು ಹೇಳುವುದು ಯಾವ ರೀತಿಯಲ್ಲಿಯೂ ನಿಜವಲ್ಲವೆಂದು ಮತ್ತೊಮ್ಮೆ ಹೇಳಬೇಕಾಗಿದೆ.

ಶ್ಯಾನುಭೋಗರಿಗೆ ಬದಲಾಗಿ ಬೇರೊಬ್ಬ ಅಧಿಕಾರಿ ಬರುತ್ತಾರೆ ಅಷ್ಟೆ. ಎಂದರೆ ಕೇವಲ ಒಂದು ಹೆಸರಿನಲ್ಲಿ ಬದಲಾವಣೆಯಾಗುತ್ತದೆ. ಕನ್ನಡದಿಂದ ಇಂಗ್ಲಿಷಿಗೆ ಬದಲಾಯಿಸುವ ಪದದಂತೆ ಮಾತ್ರ ಆಗುತ್ತದೆ. ಗೌರವ, ಸ್ಥಾನ ಮಾತ್ರ ಹಾಗೇ ಉಳಿದಿರುತ್ತದೆ. ಇದು ಸರಕಾರದ ಕಡೆಯಿಂದ ಬಂದಿರುವ (ದುರಾಲೋಚನೆ ಎಂದು ಕರೆಯುವುದಿಲ್ಲ) ದೂರಾಲೋಚನೆ ಎಂದು ಮಾತ್ರ ಹೇಳುತ್ತೇನೆ.

ಇದು ಸರಕಾರ ಯಾವಾಗಲೂ ಮಾಡತಕ್ಕ ಕೈವಾಡ. ಇಂತಹ ಸಂಖ್ಯೆಗಳನ್ನು ಕೊಡುವಾಗ ಕಮ್ಮಿ ಸಂಖ್ಯೆಯನ್ನು ಕೊಡುತ್ತಾರೆ. ಮುಂದೆ ಇದು 8000ಕ್ಕೆ ಹೋಗುತ್ತದೆ. ಈ 8000 ಜನಕ್ಕೆ

ಕೊಡತಕ್ಕ ಸಂಭಾವನೆಯನ್ನು ಈ ಶ್ಯಾನುಭೋಗರುಗಳಿಗಾಗಿ 52 ಲಕ್ಷ ಖರ್ಚು ಮಾಡಬೇಕಾಗಿದೆ. ಆ ನಂತರ ಇವರಿಗಾಗಿ 62 ಲಕ್ಷವಾಗುತ್ತದೆ ಎಂದು ಇಲ್ಲಿ ಹೇಳಲಾಗಿದೆ. ಯಾವ ಗ್ರಾಮ ನೌಕರರುಗಳಿಗೆ ಎಂದರೆ, ಶ್ಯಾನುಭೋಗರು ಮತ್ತು ಪಟೇಲರುಗಳಿಗೆ ಕಂದಾಯ ವಸೂಲಿ ಮಾಡುವುದಕ್ಕಾಗಿ ಮತ್ತು ಇನ್ನಿತರ ಕೆಲಸಗಳನ್ನು ಮಾಡುವುದಕ್ಕಾಗಿ ಅವರಿಗೆ ಕೊಡುತ್ತಿದ್ದ ಪೋಟಿಗೆಯಿಂದ ಅವರ ಜೀವನವೇ ಸರಿಯಾಗಿ ನಡೆಯುತ್ತಿರಲಿಲ್ಲ ಮತ್ತು ಅಲ್ಲಿ ಸಂಪೂರ್ಣವಾಗಿ 'ಕರ್‌ಪಶನ್' ಅನ್ನು ನಿಲ್ಲಿಸಲಾಗಲಿಲ್ಲ. ಈಗ ಅವರನ್ನು ತೆಗೆದು ಸೆಕ್ರೆಟರಿಗಳು ಎಂದು ಸೇರಿಸಿದರೆ ಇದು ಇನ್ನೂ ನಿರ್ಜೀವವಾಗುತ್ತದೆ. ಈಗಾಗಲೇ ಹಳ್ಳಿಗಳಲ್ಲಿರುವ ವೈಷಮ್ಯ, ದಾರಿದ್ರ್ಯ ಪ್ರಬಲವಾಗಿ ಅಲ್ಲಿರತಕ್ಕವರೆಲ್ಲಾ ಹಳ್ಳಿಗಳನ್ನು ಬಿಟ್ಟು ಪಟ್ಟಣಕ್ಕೆ ಬರುತ್ತಿದ್ದಾರೆ ಮತ್ತು ಉದ್ಯೋಗವನ್ನು ಮಾಡುವುದಕ್ಕೆ ಆರಂಭಿಸಿದ್ದಾರೆ. ಹಳ್ಳಿಗಳಲ್ಲಿರುವ ರಾಕ್ಷಸ ಜನಗಳ ಹಿಂಸೆಯನ್ನು ತಡೆಯಲಾರದೆ ಅಲ್ಲಿನ ಜನ ಪಟ್ಟಣಕ್ಕೆ ಬಂದು ಸೇರುತ್ತಿದ್ದಾರೆ. ಇಂತಹವರ ಸಂಖ್ಯೆ ಕೂಡ ಹೆಚ್ಚಾಗುತ್ತದೆ.

ಇದರಲ್ಲಿರುವ ಫೈನಾನ್‌ಷಿಯಲ್ ಮೆಮೊರ್‍ಯಾಂಡಂನಲ್ಲಿ ನಿಜವಾದ ಅಂಕಿಅಂಶಗಳಿಲ್ಲ. ಕಾಂಪ್‌ನೆಸೇಷನ್ನು ಕೊಡುವ ಮಾತಿಲ್ಲ. ಎಂಟು ಸಾವಿರ ಜನಗಳಿಗೆ ಸಾಮಾನ್ಯವಾಗಿ ಸೆಕೆಂಡ್ ಗ್ರೇಡ್ ಕ್ಲಾರ್ಕಿಗೆ ಕೊಡುವ ಅಥವಾ ಪ್ರೈಮರಿ ಶಾಲಾ ಉಪಾಧ್ಯಾಯರಿಗೆ ಕೊಡುವ ಸಂಬಳ ಎಂದರೆ 50–100 ಮತ್ತು ತುಟ್ಟಿಭತ್ಯೆ ಇದರ ಜೊತೆಗೆ ಸುಮಾರು 30–35 ರೂಪಾಯಿಗಳು ಎಂದರೆ ಸುಮಾರು ನೂರು ರೂಪಾಯಿಗಳು ಎಂದು ಒಬ್ಬ ಸೆಕ್ರೆಟರಿಗೆ ಒಂದು ತಿಂಗಳಿಗೆ ಕೊಟ್ಟರೆ 10000 ಜನಕ್ಕೆ ಎಷ್ಟು ವೆಚ್ಚವಾಗುತ್ತದೆ ಎನ್ನುವುದನ್ನು ನೋಡಿದರೆ, ಇಲ್ಲಿ ಹೇಳಿರುವುದು ನಿಜವಾದುದಲ್ಲ ಮತ್ತು ಸತ್ಯಕ್ಕೆ ದೂರವಾದುದು ಎಂದು ನಾನು ಹೇಳುತ್ತೇನೆ.

ನಮ್ಮ ಹಳ್ಳಿಯಲ್ಲಿ ಕುಮಾರಯ್ಯ ಶೆಟ್ಟಿ ಎನ್ನುವ ವರ್ತಕರು ಒಬ್ಬರಿದ್ದರು. ಅವರು ಚೆನ್ನಾಗಿ ವ್ಯಾಪಾರ ಮಾಡುವ ವರ್ತಕರು, ಅವರು ಲೆಕ್ಕವನ್ನು ಬರೆಯುವಾಗ ತಮಗೆ ಬರಬೇಕಾದ ಬಾಕಿ ಹಣದ ಲೆಕ್ಕವನ್ನು ಮಾತ್ರ ಬರೆಯುತ್ತಿದ್ದರು ಮತ್ತು ಅವರಿಗೆ ಬರುತ್ತಿದ್ದ ಹಣದ ಲೆಕ್ಕವನ್ನು ಬರೆಯುತ್ತಿರಲಿಲ್ಲ. ಆ ರೀತಿಯಾಗಿ ಇಲ್ಲಿ ಇಂದು ಈ ಮಸೂದೆ ಬಂದಿದೆ ಎಂದು ನನಗೆ ಕಾಣುತ್ತದೆ. ಗ್ರಾಮ ನೌಕರಿ ಮಾಡತಕ್ಕ ಜನರಸ್ಥಿತಿ ಹೀಗಿದೆ. 25–30 ವರ್ಷಗಳ ಸರ್ವಿಸು ಮಾಡಿರುವ ಪೆನ್‌ಕ್ಷನ್‌ದಾರರುಗಳಿಗೆ ತುಟ್ಟಿಭತ್ಯೆಯನ್ನು ಹೆಚ್ಚು ಕೊಡುವುದಕ್ಕೆ ಸಾಧ್ಯವಿಲ್ಲ ಇರುವಾಗ ವಂಶಪಾರಂಪರ್ಯವಾಗಿ ಆಡಳಿತದ ಅನುಭವವನ್ನು ಪಡೆದು ಸುಭದ್ರವಾಗಿ ನಡೆಸಿಕೊಂಡು ಬಂದಿರತಕ್ಕಂತಹ ಈ ನೌಕರರುಗಳಿಗೆ ತಾವು ಕೊಡತಕ್ಕ ಹಣ ಎಂದರೆ, ಮಿರಾಸ್ ಅಥವಾ ಸಂಭಾವನೆಯನ್ನು ಮೊಟಕು ಮಾಡಿ ಮತ್ತು ಅವರಿಗೆ ಬರಬೇಕಾದ ಜಮೀನುಗಳ ಅಕ್ಯುಪನ್ಸಿ ರೈಟುಗಳನ್ನು ಪಡೆಯಲು ಅವರಿಗೆ ಕೊಡಬೇಕಾದ ಹಣವನ್ನು ಹೆಚ್ಚು ಮಾಡಿಕೊಂಡಿದ್ದಾರೆ.

ಇದು ನನ್ನ ಮನಸ್ಸನ್ನು ಬಹಳ ನೊಂದಿದೆ. ನಿಮ್ಮ ಮನಸ್ಸು ಇಷ್ಟು ಕೆಳಮಟ್ಟಕ್ಕೆ ಬರುವುದಕ್ಕಿಂತ ಉದಾರವಾಗಿ ಕೊಡುವಂತಹ ಮನಸ್ಸಿನ ಪರಿವರ್ತನೆ ಮಂತ್ರಿಮಂಡಲದಲ್ಲಿ ಬರಲಿಲ್ಲವಲ್ಲ ಎನ್ನುವುದು ಒಂದು ವಿಧವಾದ ಜಿಗುಪ್ಸೆಗೆ ಕಾರಣವಾಗಿದೆ. ಅವರು ಪ್ರಜಾ ವರ್ಗಕ್ಕೆ ಸೇರಿರತಕ್ಕ ಜನ ಮತ್ತು ಈ

ದೇಶದ ಎರಡು ಕೋಟಿ ಜನಕ್ಕೆ ಸೇರಿದಂತಹ ಜನ. ನಿಮ್ಮ ಮುಖ ನೋಡಿಕೊಂಡು ಅವರ ಸ್ಥಾನದಲ್ಲಿದ್ದುಕೊಂಡು ತಮ್ಮ ಜೀವನವನ್ನು ಸಾಗಿಸುತ್ತಿದ್ದಂತಹವರಿಗೆ ಸ್ವಲ್ಪ ಔದಾರ್ಯವನ್ನು ತೋರಿಸಬೇಕಾಗಿತ್ತು.

ಇನ್ನು ಮುಂದೆ ಪುಟ 15ರಲ್ಲಿ ಮೆಮೊರಂಡಮ್ ರಿಗಾರ್ಡಿಂಗ್ ಡೆಲಿಗೇಟೆಡ್ ಲಿಜೆಸ್ಲೇಷನ್ ಎಂದು ಇದೆ. ಈ ರೀತಿಯಾದ ಡೆಲಿಗೇಟೆಡ್ ಲೆಜಿಸ್ಲೇಷನ್ನು ಎನ್ನುವುದು ಎಲ್ಲ ಪ್ರಭುತ್ವದಲ್ಲಿಯೂ ಇರುತ್ತದೆ. ಈ ರೀತಿ ಡೆಲಿಗೇಟೆಡ್ ಲೆಜಿಸ್ಲೇಷನ್ ಯಾವಾಗ ಬರುತ್ತದೆ ಎಂದರೆ, ಕಾನೂನುಗಳು ಯಾವಾಗ ಹೆಚ್ಚು ಹೆಚ್ಚಾಗಿ ಬರುತ್ತವೋ ಆಗ ಎಲ್ಲವನ್ನೂ ಕಾನೂನಲ್ಲಿಯೇ ಅಡಕ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಇದಕ್ಕೋಸ್ಕರ ಡೆಲಿಗೇಟೆಡ್ ಲೆಜಿಸ್ಲೇಷನ್ನು ಮಾಡುತ್ತಾರೆ. ತಾತ್ವಿಕವಾದ ವಿಷಯಗಳನ್ನು, ರೂಢಮೂಲವಾದ ವಿಷಯಗಳನ್ನು, ರೂಲ್ಸುಗಳನ್ನು ಮಾಡುವುದಕ್ಕೆ ಬರುವುದಿಲ್ಲ. ರೂಲ್ ಮೇಕಿಂಗ್‌ನಲ್ಲಿ ಅಧಿಕಾರಗಳನ್ನು ಚಲಾಯಿಸುವುದಕ್ಕೆ ಉಪಯೋಗಿಸುತ್ತಾರೆ. ಮಿಕ್ಕ ಎಲ್ಲವನ್ನೂ ಕಾನೂನಿನಲ್ಲಿಯೇ ಅಡಕ ಮಾಡುವುದು ಸೂಕ್ತ.

ನನಗಿಂತ ಹೆಚ್ಚು ಕಾನೂನಿನಲ್ಲಿ ಶಾಸ್ತ್ರ ಪರಿಣತರಾಗಿರತಕ್ಕ ಶ್ರೀಮಾನ್ ಸುಬ್ರಹ್ಮಣ್ಯ ಅವರಿಗೆ ಈ ವಿಷಯಚೆನ್ನಾಗಿ ವೇದ್ಯವಾಗಿರುತ್ತದೆ. ಇಲ್ಲಿ ಅವನು ಜಮೀನನ್ನು ಅನುಭವಿಸುತ್ತಿದ್ದಾನೆ. ಅದನ್ನು ಟೆಕ್ನಿಕಾಲಿಟಿಸ್ ಗೋಸ್ಕರ ತೆಗೆದುಕೊಳ್ಳುತ್ತೀರಿ. ಸರ್ಕಾರಕ್ಕೆ ರಾಜ್ಯಕ್ಕೆ ಸೇರಿದ್ದು ಎಂದು ತೆಗೆದುಕೊಳ್ಳುತ್ತೀರಿ. ಇದನ್ನು ತೆಗೆದುಕೊಂಡು ಆಕ್ಯುಪನ್ಸಿ ರೈಟ್ಸ್ ಕೊಡುವಾಗ ಎಷ್ಟು ಹಣ ಸಂದಾಯ ಮಾಡಬೇಕು ಎನ್ನುವುದನ್ನು ಕಾನೂನಿನಲ್ಲಿ ಅಡಕ ಮಾಡಬಹುದು. ಕಾಲನಿಯಮವನ್ನು ರೂಲ್ ಮೇಕಿಂಗ್ ಪವರ್‌ಗೆ ಬಿಡಬಾರದು. ಕ್ಲಾಜ್ 18 ಎಲ್ಲ ಮಸೂದೆಗಳಲ್ಲಿಯೂ ಸಾಮಾನ್ಯವಾಗಿ ಹಾಕತಕ್ಕದ್ದು ಅದನ್ನು ಒಪ್ಪಿಕೊಳ್ಳುತ್ತೇನೆ.

ಇತ್ತೀಚೆಗೆ ನಡೆಯುತ್ತಿರತಕ್ಕ ಭೂಸುಧಾರಣೆಗಳ ಕಾನೂನಿನಲ್ಲಿ, ನಮ್ಮ ರಾಜ್ಯದಲ್ಲಿ ನಡೆದಿರುವ ಇತರ ಕಾನೂನುಗಳಲ್ಲಿ ಇದನ್ನು ನಿಷ್ಕೃಷ್ಟವಾಗಿ ಮಸೂದೆಯಲ್ಲಿಯೇ ಸೇರಿಸಿದ್ದಾರೆ. ಇತರ ಮಸೂದೆಗಳಲ್ಲಿ ನಿರ್ದಿಷ್ಟವಾಗಿ ಅಡಕ ಮಾಡಿರುವ ಅಂಶವನ್ನು ಈ ಮಸೂದೆಯಲ್ಲಿ ರೂಲ್ ಮೇಕಿಂಗ್ ಪವರ್‌ನಲ್ಲಿ ಹಾಕಿದ್ದಾರೆ. ಐದನೆಯ ಅನುಚ್ಛೇದದ ಒಂದನೆಯ ಸಬ್‌ಕ್ಲಾಜಿನಲ್ಲಿರತಕ್ಕದ್ದು ಮತ್ತು ಹನ್ನೊಂದನೆಯ ಕ್ಲಾಜ್‌ನಲ್ಲಿರತಕ್ಕದ್ದನ್ನು ಹೀಗೆ ಮಾಡಿದ್ದಾರೆ. ಆದುದರಿಂದ ಡೆಲಿಗೇಟೆಡ್ ಲೆಜಿಸ್ಲೇಷನ್ ಎನ್ನುವುದರಲ್ಲಿ ಎಷ್ಟು ಅಧಿಕಾರವನ್ನು ರೂಲ್ಸ್ ಮಾಡುವುದಕ್ಕೆ ನಿಯಮಗಳನ್ನು ಮಾಡುವುದಕ್ಕೆ ಸರ್ಕಾರ ಇವರಲ್ಲಿ ತೆಗೆದುಕೊಳ್ಳಬೇಕೋ ಅದಕ್ಕಿಂತ ಹೆಚ್ಚು ಅಧಿಕಾರವನ್ನು ತೆಗೆದುಕೊಂಡಿದ್ದಾರೆ. ಈ ರೀತಿಯ ಬದಲಾವಣೆಯನ್ನು ಮಾಡತಕ್ಕದ್ದು ಯುಕ್ತವೇ ಎಂದು ಈ ಸಮಯದಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ.

ಈ ಮಸೂದೆಯ ಎರಡು ಮತ್ತು ಮೂರನೆಯ ಪುಟಗಳಲ್ಲಿ ಲಕ್ಷಣಗಳನ್ನು ಹೇಳಿದ್ದಾರೆ. ಅದಕ್ಕೆ ಮೊದಲು ಮೊದಲನೆಯ ಅನುಚ್ಛೇದದಲ್ಲಿ ಶಾರ್ಟ್ ಟೈಟಲ್, ಎಕ್ಸ್‌ಟೆಂಟ್ ಅಂಡ್

ಕಮನ್ಸ್‌ಮೆಂಟ್ ಎಂದು ಇದೆ, ಇದರಲ್ಲಿ ಮೂರನೆಯ ಅನುಚ್ಛೇದವಿದೆ ಅದರಲ್ಲಿ "ರಾಜ್ಯ ಸರ್ಕಾರದವರು ಅಧಿಸೂಚನೆಯ ಮೂಲಕ ಗೊತ್ತು ಮಾಡಬಹುದಾಂಥ ತಾರೀಖಿನಿಂದ ಜಾರಿಯಲ್ಲಿ ಬರತಕ್ಕದ್ದು, ಮತ್ತು ಮೈಸೂರು ರಾಜ್ಯದ ವಿವಿಧ ಜಿಲ್ಲೆಗಳ ಸಂಬಂಧದಲ್ಲಿ ಅಥವಾ ವಿವಿಧ ವರ್ಗಗಳ ವಿವಿಧ ವರ್ಗಗಳು ಎನ್ನುವುದು ನನಗೆ ಅರ್ಥವಾಗುವುದಿಲ್ಲ.

"...... ಅನುವಂಶಿಕ ಗ್ರಾಮ ನೌಕರಿಗಳ ನಿಮಿತ್ತವಾಗಿ ವಿವಿಧ ತಾರೀಖುಗಳನ್ನು ಗೊತ್ತು ಮಾಡಬಹುದು..."

ಎಂದು ಇದೆ. ನಿನ್ನೆಯ ದಿವಸ ನನ್ನ ಮಿತ್ರರಾದ ಶ್ರೀಮಾನ್ ಈಶ್ವರಪ್ಪನವರು ಒಂದು ವಿಷಯವನ್ನು ಅಪ್ಪಣೆ ಕೊಡಿಸಿದರು. ಮಸೂದೆಯನ್ನು ಕಾನೂನು ಮಾಡಿ ಜಾರಿಗೆ ತರುವಾಗ ಸಾರ್ವತ್ರಿಕವಾಗಿ ಇಡಿಯ ರಾಜ್ಯದಲ್ಲೆಲ್ಲ ಒಂದು ತಾರೀಖಿನಿಂದ ತರಬೇಕಾದ್ದು ಯೋಗ್ಯ. ಇದನ್ನು ಹಂತಹಂತವಾಗಿ, ಮೆಟ್ಟಲು ಮೆಟ್ಟಲಾಗಿ ಜಾರಿಗೆ ತರುವ ಪಕ್ಷದಲ್ಲಿ ಅದು ಯೋಗ್ಯವಾಗುವುದಿಲ್ಲ. ಇದರ ಹಿಂದೆ ಯಾವುದಾದರೂ ಉದ್ದೇಶ ಸರ್ಕಾರಕ್ಕೆ ಇದ್ದರೆ ಅದು ಸಾಧಿತವಾಗುವುದಿಲ್ಲ ಎಂದು ಹೇಳಿದರು. ಉದ್ದೇಶವಂತೂ ಅವರು ಹೇಳಲಿಲ್ಲ. ಕೊಳೆತ ಇಲಿಯನ್ನು ಹೊರಗೆ ಹಾಕಲಿಲ್ಲ. ಅದನ್ನು ಹಾಕಿದ್ದರೆ ಐ ವುಡ್ ನಾಟ್ ಹ್ಯಾವ್ ಸ್ಮೆಲ್ಟ್.

ಮೈಸೂರು ರುಮಾಲನ್ನು ಹಾಕಿಕೊಳ್ಳಬೇಕೆಂದು ಆಸೆಪಡುವ ಮತ್ತು ರಾಜ್ಯದ ಸೇವೆ ಮಾಡಬೇಕೆಂಬ ಜನ ಇದ್ದಾರೆ. ಅವರಿಗೆ ವಿವೇಚನೆಯಿಲ್ಲ, ಮೂರ್ಖರು ಎಂದು ಹೇಳಬಹುದು. ಆದರೆ ಆಸೆ ರಕ್ತಗತವಾಗಿದೆ. ದೇಶಸೇವೆ ಮಾಡಬೇಕೆಂಬ ಆಸೆ, ಗ್ರಾಮ ರಾಜ್ಯದ ಪ್ರಾತಿನಿಧ್ಯ ಪಡೆಯಬೇಕೆಂಬ ಆಸೆ ಯೋಗ್ಯವಾದುದು. ಅದನ್ನು ನಾವು ಅಲ್ಲಗಳೆಯಬಾರದು.

ಅವರೂ ಬರುತ್ತಾರೆ. ಅದಕ್ಕೆ ಹೆಚ್ಚಾಗಿ ಹೇಳುವುದಕ್ಕೆ ಹೋಗಿಲ್ಲ. ನೀವೇ ಊಹೆ ಮಾಡಿಕೊಳ್ಳಿ. ತಾವು ಪ್ರತಿಭಾನ್ವಿತರಾದವರು. ಒಂದು ಕಡೆ ನಿರುದ್ಯೋಗಿಗಳನ್ನು ಸೃಷ್ಟಿ ಮಾಡಿ ಇನ್ನೊಂದು ಕಡೆ ಬೇಕಾದವರನ್ನು ತಂದು ಹಾಕುವುದಕ್ಕೆ ಆಲೋಚನೆ ಮಾಡಿದ್ದೀರಿ. ಅಹಿರಾವಣ ಮಹಿರಾವಣರು ಕಾಲಕ್ರಮದಲ್ಲಿ ಹುಟ್ಟುತ್ತಾರೆ. ಎಷ್ಟೋ ಅನಾಹುತವಾದ ಮೇಲೆ ಎಷ್ಟೋ ಜನರನ್ನು ತಿಂದಮೇಲೆ ಶಾಂತಿ ನೆಲೆಸಬಹುದು. ಈ ಅಹಿರಾವಣ, ಮಹಿರಾವಣರ ಸೃಷ್ಟಿ ಈಗಿನ ಪ್ರಭುತ್ವ ಪಕ್ಷಮಾಡಬಾರದಾಗಿತ್ತು ಎಂದು ಹೇಳಿದೆ. ಆದುದರಿಂದಲೇ ಇದು ಅಕಾಲಿಕವೆಂದು ಹೇಳಿದೆ. ಹತ್ತು ವರ್ಷಗಳಾದ ಮೇಲೆ ರಾಜ್ಯದ ಆಯವ್ಯಯ ಪರಿಸ್ಥಿತಿ ಉತ್ತಮಗೊಂಡಿರುವುದರಿಂದ ಗ್ರಾಮಾಂತರ ಪ್ರದೇಶಗಳಲ್ಲಿ ವೈಷಮ್ಯ ಕಡಿಮೆಯಾಗಿರುವಾಗ, ಪ್ರಭುತ್ವ ಪಕ್ಷ ಸುಭದ್ರವಾಗಿದ್ದು ಬದಲಾವಣೆಯಾಗತಕ್ಕ ಕಾಲ ಕಳೆದು ಹೋದಮೇಲೆ ಇಂಥ ಮಸೂದೆಯನ್ನು ತರುವುದು ಯೋಗ್ಯ ಎಂದು ನಾನು ಹೇಳುತ್ತೇನೆ.

ಇಡಿಯ ರಾಜ್ಯಕ್ಕೆ ಒಂದು ಕಾನೂನು ಅನ್ವಯವಾಗಬೇಕು. ಇಲ್ಲದೆ ಹೋದ ಪಕ್ಷದಲ್ಲಿ ನೋವು ತಪ್ಪುವುದಿಲ್ಲ. ನನ್ನ ದೃಷ್ಟಿಯಿಂದ ಜನಗಳಿಗೆ ನೋವು ತಪ್ಪುವುದಿಲ್ಲ. ಅಧಿಕಾರವನ್ನು ನಡೆಸತಕ್ಕ ಜನರಿಗೆ ನೋವು ತಪ್ಪುವುದಿಲ್ಲ. ಒಳ್ಳೆಯ ಕಾಲದಲ್ಲಿ ಯೋಗ್ಯವಾದ ದಿವಸ ರಾಹುಕಾಲ ಕಳೆದ

ಮೇಲೆ ಈಗಿನ ಅಧಿವೇಶನವನ್ನು ಪ್ರಾರಂಭ ಮಾಡಿದ ಹಾಗೆ ಜಾರಿ ಮಾಡಿ, ಅದರಲ್ಲಿ ತೊಂದರೆ ಇಲ್ಲ. ಅಂಥ ದಿವಸ ಈ ಮಸೂದೆಯನ್ನು ಇಡೀ ರಾಜ್ಯಕ್ಕೆ ಅನ್ವಯಿಸುವಂತೆ ಮಾಡಬಹುದು. ಪೀಸ್ ಮೀಲ್ ಆಗಿ ತಾಲ್ಲೂಕು ತಾಲ್ಲೂಕಿಗೆ, ಜಿಲ್ಲೆ ಜಿಲ್ಲೆಗೆ ಇದನ್ನು ಅನ್ವಯಿಸಬಾರದೆಂದು ನಾನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ.

ಇಂಥ ಕಾನೂನುಗಳು ನಮ್ಮಲ್ಲಿ ಹೆಚ್ಚು ಹೆಚ್ಚು ಬರುತ್ತಿವೆ. ಯಾವ ರಾಜ್ಯವನ್ನು ಸುಖೀರಾಜ್ಯವೆಂದು ಕರೆಯುತ್ತೇವೆಯೋ ಅಲ್ಲಿ ಕಾನೂನುಗಳು ವಿಶೇಷವಾಗಿರುವುದಿಲ್ಲ, ಅಲ್ಲಿ ಜನತೆಯ ಜೀವನ ಸುಗಮವಾಗಿರುತ್ತದೆ. ಅಂಥ ದೇಶ ಸುಖೀರಾಜ್ಯವೆಂದು ತಿಳಿದು ಕೊಂಡಿದ್ದೇನೆ. ಅದು ವೆಲ್‌ಫೇರ್ ಸ್ಟೇಟ್ ಎಂದು ನಾನು ಭಾವಿಸಿಕೊಂಡಿದ್ದೇನೆ.

ಇನ್ನು ಅಧಿಕಾರ ಮಂಡಲಿಯ ವಿಷಯವಾಗಿ ಹೇಳುವುದಾದರೆ ಡೆಪ್ಯುಟಿ ಕಮೀಷನರಿಗೆ ವಿಶೇಷವಾದ ಕೆಲಸ ಬಂದಿದೆ. ಆದೃಷ್ಟಿಯಿಂದ ಜಿಲ್ಲೆಯ ಆಡಳಿತದಲ್ಲಿರತಕ್ಕ ಅಧಿಕಾರಿಗಳು ಯಾರಿದ್ದಾರೆ, ಡೆಪ್ಯುಟಿ ಕಮೀಷನರ್ ಎಂದು ಹೆಸರು ಪಡೆದಿರುವವರು ಯಾರಿದ್ದಾರೆಯೋ ಅವರು ಈ ಕೆಲಸ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಅವರಿಗೆ ನೂರಾರು ಕೆಲಸಗಳನ್ನು ಹಚ್ಚಿದ್ದಾರೆ. ಯಾರಾದರೂ ಒಬ್ಬ ವಿಶೇಷ ಅಧಿಕಾರಿಯನ್ನು ಡೆಪ್ಯುಟಿ ಕಮೀಷನರ್ ಎಂದು ಕರೆಯಬಹುದು. ಹೆಚ್ಚು ಕೆಲಸವಿಲ್ಲದ ಜಿಲ್ಲೆಗಳಲ್ಲಿರುವ ಡೆಪ್ಯುಟಿ ಕಮೀಷನರಿಗೇ ಈ ಕೆಲಸವನ್ನು ವಹಿಸಬಹುದು. ಅದನ್ನು ಆಡಳಿತಕ್ಕೆ ಬಿಡಬೇಕಾದ್ದು, ಆ ಅಧಿಕಾರ ಸರ್ಕಾರದಲ್ಲಿ ನಿಲ್ಲಬೇಕಾದ್ದು ಯೋಗ್ಯ. ಇಬ್ಬರು ಮೂವರು ಡೆಪ್ಯುಟಿ ಕಮೀಷನರುಗಳು ಎನ್ನುವ ಅರ್ಥ ಕಲ್ಪನೆಯಾಗುತ್ತದೆಂದು ಮಾನ್ಯ ಸದಸ್ಯರು ಹೇಳಿದ್ದು ಸರಿಯಲ್ಲವೆಂದು ನಾನು ಅಂದು ಕೊಂಡಿದ್ದೇನೆ. ಸರ್ಕಾರದವರ ಉತ್ತರ ಯೋಗ್ಯವಾದದ್ದು ಮತ್ತು ಲಕ್ಷಣಗಳು ಸರಿಯಾಗಿದೆ ಎಂದು ನನ್ನ ಅಭಿಪ್ರಾಯ. ಐದನೆಯ ಅನುಚ್ಛೇದ ಸ್ವಾರಸ್ಯವಾದದ್ದು. ಇದನ್ನು ಹತ್ತನೆಯ ಅನುಚ್ಛೇದದೊಡನೆ ಹೋಲಿಸಿ ನೋಡಬೇಕಾದ್ದು ಯೋಗ್ಯ. ಇವರೆಡೇ ಮುಖ್ಯವಾದವು. ಅವರಿಗೆ ಮಿರಾಸೆ ಎನ್ನತಕ್ಕದ್ದು, ಕೆಲವು ಕಡೆ, ಇನಾಂತಿಗಳು ಎಂದು ಇನ್ನೊಂದು ಕಡೆ, ಜೋಡಿ ಎಂದು ಕೆಲವು ಕಡೆ, ವರ್ತ ಎಂದು ಇತರ ಕಡೆ ಕರೆಯುತ್ತಾರೆ. ಇದು ಹತ್ತಾರು ವರ್ಷಗಳಿಂದ ನಡೆದುಕೊಂಡು ಬಂದಿರುವುದು.

ಇನ್ನು ಮೈಸೂರು ರಾಜ್ಯದ ಚರಿತ್ರೆಯನ್ನು ಹೇಳುವ ಪಕ್ಷದಲ್ಲಿ ಸುಮಾರು ಟಿಪ್ಪುಸುಲ್ತಾನ್, ಹೈದರಾಲಿ ರಾಜ್ಯಭಾರ ಮಾಡುವ ಕಾಲದಲ್ಲಿ ಒಂದು ಇನಾಂ ಸೆಟಲ್‌ಮೆಂಟ್ ಆಯಿತು. ದಿವಾನ್ ಪೂರ್ಣಯ್ಯನವರ ಕಾಲದಲ್ಲಿ ಗ್ರಾಮ ನೌಕರರು ಯಾರು ಇದ್ದರು ಅವರಿಗೆ ಕೊಡಬೇಕಾದ ಮಿರಾಸೆ, ಅವರು ಅನುಭವಿಸಿದ್ದ ಭೂಮಿ, ಕಾಣಿಕೆ ಏನಿವೆ ಅವನ್ನು ಸೆಟಲ್‌ಮೆಂಟ್ ಮಾಡಿದರು. ಅವರಿಗೇ ಅದನ್ನು ರೂಡಮೂಲ ಮಾಡಿದರು. ಇದಾದ ಮೇಲೆ 1863ನೇ ಇಸವಿಯಲ್ಲಿ ಒಂದು ಬಾರಿ ಇನಾಂ ಸೆಟಲ್‌ಮೆಂಟ್ ಆಯಿತು. 1908ರಲ್ಲಿ ಒಂದು ಬಾರಿ ಇನಾಂ ಸೆಟಲ್‌ಮೆಂಟ್ ಆಯಿತು. 1908ರಲ್ಲಿ ಒಂದು ಬಾರಿ ಆಗಿತ್ತು. 1918ರಲ್ಲಿ ಇನ್ನೊಂದು ಬಾರಿ ಆಗಿತ್ತು. ಇನಾಂ ಸೆಟಲ್‌ಮೆಂಟ್‌ನಲ್ಲಿ ಮೊದಲನೆಯದಾಗಿ ಯಾವ್ಯಾವ ಜಮೀನುಗಳನ್ನು ಯಾವ್ಯಾವ ಗ್ರಾಮ ನೌಕರರಿಗೆ ಕೊಟ್ಟಿದ್ದರು.

ಯಾವ್ಯಾವ ಗ್ರಾಮಾಧಿಕಾರಿಗಳಿಗೆ ಕೊಟ್ಟಿದ್ದರು. ಅವು ಪರಂಪರೆಯಾಗಿ ಅವರಿಗೆ ಬಂದಿದೆ ಎಂದು ನಾನು ಹೇಳುತ್ತೇನೆ. ಅದರ ಜೊತೆಗೆ ಎರಡನೆಯದಾಗಿ ಆಯಾ ಗ್ರಾಮಗಳಲ್ಲಿ ದವಸಧಾನ್ಯ ಬಂದ ಕಾಲದಲ್ಲಿ ಗ್ರಾಮಸೇವೆ ಮಾಡುವ ಜನಗಳಿಗೆ ಭೂವಿಸ್ತೀರ್ಣದ ಮೇಲೆ ಒಂದು ಭಾಗ ಅವರಿಗೆ ಕೊಡುತ್ತಿದ್ದರು. ಮೂರನೆಯದಾಗಿ ಈ ಗ್ರಾಮಾಧಿಕಾರಿಗಳಿಗೆ ಕಂದಾಯ ವಸೂಲು ಮಾಡಿದಾಗ್ಗೆ ಈ ಸರ್ಕಾರದಿಂದ ಶೇಕಡ ಅಥವಾ ದಾಮಾಷಾ ಪ್ರಕಾರ ಸ್ವಲ್ಪ ಹಣವನ್ನು ಸಹ ಕೊಡುತ್ತಿದ್ದರು. ಈ ಮೂರು ವಿಧವಾದ ಸಂಭಾವನೆ ಸಂಬಳ ಸಾರಿಗೆ ಹೀಗೆ ಒಂದು ಬಾರಾಬಲೂತಿ ರೂಪದಲ್ಲಿ ನೇರವಾಗಿ ಅವರಿಗೆ ಸರ್ಕಾರದ ಬೊಕ್ಕಸದಿಂದ ಸಲ್ಲುತ್ತಿತ್ತು. ಆದರೆ ಕೆಳಗಿನ ನೌಕರರು ಎಂದರೆ ಇನ್‌ಫೀರಿಯರ್ ಸರ್ವೆಂಟ್ಸ್ ಆಗಿರತಕ್ಕ ತೋಟಿ, ತಳವಾರ, ನೀರುಗಂಟೆ ಇವರಿಗೆ ನೇರವಾಗಿ ಸರ್ಕಾರದ ಬೊಕ್ಕಸದಿಂದ ಹಣ ಬರುತ್ತಿರಲಿಲ್ಲ. ಇವರಿಗೆ ಜಮೀನು ಇದ್ದರೂ ಅದರ ಜೊತೆಗೆ ಧಾನ್ಯ ಕಾಳು ಕೊಡುತ್ತಿದ್ದರು. ಇದನ್ನು ಈಗ ತಪ್ಪಿಸಿರತಕ್ಕದ್ದು ಸರಿಯಲ್ಲ. ಇದಕ್ಕಾಗಿ ಅವರು ರೆಪ್ರಸೆಂಟೇಷನ್ ಮಾಡಿರತಕ್ಕದ್ದನ್ನು 1921, 1924, 1942 ನೇ ಇಸವಿಗಳಲ್ಲಿ ರಚಿಸಿದ ಕಮಿಟಿಗಳಲ್ಲಿ ವಿಚಾರ ಮಾಡಿದ್ದಾರೆ. ಶ್ರೀಮಾನ್ ಗುಂಡಪ್ಪ ಗೌಡರ ಅಧ್ಯಕ್ಷತೆಯಲ್ಲಿ ರಚಿಸಿದ ಕಮಿಟಿಯಲ್ಲೂ ಈ ವಿಷಯ ಚರ್ಚೆಯಾಗಿದೆ. ಅದು ಕಮಿಟಿ ಫಾರ್ ದಿ ರಿವಿಷನ್ ಆಫ್ ಲ್ಯಾಂಡ್ ರೆವಿನ್ಯೂ ಸಿಸ್ಟಮ್ ಎಂದು ರಚನೆಯಾಗಿತ್ತು. ಮಾನ್ಯ ಶ್ರೀಮಾನ್ ವೆಂಕಟಪ್ಪನವರು ಆ ಸಮಿತಿಯ ಸದಸ್ಯರಾಗಿದ್ದರು. ಆ ಸಮಿತಿಯಲ್ಲಿ ಈ ವಿಚಾರವನ್ನು ಕೂಲಂಕುಷವಾಗಿ ಚರ್ಚೆ ಮಾಡಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಹೇಳುವುದಾದರೆ ಅವರು ಮಾಡುವ ಕೆಲಸಗಳಿಗೆ ಇಷ್ಟು ಧಾನ್ಯ ಕೊಡುವುದು ಇನ್ನೂ ಹೆಚ್ಚಲ್ಲ. ಅದು ಪೂರ್ತಿ ಸಂದಾಯವಾಗುವ ಹಾಗೆ ಅವರು ವಿಚಾರ ಮಾಡಿದ್ದಾರೆಯೇ ಎಂದು ನಾನು ಹೇಳುತ್ತೇನೆ. ಪ್ರಜೆಗಳು ಪ್ರತಿನಿಧಿಗಳಾಗಿ ಬಂದಿರತಕ್ಕ ಜನ ಗ್ರಾಮಾಂತರ ಪ್ರದೇಶಗಳ ಪ್ರತಿನಿಧಿಗಳಾಗಿ ಬಂದಿರತಕ್ಕ ಜನ, ಗ್ರಾಮಜೀವನವನ್ನು ಬಹಳ ಯೋಗ್ಯವಾಗಿ ತೂಗಿಸಬೇಕು ಎನ್ನುವ ಜನ ಈಗ ಗಾಂಧಿತತ್ವಕ್ಕೆ ಸರ್ಕಾರ ಲೋಪ ಮಾಡಿದೆ ಎಂದು ಹೇಳುತ್ತಾರೆ. ಅದು ನನಗೂ ಗೊತ್ತಿದೆ. ಹಳ್ಳಿಯ ಸುತ್ತ ಮುತ್ತಲಿರುವ ಅನೇಕ ನೌಕರರು ಈಗಾಗಲೇ ತಮ್ಮ ಗ್ರಾಮಗಳನ್ನೇ ಮಾರಾಟ ಮಾಡಿದ್ದಾರೆ. ಅನೇಕ ಜನ ನಿರ್ಗತಿಕರಾಗಿದ್ದಾರೆ. ಅವರ ಜೀವನ ಸಾಗಿಸಲು ಬೇರೆ ಕೆಲಸಗಳನ್ನು ಮಾಡುವುದಕ್ಕೂ ಸಹ ಇಲ್ಲ. ಈಗ ಅಂತಹ 31 ಸಾವಿರ ಜನರ ಜೀವನ ಹೇಗೆ ನಿರ್ವಾಹಮಾಡುವುದಕ್ಕೆ ಪ್ರಯತ್ನ ಮಾಡುತ್ತೀರಿ? ಅವರಿಗೆ ಯಾವ ಕೆಲಸಗಳನ್ನು ಕೊಡುತ್ತೀರಿ? ಯಾವ ರೀತಿಯಲ್ಲಿ ರಿಹ್ಯಾಬಿಲಿಟೇಟ್ ಮಾಡಿದ್ದೀರಿ? ಅದೊಂದನ್ನು ಈ ವಿಧೇಯಕದಲ್ಲಿ ನಮೂದಿಸಿಲ್ಲ.

ಎಷ್ಟು ಜಮೀನು ಮಾಡಿದರೂ ಅನೇಕರು ನಿರ್ಗತಿಕರಾಗಿದ್ದರೆ.

ಅಲ್ಪಸ್ವಲ್ಪ ಪ್ರತಿಫಲ ಇರಬಹುದು. ಅದರ ಗದ್ದೆಯ ದುಡುಮೆಯಿಂದ ಅನೇಕರಿಗೆ ಪ್ರತಿಫಲ ಕಡಿಮೆಯಾಗಿದೆ. ಸಾಧಾರಣವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ನೀರುಗಂಟೆಗಳು ಏನು ಮಾಡುತ್ತಾರೆಂದರೆ, ಒಬ್ಬೊಬ್ಬ ರೈತರ ಗದ್ದೆಗೆ ಒಂದೊಂದು ದಿವಸ ನೀರು ಕಟ್ಟುತ್ತಾ ಇರುತ್ತಾರೆ. ಆದರೆ ಪ್ರಬಲವಾದ ರೈತ ಏನು ಮಾಡುತ್ತಾನೆಂದರೆ ಇಬ್ಬರು ನೀರುಗಂಟೆಯರನ್ನು ನೇಮಿಸಿಕೊಂಡು

ಒಂದೇ ಸಾರಿ ತನ್ನ ಜಮೀನುಗಳಿಗೆ ನೀರು ಹಾಯಿಸಿಕೊಳ್ಳುತ್ತಾನೆ. ಹೀಗಾದರೆ ಏನು ಪ್ಯಾಕೇಜ್ ಡೀಲ್ ಇವರು ಮಾಡುವುದು? ಅಮೇರಿಕಾದಿಂದ ರಷ್ಯಾದಿಂದ ಚಂದ್ರಲೋಕದಿಂದ ಪ್ಯಾಕೇಜ್ ಡೀಲ್ ಬಂದರೂ ಅಷ್ಟೆ. ಅವರ ಜೀವನವನ್ನು ಯಾವ ರೀತಿಯಲ್ಲೂ ಭದ್ರ ಮಾಡಲಿಲ್ಲ; ಸುವ್ಯವಸ್ಥಿತವಾಗಿ ಮಾಡಲಿಲ್ಲ. ಅವರ ಮನೋವೃತ್ತಿ ಅನು ಬೆಳೆಯುವುದಕ್ಕೆ ತಮ್ಮ ಕಾರ್ಯ ಚಟುವಟಿಕೆಗಳಿಂದ ಯಾವುದನ್ನು ಮಾಡಲಿಲ್ಲ. ಇದರಿಂದ ತಮ್ಮ ಕಾರ್ಯಗಳು ಯಾವವೊಂದೂ ಫಲಕಾರಿಯಾಗುವುದಿಲ್ಲ. ಇನ್ನು ಜೀವನಕ್ಕೆ ಬೇಕಾದ ಧಾನ್ಯವನ್ನು ಎಲ್ಲಿ ಸಂಗ್ರಹಿಸುತ್ತೀರಾ? ಇಷ್ಟು ಜನ ಅಂದರೆ ಈ 31 ಸಾವಿರ ಜನ ನೀರು ಗಂಟೆಯರನ್ನು ರಿಹ್ಯಾಬಿಲಿಟೇಟ್ ಮಾಡುವ ಬಗೆ ಹೇಗೆ? 40 ಸಾವಿರ ಪಾಟೇಲರು ಮತ್ತು 12 ಸಾವಿರ ಜನ ಶ್ಯಾನುಭೋಗರು ಏನು ಮಾಡಬೇಕು? ಈ ವಿಷಯವನ್ನು ಪುನಃ ಏಕೆ ಹೇಳುತ್ತಿದ್ದೇನೆಂದರೆ ಪ್ರತಿಪಕ್ಷದ ನಾಯಕರಾದ ಶ್ರೀಮಾನ್ ಈಶ್ವರಪ್ಪ ನವರು ಈಗಾಗಲೇ ಟೆಂಪೊರರಿಯಾಗಿ ವಿಲೇಜ್ ಪಂಚಾಯಿತಿ ಸೆಕ್ರೆಟರಿಯಾಗಿ ಶ್ಯಾನುಬೋಗ ಪಟೇಲರನ್ನು ನೇಮಕಮಾಡಿದ್ದಾರೆ ಅದು ತಪ್ಪು ಎಂದು ಹೇಳಿದರು. ಅದಕ್ಕಾಗಿ ಮಾನ್ಯ ಸಚಿವರು ಫೈಲು ಮುಚ್ಚುವಾಗ ನಕ್ಕರು ಎಂಬುದು ತಿಳಿದುಬಂತು. ಇದರಿಂದಲೇ ಆ ಪಂಚಾಯಿತಿಯಲ್ಲಿ ಎಷ್ಟು ಸಾಮರ್ಥ್ಯವುಳ್ಳವರು ಇದ್ದಾರೆ. ರಿಕಾರ್ಡ್ಸ್‌ಮೆಂಟೇನ್ ಮಾಡುವವರಿದ್ದಾರೆ. ಎಷ್ಟರಮಟ್ಟಿಗೆ ಪಟೇಲರು ಮತ್ತು ಶ್ಯಾನುಬೋಗರು ಶೀಲವಂತರಾಗಿದ್ದಾರೆ. ಎಂತಹ ಮೆನ್ ಆಫ್ ಕ್ಯಾರಕ್ಟರ್ ಎಂಬುದು ಗೊತ್ತಾಗುತ್ತದೆ. ಈ ಗ್ರಾಮ ಜೀವನದ ಸ್ಥಿತಿಯನ್ನು ಉತ್ತಮ ಪಡಿಸಬಾರದೆ? ಅವರಿಂದ ಹಣವನ್ನು ಪಡೆಯುವುದು ಯೋಗ್ಯವಲ್ಲವೆ? ಅಂತಹವರನ್ನು ರಿಹ್ಯಾಬಿಲಿಟೇಟ್ ಮಾಡಬೇಡವೆ? ಅಂತಹವರ ಸೇವೆ ರಾಷ್ಟ್ರದಲ್ಲಿ ದೊರೆಯುವ ಹಾಗೆ ಮಾಡುವುದು ಸರ್ಕಾರದ ಕರ್ತವ್ಯವಲ್ಲವೆ? ತಮ್ಮ ಬೊಕ್ಕಸಕ್ಕೆ ಬರುವ ದುಡ್ಡನ್ನು ಕಳೆದುಕೊಳ್ಳುವುದು ಸರಿಯೆ? ನಾನು ಹೀಗೆ ಹೇಳುತ್ತಿರುವುದನ್ನು ನೋಡಿ ನನ್ನ ಆಪ್ತ ಮಿತ್ರರಾದ ಶ್ರೀಮಾನ್ ಕಡಿದಾಳ್ ಮಂಜಪ್ಪನವರುನಕ್ಕೊಂಡು ಹೋದರು.

ಸೆಲೆಕ್ಟ್ ಕಮಿಟಿ ರಿಪೋರ್ಟ್ ಬರಲಿ. ಆಗ ಎಲ್ಲವನ್ನೂ ಹೇಳುತ್ತೇನೆ. ಸಾಮಾನ್ಯವಾಗಿ ಮಗು ಹುಟ್ಟಿತು ಅಂದರೆ ಯಾರಿಗೆ ಸುಖ, ಯಾರಿಗೆ ಆನಂದ, ಹಾಗೆಯೇ ಯಾವುದೋ ಒಂದು ಬಿಲ್ ಬಂತು. ಅದಕ್ಕೆ ಯಾವುದೋ ಒಂದು ಉತ್ತರವನ್ನು ಮಾನ್ಯ ಸಚಿವರು ಹೇಳುತ್ತಾರೆ. ಅವರದು ಹಿತವಚನವಾಗಲೀ ಕೆಟ್ಟ ವಚನವಾಗಲೀ ನೇರವಾಗಿ ಕೇಳಿದರೆ ಸರಿಹೋಗಬಹುದು. ಪ್ರಜಾ ಪ್ರತಿನಿಧಿಗಳ ಸಲಹೆಗಳನ್ನು ಕೇಳಬೇಕು. ನಾವು ಕೇಳುವುದಕ್ಕೂ ಅವರಿಂದ ಉತ್ತರ ಪಡೆಯುವುದಕ್ಕೂ ವ್ಯತ್ಯಾಸವಿಲ್ಲವೇ? ವ್ಯತ್ಯಾಸ ಖಂಡಿತ ಇದೆ.

ಇದೆಲ್ಲಾ ನಾಟಕವೇ? ಎಂದು ಕೇಳಿದರೆ ನಾಟಕವಲ್ಲ. ಇವು ಕಾನ್‌ಸ್ಟಿಟ್ಯೂಷನ್ನಿನಿಂದ ಬಂದಂಥ ಕೆಲವು ಅಲ್ಪ ದೋಷಗಳು; ಅವನ್ನು ಸರಿಮಾಡಬೇಕು. ಅವನ್ನು ಸರಿಮಾಡುವುದಕ್ಕೆ ಮಾನ್ಯ ಸಭಾಪತಿಗಳಿದ್ದಾರೆ, ಮಾನ್ಯ ಮಂತ್ರಿಗಳಿದ್ದಾರೆ. ಇವರಿಬ್ಬರೂ ಸೇರಿ ಮಾಡಿದರೆ, ದೇಶ ಒಪ್ಪೀತು.

ಯಾವಾಗಲೂ ಹಿಂದಿನ ಸೆಕ್ಷನ್ನುಗಳಲ್ಲಿ ಇಲ್ಲದೇ ಇರತಕ್ಕದ್ದನ್ನು ಮುಂದಿನ ಸೆಕ್ಷನ್ನುಗಳಲ್ಲಿ ಹೇಳುವುದು. ಮೈಸೂರು ಸರ್ಕಾರದ ಒಂದು ವೈಶಿಷ್ಟ್ಯ ಶ್ರೀ ಪಂಶುಹಿ ಸಾಹೇಬರು ಹೇಳಿದ ಹಾಗೆ ಎ.ಬಿ.ಐ., ಒ.ಬಿ.ಐ ಕಥೆಯ ತರಹ ಆಯಿತು.

ಹಿಂದಿನ ಸೆಕ್ಷನ್‌ನಲ್ಲಿ ಇಲ್ಲದೆ ಇರತಕ್ಕದ್ದನ್ನು ಪುನಃ ಮುಂದೆ ಏತಕ್ಕೆ ಹೇಳಬೇಕು? ಹಿಂದೆ ಹೇಳಿದ್ದೇ ನೇರವಾಗಿ ಅರ್ಥವಾಗಬೇಕು. ಇನ್ನು ಇವರು ಅನುಭವಿಸತಕ್ಕ ಇನಾಮ್ ಭೂಮಿಗಳು ಏನಿವೆ ಅವು ಅವರು ನೌಕರಿ ಮಾಡುವುದಕ್ಕೋಸ್ಕರ ಕೊಟ್ಟಿರತಕ್ಕ ಜಮೀನು. ಆ ಜಮೀನಿಗೆ ರೈತವಾರಿ ಪಟ್ಟವನ್ನು ಪಡೆದಿರತಕ್ಕ ಜನ ಯಾರು ಇದ್ದಾರೆ ಆ ಜನ ಅಸ್‌ಸ್‌ಮೆಂಟ್ ಕೊಡಬೇಕು, ಎಂಬುದು ಯೋಗ್ಯ. ಅದರಲ್ಲಿ ಏನೂ ತಪ್ಪಿಲ್ಲ. ಲ್ಯಾಂಡ್ ಅಸೆಸ್‌ಮೆಂಟ್ ಕೊಡಿ ಎಂದು ಕೇಳುವುದು ನ್ಯಾಯ. ಇವರಿಗೆ ಅಕ್ಯುಪನ್ಸಿರೈಟ್ ಬರಬೇಕಾದ ಪಕ್ಷದಲ್ಲಿ ಇದರ 12ರಷ್ಟು ಕಂದಾಯ ಕೊಡಬೇಕು ಎಂದು ಕೇಳುವ ವಿವಾದದ ಹಿಂದೆ ಇರುವತತ್ವ ಏನು? ಇದರಲ್ಲಿ ಕೋಟ್ಯಾಂತರ ರೂಪಾಯಿಗಳು ರಾಜ್ಯದ ಬೊಕ್ಕಸಕ್ಕೆ ಅಥವಾ ಭಂಡಾರಕ್ಕೆ ನಷ್ಟವಾಗುತ್ತದೆ. ಆದುದರಿಂದ ಇವೊತ್ತಿನ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ ಎನ್ನುವ ವಾದ ಇದ್ದರೆ ಅಷ್ಟು ದುಡ್ಡ ಇದರಿಂದ ಸೇರಿ ಬರುತ್ತದೆಯೋ? ಹಿಂದೆ ದಿವಾನರಾಗಿದ್ದ ರಾಜಕಾರ್ಯ ಪ್ರವೀಣ ಶ್ರೀಮಾನ್ ಎನ್.ಎಸ್. ಸುಬ್ಬರಾಯರ ನೇತೃತ್ವದಲ್ಲಿ 1927ನೇ ಇಸವಿಯಲ್ಲಿ ಒಂದು ಟ್ಯಾಕ್ಸೇಷನ್ ಕಮಿಟಿ ನೇಮಕವಾಯಿತು. ಆಗ ಅವರು ಬಂದು ಇನಾಮ್‌ಗಳು ಅಂದರೆ ಯಾವುವು ವಿಲೇಜ್ ಅಫೀಸರ್ಸ್ ಇನಾಮ್‌ಗಳು ಯಾವುವು. ರೆವಿನ್ಯೂ ಸರ್ವಿಸ್ ಇನಾಮ್‌ಗಳು ಯಾವುವು. ಅರ್ಟಿಜಾನ್ಸ್ ಎನ್ನುವವರು ಯಾರು ಎಂದರೆ ಬಾರಬಲೂತಿದಳೇ ಎಂದು ಹೇಳಿದ್ದಾರೆ. ಇದು 20–25 ವರ್ಷಗಳ ಹಿಂದೆ ಮಾಡಿದ ಆರ್ಡರು. ಆಮೇಲೆ ಇನಾಮ್‌ಲ್ಯಾಂಡಿನಿಂದ ಎಷ್ಟು ಕಂದಾಯ ಬರುತ್ತದೆ ಅಸೆಸ್‌ಮೆಂಟ್ ಅನ್ನು ಎಲ್ಲಾ ಇನಾಮ್‌ಗಳ ಮೇಲೆ ಹಾಕಿದರೆ ನಮಗೆ ಎಷ್ಟು ಬರುತ್ತದೆ ಇದರಲ್ಲಿ ರೆವಿನ್ಯೂ ಸರ್ವಿಸ್‌ನಲ್ಲಿರತಕ್ಕ ಶ್ಯಾನುಭೋಗರು ಮತ್ತು ಅರ್ಟಿಜಾನ್ಸ್ ಕೊಟ್ಟಿರತಕ್ಕ ಇನಾಮ್‌ಗಳ ಮೇಲೆ ಹಾಕುವ ಜೋಡಿ ಅಥವಾ "ಕ್ವಿಟ್‌ರೆಂಟ್‌ನಿಂದ" ಎಷ್ಟು ನಷ್ಟವಾಗುತ್ತದೆ ಎಂದು ಹೇಳಿದ್ದಾರೆ. ಅದು ಎಂದರೆ ಕೇವಲ 5–6 ಲಕ್ಷ ರೂಪಾಯಿಗಳು. ಇವೊತ್ತು 5–6 ಲಕ್ಷ ರೂಪಾಯಿಗಳ ಪ್ರತಿಫಲ ಪಡೆದರೂ ಅದರಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೆ ಪರಂಪರಾಗತವಾಗಿ ಹತ್ತಾರು ವರ್ಷಗಳಿಂದ ಜಮೀನು ಸಾಗುವಳಿ ಮಾಡಿಕೊಂಡು ಅನುಭವಿಸಿಕೊಂಡು ಬಂದಿರುವ ಜಮೀನಿಗೆ ಅಕ್ಯುಪನ್ಸಿ ರೈಟ್ಸ್ ಕೊಡಬೇಕಾದರೆ ಕ್ವಿಟ್‌ರೆಂಟ್ 12 ಪಟ್ಟೂ ಇಲ್ಲ. ಇದು ಹೊಸಪಟ್ಟು. ಮೈಸೂರು ದೇಶಕ್ಕೆ ಈ ಪಟ್ಟಿನ ವಿಷಯವೇ ಗೊತ್ತಿರಲಿಲ್ಲ.

ಸರ್ಕಾರದವರು ಕೊಟ್ಟಿರುವ ಅಂಕಿಅಂಶಗಳು, ವರದಿಗಳು ಏನಿವೆಯೋ ಅವುಗಳಿಂದ ಸ್ಟ್ಯಾಟಿ ಸ್ಟಿಕ್ಸನ್ನು ಸಮರ್ಥನೆ ಮಾಡುವುದಕ್ಕೆ ಸಾಧ್ಯ. ಫೈನಾನ್ಸಿಯಲ್ ಮೆಮೊರಾಂಡಂ ಕರೆಕ್ಟಾಗಿಲ್ಲ ಎಂದು ನಾನು ಹೇಳಬೇಕಾಗಿದೆ. ಈ ಮಸೂದೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು. ದಿ ಫೈನಾನ್ಸಿಯಲ್ ಮೆಮೊರಾಂಡಂ ತಪ್ಪು. ಫೈನಾನ್ಸಿಯಲ್ ಮೆಮೋರಾಂಡಂನ್ನು ಬೇರೆ ಕೊಡಬೇಕು ಎಂದು ನಾನು ಹೇಳಬೇಕೆಂದಿದ್ದೆ. ಈ ಸಭೆಯ ಮುಂದೆ ಇದನ್ನು ಈಗಾಗಲೇ ಮಂಡಿಸಿದ್ದಾರೆ. ಚರ್ಚೆಯೂ ಸಹ ನಡೆಯುತ್ತಿದೆ. ಒಂದು ವೇಳೆ ಅದರಲ್ಲಿರತಕ್ಕ ಲೋಪ ದೋಷಗಳನ್ನು ತೋರಿಸಿಕೊಟ್ಟರೆ ಖಂಡಿತವಾಗಿ ಅವನ್ನು ಸರಿಮಾಡುತ್ತೀರಿ ಎನ್ನುವ ಮನೋಭಿಪ್ರಾಯ ನನಗೆ ಇದೆ. ಇದರಲ್ಲಿ 37 ಲಕ್ಷ ರೂಪಾಯಿಗಳು

ಬರುತ್ತದೆ ಎಂದು ಹೇಳಿದ್ದೀರಿ. ಅದೂ ಸಹ ಸತ್ಯಕ್ಕೆ ದೂರವಾಗಿರುವ ಮಾತು ಎಂದು ನಾನು ತಮ್ಮಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ನನ್ನ ಅಭಿಪ್ರಾಯದಲ್ಲಿ 12ಪಟ್ಟು ಅವರಿಗೆ ಹಾಕಬಾರದಾಗಿತ್ತು. ಅವರು ತಮ್ಮ ಹುದ್ದೆಯನ್ನು ಕಳೆದುಕೊಳ್ಳುತಕ್ಕ ಜನ, ಅಧಿಕಾರದಿಂದ ಮುಕ್ತರಾಗುವ ಜನ, ಜೀವನಕ್ಕೆ ಯಾವುದು ಸಹಾಯಕವಾಗಿತ್ತೋ ಅದನ್ನು ಕಳೆದುಕೊಳ್ಳುವ ಜನ. ಅವರು ಮಾಡಿದ ಸೇವೆಯನ್ನು ಬೇಡ ಎಂದು ತೊಡೆದುಹಾಕಿ ಅಸ್ಪೃಶ್ಯ ವರ್ಗಕ್ಕೆ ಸೇರಿರುವ ಜನ. ಅಂತಹವರನ್ನು ಮುಟ್ಟುವುದಿಲ್ಲ ಎಂದು ಹೇಳಿದರೆ ಹೇಗೆ? ನಿರುದ್ಯೋಗಸ್ಥನನ್ನಾಗಿ ಮಾಡುವವನಿಂದ ನೀವು ಹೆಚ್ಚು ಕೇಳುವುದು ಉಚಿತವಲ್ಲ. ಇದನ್ನು ಕಡಿಮೆ ಮಾಡಬೇಕು. ಹೆಚ್ಚು ಎಂದರೆ 5ಪಟ್ಟು ಅಥವಾ ಓಲ್ಡ್‌ಕ್ವಿಟ್ ರೆಂಟ್ ಎಷ್ಟು ಕೊಡುತ್ತಿದ್ದರೋ ಅದರ 8ರಷ್ಟು ಕೇಳಿ. ಏತಕ್ಕೆಂದರೆ 12ಪಟ್ಟು ಬಹಳ ಜಾಸ್ತಿಯಾಗುತ್ತದೆ. ಗ್ರಾಮ ಜೀವನವು ಹೇಗೆ ಅವರದಾಗಿತ್ತೋ ಹಾಗೆಯೇ ಜಮೀನು ಅವರದೇ ಆಗಿತ್ತು. ಹೊಸದಾದ್ದರಿಂದ ಅವರಿಗೆ ಉಳಿತವಾಗಿ ಕೊಡಬೇಕು.

ನಮ್ಮ ದೇಶದಲ್ಲಿ ಮೂವತ್ತು ಸಾವಿರ ಪಟೇಲರು ಏನಿದ್ದಾರೆ. ಹನ್ನೆರಡು ಸಾವಿರ ಶ್ಯಾನುಭೋಗರು ಏನಿದ್ದಾರೆ ಅವರಲ್ಲಿ ಶೇಕಡಾ ನಲವತ್ತರಷ್ಟು ಯಾರು ಹಕ್ಕುದಾರರಾಗಿದ್ದಾರೋ ಅವರು ಮಾತ್ರ ಇದನ್ನು ನೋಡಿಕೊಂಡು ಬರುತ್ತಿದ್ದಾರೆ. ಇನ್ನುಳಿದ ಶೇಕಡ ಅರವತ್ತರಷ್ಟು ಜನ ಏನಿದ್ದಾರೆ ಅವರು ಬೇರೆ ಪ್ರತಿನಿಧಿಗಳನ್ನು ಇಟ್ಟುಕೊಂಡು ಕೆಲಸವನ್ನು ಮಾಡುತ್ತಿದ್ದರು ಎಂದರೆ ಇವರಿಗೆ ಗುಮಾಸ್ತರುಗಳಾಗಿ ಕೆಲಸ ಮಾಡುತ್ತಿದ್ದರು. ಸರಕಾರಿ ಗುಮಾಸ್ತರುಗಳೇ ಅನೇಕ ಕಡೆ ಶ್ಯಾನುಭೋಗರುಗಳು ಪಟೇಲರುಗಳ ಕೆಲಸ ಮಾಡತಕ್ಕ ಕಾರ್ಯಗಳನ್ನು ಮಾಡುತ್ತಿದ್ದರು. ಅಲ್ಲದೆ ಸರಕಾರದವರು ಈ ರೀತಿ ಗುಮಾಸ್ತರುಗಳನ್ನು ಇಟ್ಟುಕೊಳ್ಳಲು ಹಿಂದೆ ಅಪ್ಪಣೆಯನ್ನೂ ಕೊಟ್ಟು ನಡೆಸಿಕೊಂಡು ಬರುತ್ತಿದ್ದರು. ನನ್ನ ಪಕ್ಷದಲ್ಲಿ ಕುಳಿತಿರುವ ಶ್ರೀಮಾನ್ ರಾಮರಾಯರೇ ವಂಶಪಾರಂಪರ್ಯವಾಗಿ ಬಂದಿದ್ದ ಶ್ಯಾನುಭೋಗರ ವಂಶಕ್ಕೆ ಸೇರಿದ್ದುದರಿಂದ ಅವರಿಗೆ ಈ ವಿಷಯಗಳೆಲ್ಲ ಚೆನ್ನಾಗಿ ಗೊತ್ತಿದೆ. ಈ ರೀತಿಯಾದ ಗ್ರಾಮ ಸೇವೆಯ ಪೂರ್ಣ ಭಾಗ್ಯ ದೊರಕದೆ ಇಲ್ಲಿನ ಕಿರುಕುಳಗಳಾಗಲೀ ವಿಲೇಜ್ ಲೈಫ್ ಆಗಲಿ ಇದರಲ್ಲಿ ಭಾಗವಹಿಸುವ ಸೌಭಾಗ್ಯ ನನಗೇ ಬರಲಿಲ್ಲ.

ನನ್ನ ದೃಷ್ಟಿಯಲ್ಲಿ ಹೇಳುವುದಾದರೆ ಸರ್ಕಾರ ಭೂಮಿಯನ್ನು ತೆಗೆದುಕೊಳ್ಳುವುದು ಕಾನೂನು ಬದ್ಧವಾದ, ಮಾರ್ಗ ಎಂದು ನಾನು ತಿಳಿದುಕೊಂಡಿದ್ದೇನೆ. ಹೀಗೆ ತೆಗೆದುಕೊಂಡು ಪುನಃ ಕೊಡುವುದು ಭೂಮಿಯ ಮೇಲೆ ಒಂದು ಆಡಳಿತ ನಡೆಸುವ ಪ್ರಭುತ್ವಕ್ಕೆ ಇರತಕ್ಕ ಪೂರ್ಣ ಅಧಿಕಾರ. ಈಗ ಆಕ್ಯುಪನ್ಸಿ ರೈಟ್ಸ್ ಎಂದರೆ ರೈತವಾರಿ ಸಿಸ್ಟಂ ಇರತಕ್ಕ ಜನಗಳಿಗೆ ಅವನು ಕೊಡತಕ್ಕ ಕಂದಾಯ, ಅವನು ಪಡೆಯತಕ್ಕ ಹಣಕ್ಕೆ ಕಾಣಿಕೆ, ಕಷ್ಟ ಎಂದು ಕೊಡುತ್ತಿದ್ದರು. ಇವತ್ತಿನ ದಿನ ಕಂದಾಯವೆಂದು ಹೇಳಿದ್ದಾರೆ. ಆದುದರಿಂದ ಗ್ರಾಂಟ್ ಅಂಡ್ ರಿಗ್ರಾಂಟ್ ಎಂದು ಇಲ್ಲಿರುವುದು ಸಾಧುವಾದುದು. ಇದು ಟೆಕ್ನಿಕಲ್ ಯುಸೇಜ್ ಅಷ್ಟೆ. ಇದರಲ್ಲಿ ಎರಡು ವಿಧವಾದ ಜನರಿದ್ದಾರೆ. ಒಂದು ಮೊದಲೇ ಅಧಿಕಾರವನ್ನು ಪಡೆದಿರುವವರು, ಅವರ ಹೆಸರಿನಲ್ಲಿರುತ್ತದೆ. ಇನ್ನೊಬ್ಬರು ಹತ್ತಾರು ವರ್ಷಗಳ

ಅನುಭವವನ್ನು ಪಡೆದಿರುವವರು ಇದ್ದಾರೆ. ಈ ರೀತಿಯಾಗಿ ಹತ್ತಾರು ವರ್ಷಗಳಿಂದ ವಂಶಪಾರಂಪರ್ಯವಾಗಿ ಕೆಲಸ ಮಾಡುತ್ತಿರುವ ಸುಮಾರು 65 ಜನ ಪಟೇಲ ಶ್ಯಾನುಭೋಗರುಗಳು ತುಮಕೂರು ಮತ್ತು ಕೋಲಾರ ಜಿಲ್ಲೆಗೆ ಸೇರಿದವರು ಒಂದು ಮನವಿಯನ್ನು ಬರೆದು ಸಹಿ ಹಾಕಿ ಮಂತ್ರಿಗಳಿಗೆ ಕೊಡಬೇಕೆಂದು ಈ ದಿನ ನನ್ನಲ್ಲಿ ಕೊಟ್ಟಿದ್ದಾರೆ. ಒಬ್ಬರು ಅನುಭವ ಪಡೆದಿರುವರು, ಇನ್ನೊಬ್ಬರು ಕೆಲಸ ಮಾಡಿ ಪೋಟಿಗೆ ಪಡೆಯತಕ್ಕ ಜನ.

ನಾನು ಈ ಮಸೂದೆಯ ಐದನೆಯ ಅನುಚ್ಛೇದವೇನಿದೆ ಆ ಅನುಚ್ಛೇದದಲ್ಲಿ ಅವರು ಕೊಡಬೇಕಾಗಿರತಕ್ಕ ಪೂರ್ತಿ ಕಂದಾಯದ 12ರಷ್ಟು ಹಣ ಸರ್ಕಾರಕ್ಕೆ ಕೊಡಬೇಕಾದದ್ದು, ಆ ಮೇಲೆ ಆಕ್ಯುಪನ್ಸಿ ರೈಟ್ಸ್ ಎನ್ನತಕ್ಕದ್ದು ಹಕ್ಕುದಾರರು ಯಾರೋ ಅವರಿಗೆ ಕೊಡಬೇಕಾದ್ದು ಎನ್ನುವುದನ್ನು ಇಲ್ಲಿ ಗುರುತು ಹಾಕಿದ್ದಾರೆ. 12ರಷ್ಟು ಪೂರ್ತಿ ಕಂದಾಯವನ್ನು ತೆಗೆದುಕೊಳ್ಳುವುದು ಸಾಧ್ಯವಾಗುವುದಿಲ್ಲ. ಬಹಳ ಕಷ್ಟವಾಗುತ್ತದೆ. ಆದುದರಿಂದ ಇದನ್ನು ಉಚಿತವಾಗಿ ಕೊಡುವುದಕ್ಕೆ ಸಾಧ್ಯವೇ ಆಗುವುದಿಲ್ಲ, ಅದರ ಯಾವುದಾದರೂ ಶಾಸ್ತ್ರೀಯವಾದ ಕಾನೂನಿಗೆ ವಿರೋಧವಾಗಿ ತಕ್ಕ ತತ್ವ ಅಡಕವಾಗಿದ್ದ ಪಕ್ಷದಲ್ಲಿ ಸಾಮಾನ್ಯವಾದ ಪ್ರತಿ ಫಲ ಪ್ರತ್ಯಾಮ್ನಾಯ ತೆಗೆದುಕೊಂಡು ಅವರಿಗೆ ಕೊಡಬೇಕು. ಹಿಂದೆ ಕೊಡುತ್ತಿದ್ದ ಕ್ವಿಟ್‌ರೆಂಟಿನ ಆರರಷ್ಟು, ಅಥವಾ ಪೂರ್ತಿ ಕಂದಾಯ ಏನು ಹಾಕುತ್ತಾರೋ ಅವರು ನಾಲ್ಕೈದರಷ್ಟು ತೆಗೆದುಕೊಂಡು ಜಮೀನನ್ನು ಹಕ್ಕು ಇದ್ದವರಿಗೆ ಕೊಡಬೇಕಾದ್ದು ಯೋಗ್ಯ. ಭೂಮಿಯ ಮೇಲೆ ಆಸೆ ಪ್ರತಿಯೊಬ್ಬರಿಗೂ ಇರುತ್ತದೆ. ಗ್ರಾಮ ಜೀವನದಲ್ಲಿ ಭಾಗಿಗಳಾಗಿರುವವರು, ಗ್ರಾಮ ಜೀವನದಲ್ಲಿ ನೆಲೆಸುವವರು, ಇವರಿಂದ ಭೂಮಿಯನ್ನು ಕಸಿದುಕೊಳ್ಳತಕ್ಕ ಪ್ರಯತ್ನವನ್ನು ಸರ್ಕಾರ ಮಾಡಬಾರದೆಂದು ನಾನು ಹೇಳುತ್ತಿದ್ದೇನೆ.

ಇದೇ ಸಮಯದಲ್ಲಿ ಹಕ್ಕುದಾರರಾಗಿರತಕ್ಕವರು ನೂರಾರು ಜನ ಶ್ಯಾನುಭೋಗ ಪಟೇಲರುಗಳಿದ್ದರೆ, ಅವರ ಬದಲಿಯಾಗಿ ಹತ್ತಾರು ವರ್ಷಗಳಿಂದ ಗುಮಾಸ್ತ ಕೆಲಸವನ್ನು ಮಾಡುತ್ತಿರುವ ಜನರಿದ್ದಾರೆ. ಇದರಲ್ಲಿ ಎರಡು ತರಹ ಜನರಿದ್ದಾರೆ. ಮೂಲ ಇನಾಂತಿಗಳು ಎಲ್ಲ ಕಡೆಯೂ ಇಲ್ಲದೇ ಇರಬಹುದು ಎಷ್ಟೋ ಕಡೆ ಪಟೇಲ್ ಕೆಲಸ, ಶ್ಯಾನುಭೋಗರ ಕೆಲಸ, ನೀರಗಂಟೆ, ತೋಟಿ ತಳವಾರರ ಕೆಲಸ ಮಾಡುವುದಕ್ಕೆ ಇನಾಂತಿಗಳಿವೆ. ಮೂಲಹಕ್ಕುದಾರರು ಯಾರಿದ್ದಾರೆ ಅವರು ಕೆಲಸ ಮಾಡಿಕೊಂಡಿದ್ದು ಇನಾಂಜಮೀನನ್ನು ಅನುಭವ ಮಾಡುತ್ತಿರುವ ಜನರಗುಂಪು ಇದೆ. ಗುಮಾಸ್ತರು ಕೆಲಸಮಾಡಿ, ಆ ಗ್ರಾಮಾಧಿಕಾರಿಗಳ ಪ್ರತಿನಿಧಿಗಳಾಗಿ ಕೆಲಸ ಮಾಡತಕ್ಕ ಜನ ಯಾರಿದ್ದಾರೆ ಅವರೇ ಹತ್ತಾರು ವರ್ಷಗಳಿಂದ ಕೆಲಸ ಮಾಡುತ್ತಿದ್ದು ಇದನ್ನು ಅನುಭವ ಮಾಡುತ್ತಿದ್ದಾರೆ. ಇಂಥ ಜನ ನಮ್ಮಲ್ಲಿದ್ದಾರೆ. ಕೆಲವು ಗುಮಾಸ್ತರುಗಳಾಗಿ ಕೆಲಸ ಮಾಡುತ್ತಿರುವ ಪಟೇಲ ಶ್ಯಾನುಭೋಗರು ಇದುವರೆಗೆ ರೆವಿನ್ಯೂ ಮಂತ್ರಿಗಳಿಗೆ ಅರ್ಜಿಗಳನ್ನು ಕೊಟ್ಟಿದ್ದಾರೆ, ಕೇಳಿಕೊಂಡಿದ್ದಾರೆ. ಅವರಲ್ಲಿ ಕೆಲವರುಹತ್ತಾರು ವರ್ಷಗಳಿಂದ ಭೂಮಿಯನ್ನು ಅನುಭವ ಮಾಡುತ್ತಿದ್ದಾರೆ. ಮೂಲ ಹಕ್ಕುದಾರನಿಗೆ ಹಕ್ಕನ್ನು ನಿವೃತ್ತಿ ಮಾಡುವ ಕಾಲದಲ್ಲಿ ಮೂಲಹಕ್ಕುದಾರನಿಗೆ ಭೂಮಿಯ ಮೇಲಿನ ಹಕ್ಕನ್ನು ಕೊಡುವ ಕಾಲದಲ್ಲಿ ಭೂಮಿಯ ಅನುಭವವನ್ನು ಪಡೆಯುತ್ತಿದ್ದು ಅವರ ಬದಲು ಕೆಲಸ ಮಾಡುತ್ತಿರುವ

ಪ್ರತಿನಿಧಿಗಳು ಯಾರಿದ್ದಾರೆ ಅವರಿಗೆ ಬರತಕ್ಕ ಪ್ರತ್ಯಾಮ್ನಾಯ, ಪ್ರತಿಫಲವೇನು ಎಂದು ಕೇಳುತ್ತೇನೆ? ಭೂಮಿಯ ಅನುಭವವಿಲ್ಲದೆ ಕೆಲಸ ಮಾತ್ರ ಮಾಡುತ್ತ ಇರತಕ್ಕವರಿಗೆ ಬರತಕ್ಕ ಪ್ರತಿಫಲವೇನು?

ಇನ್ನೊಂದು ವರ್ಗವಿದೆ ತೋಟಿ, ತಳವಾರ, ನೀರಗಂಟಿಗಳು ಸುಮಾರು 46 132 ಜನ ಕೆಳದರ್ಜೆ ನೌಕರರೇನಿದ್ದಾರೆ ಅವರಿಗೆ ಕೊಟ್ಟಿರತಕ್ಕ ಇನಾಂ ಭೂಮಿಗಳನ್ನು ಇದುವರೆಗೆ ಪರಭಾರೆ ಮಾಡಿದ್ದಾರೆ, ಮಾಡಿಕೊಂಡಿದ್ದಾರೆ, ಆಧಾರ ಭೋಗ್ಯ ಮಾಡಿದ್ದಾರೆ, ಲಿಮಿಟೇಷನ್ ಕಳೆದುಕೊಂಡಿದ್ದಾರೆ. ಈ 46 ಸಾವಿರ ಕೆಳದರ್ಜೆ ನೌಕರರು ಯಾರಿದ್ದಾರೆ ಅವರಿಗೆ ಪ್ರತಿರೂಪವಾಗಿ ಕೊಡತಕ್ಕದ್ದು ಏನು ಒಂದು ತೋರಿಸಿಲ್ಲ. ಅವರ ಜಮೀನನ್ನು ಅನುಭವ ಮಾಡುವವರು ಹಣವನ್ನು ಕೊಟ್ಟು ಅದನ್ನು ಕೊಂಡುಕೊಂಡಿದ್ದಾರೆ. ಹಣ ಕೊಟ್ಟಿರುವ ಜನರಲ್ಲಿ ಅನಾಥರೈಸ್ಡ್ ಹೋಲ್ಡರ್ಸ್ ಅಥರೈಸ್ಡ್ ಹೋಲ್ಡರ್ಸ್ ಎಂದು ಎರಡಿವೆ. ಅನಾಥರೈಸ್ಡ್ ಹೋಲ್ಡರ್ಸ್ ಎನ್ನುವ ವರ್ಗದಲ್ಲಿ ತರುವ ಪಕ್ಷದಲ್ಲಿ ಮೂಲಭೂತವಾಗಿ ಇದ್ದ ಹಕ್ಕನ್ನು ಪಡೆಯತಕ್ಕ ಗ್ರಾಮ ನೌಕರರನ್ನು ನಿವೃತ್ತಿ ಮಾಡತಕ್ಕ ಕಾಲದಲ್ಲಿ ಅವರ ಸೇವಾಕಾರ್ಯ ಅಧಿಕಾರ ಎರಡನ್ನು ಕಳೆದುಕೊಳ್ಳುವ ಕಾಲದಲ್ಲಿ ಏನು ಕೊಡುತ್ತೀರಿ? ಅನಾಥರೈಸ್ಡ್ ಪೀಪಲ್‌ಗೆ ಏನೂ ಬರುವುದಿಲ್ಲ. ಅನಾಥರೈಸ್ಡ್ ಜನರನ್ನು ತೆಗೆದು ಬಿಡುತ್ತೇವೆಂದು ಹೇಳುವಾಗ ಅವರು ಅನೇಕ ಸಾಲ ಸೋಲಗಳನ್ನು ಮಾಡಿಕೊಂಡಿದ್ದಾರೆ, ಹಣ ಹಾಕಿದ್ದಾರೆ, ದುಡ್ಡನ್ನು ಕೊಟ್ಟಿದ್ದಾರೆ, ಜಮೀನನ್ನು ಉತ್ತಮಪಡಿಸಿ ಬೇಸಾಯವನ್ನು ಬಹಳ ಚೆನ್ನಾಗಿ ಮಾಡಿಕೊಂಡಿದ್ದಾರೆ. ಭೂಮಿಯ ಮೇಲೆ ಕೇವಲ 500 ರೂಪಾಯಿಗಳಿದ್ದರೆ ಅದರ ಮೇಲೆ ಐದು ಹತ್ತು ಸಾವಿರ ರೂಪಾಯಿಗಳನ್ನು ಹಾಕಿ ಬೇಸಾಯ ಮಾಡುತ್ತಿರುವ ಜನರಿದ್ದಾರೆ. ಅಂಥ ಜನರು ತೊಂದರೆಗೆ ಸಿಕ್ಕಬಾರದು ಎಂದು ಕ್ಲಾಜ್ ಏಳನ್ನು ಸೇರಿಸಿದ್ದಾರೆ. ಅದು ಅನೇಕ ಪ್ರಕರಣಗಳಲ್ಲಿ ಸಂದರ್ಭಗಳಲ್ಲಿ ಯೋಗ್ಯವಾದದ್ದು, ಉಚಿತವಾದದ್ದು ಎಂದು ನನ್ನ ಮನಸ್ಸಿಗೆ ತೋರುತ್ತದೆ.

ಇದರಲ್ಲಿ ಅನ್‌ಡ್ಯೂ ಹಾರ್ಡ್‌ಶಿಪ್ ಎಂದರೆ ಏನು? ಲಕ್ಷಾಂತರ ರೂಪಾಯಿ ಆಸ್ತಿ ಇರುವವನು, ತೋಟಿ ತಳವಾರರು ಮತ್ತು ನೀರಗಂಟೆಗಳ ಹತ್ತಿರ ಸುಮಾರು ಎರಡು ಎಕರೆ ಇನಾಂತಿ ಜಮೀನಿದ್ದರೆ, ಅವರಿಗೆ ಸಾವಿರಾರು ರೂಪಾಯಿ ಹಣಕೊಟ್ಟು ವಿಕ್ರಯ ಮಾಡಿಕೊಂಡಿದ್ದರೆ, ಅದು ಕಾನೂನಿಗೆ ವ್ಯತಿರಿಕ್ತವಾಗಿರಬಹುದು, ಸಬ್‌ರಿಜಿಸ್ಟಾರ್ ಆಫೀಸಿನಲ್ಲಿ ರಿಜಿಸ್ಟರಾಗಿ, ಅವರ ಸ್ವಾಧೀನದಲ್ಲಿರುತ್ತದೆ. ಅವರಿಂದ ಕಂದಾಯವನ್ನು ತೆಗೆದುಕೊಳ್ಳುತ್ತಿರುತ್ತಾರೆ. ರಿಕಾರ್ಡ್ ಮಾತ್ರ ಬಿಟ್ಟು ಇಂಥವನಿಗೆ ಕೊಟ್ಟ ಪಕ್ಷದಲ್ಲಿ ಲಕ್ಷಾಂತರ ರೂಪಾಯಿ ವಹಿವಾಟು ಮಾಡುವವನಿಗೆ ಅನೆಡ್ಯೂ ಹಾರ್ಡ್‌ಶಿಪ್ ಇಲ್ಲವೆಂದು ಹೇಳಬಹುದು. ನೂರಿನ್ನೂರು ರೂಪಾಯಿಬೆಲೆಬಾಳುವ ಜಮೀನನ್ನು ವ್ಯವಸಾಯ ಮಾಡಬೇಕು, ಧಾನ್ಯ ಉತ್ಪತ್ತಿ ಮಾಡಬೇಕು. ದೇಶಸೇವೆಯನ್ನು ಪರೋಕ್ಷವಾಗಿ ಮಾಡಬೇಕು. ತಾನೂ ಪ್ರತಿಫಲವನ್ನು ಅನುಭವಿಸಬೇಕು, ಎನ್ನುವವರಿಂದ ಜಮೀನನ್ನುದ ಕಿತ್ತುಕೊಂಡ ಪಕ್ಷದಲ್ಲಿ ಎವಿಕ್ಟ್ ಮಾಡಿದ ಪಕ್ಷದಲ್ಲಿ ತೊಂದರೆಯಾಗುವುದಿಲ್ಲವೇ ಎಂದು ಕೇಳುತ್ತೇನೆ. ಎರಡು ವಿಧವಾದದ್ದು ಇದು. ಗ್ರಾಮ ನೌಕರರಿಗೆ ಕೊಟ್ಟ ಪಕ್ಷದಲ್ಲಿ ಯಾವ ವಿಧವಾದ ಪ್ರತಿಫಲವೂ

ದೊರೆಯುವುದಿಲ್ಲ. ಮೂಲಭೂತವಾದ ಹಕ್ಕು ಇರತಕ್ಕ ಗ್ರಾಮ ನೌಕರರಿಗೆ ಕೊಡಬೇಕಾದ ಪಕ್ಷದಲ್ಲಿ ಅವನನ್ನು ಎವಿಕ್ಟ್ ಮಾಡಿದರೆ, ಯಾರು ಕೊಂಡು ಕೊಂಡಿದ್ದಾರೆ, ಭೋಗ್ಯ ಮಾಡಿಕೊಂಡಿದ್ದಾರೆ. ಅವರಿಗೆ ವಿಶೇಷವಾಗಿ ತೊಂದರೆಯಾಗುತ್ತಿದೆ. ಅನೆಡ್ಯೂ ಹಾರ್ಡ್‌ಶಿಪ್ ಎಂದರೆ, ಸರ್ಕಾರಕ್ಕೆ ಒಂದು ಅರ್ಜಿ ಮುಟ್ಟಬೇಕಾದರೆ ಎಷ್ಟು ಮೆಟ್ಟಲು ದಾಟಬರಬೇಕು. ಸಾಮಾನ್ಯ ಸರ್ಕಾರದವರೆಗೂ ಬರಲು ಸಾಧ್ಯವಾಗುವುದಿಲ್ಲ. ಆದುದರಿಂದ ಬಹಳ ಹಾರ್ಡ್‌ಶಿಪ್ ಆಗುತ್ತದೆ. ದೇಶದಲ್ಲಿನ ಸಾಮಾನ್ಯ ಜನಗಳಿಗೆ ಇಷ್ಟು ಹಣದ ಒಳಗಿದ್ದ ಪಕ್ಷದಲ್ಲಿ ಇಷ್ಟು ಕಾಲ ಅನುಭವಿಸಿಕೊಂಡು ಬಂದಿದ್ದ ಪಕ್ಷದಲ್ಲಿ ಎಂದು ಈ ಮಸೂದೆಯಲ್ಲಿಯೇ ಸ್ಪಷ್ಟಪಡಿಸಬೇಕು. ಈ ಸಂದರ್ಭದಲ್ಲಿ ನಮ್ಮ ಹಳ್ಳಿಯ ಒಂದು ವಿಚಾರವನ್ನು ಹೇಳುತ್ತೇನೆ. ಸುಮಾರು 35 ವರ್ಷಗಳ ಹಿಂದೆ ನಮ್ಮ ಸಭೆಯ ಸದಸ್ಯೆಯಾಗಿರುವ ಶ್ರೀಮತಿ ಅಬ್ಬಾಸಿಯಾಬೇಗಂ ಮೆಕ್ಕೆ ಅವರ ಮಾವಂದಿರಾದ ಜಹರುದ್ದೀನ್ ಮೆಕ್ಕೆಯವರು ಕೋಲಾರ ಜಿಲ್ಲೆಯ ಡೆಪ್ಯುಟಿ ಕಮೀಷನರ್ ಆಗಿದ್ದರು. ಆಗ ನಾವುಗಳೂ ನಮ್ಮ ಯಜಮಾನರೂ ಹೋಗಿ ಅವರಿಗೆ ಹೇಳಿದೆವು. ತೋಟಿ ತಳವಾರರು, ನೀರಗಂಟಿಗಳು ಇವರು ಸಾಮಾನ್ಯ ಜನರು ಅಸ್ಪೃಶ್ಯರು, ಚಂಡಾಲರು ಎಂದು ಏನು ಹೇಳುತ್ತಾರೆಯೋ ಅಂಥವರ ಸ್ವತ್ತನ್ನು ಇತರರು ಅಪಹಾರ ಮಾಡಿದ್ದಾರೆ, ಅಲ್ಪಸ್ವಲ್ಪ ದುಡ್ಡು ಕೊಟ್ಟಿದ್ದಾರೆ. ಆ ಹಣವನ್ನು ಅವರಿಗೆ ವಾಪಸ್ಸುಕೊಡಿಸಿ ಜಮೀನನ್ನು ಬಿಡಿಸಿಕೊಡಬೇಕೆಂದು ಹೇಳಿದೆವು.

ಹೀಗೆ ಹತ್ತಾರು ವರ್ಷಗಳಿಂದ ಅನುಭವಿಸಿಕೊಂಡು ಪಡೆಯುತ್ತಿರುವ ಹಕ್ಕನ್ನು ತಪ್ಪಿಸುವುದು ಬಹಳ ಅಧರ್ಮ ಅದು ಪ್ರಜಾ ಸರ್ಕಾರಕ್ಕೆ ಯೋಗ್ಯವಲ್ಲ. ಮೂಲಭೂತವಾಗಿ ಹಕ್ಕು ಇರುವವನಿಗೆ ಏನೂ ಇಲ್ಲದೆ ಬರೀ ಕೈಯಲ್ಲಿ ಮನೆಗೆ ಹೋಗು ಎಂದು ಹೇಳುವುದು ಅದು ನ್ಯಾಯವಲ್ಲ.

ಗ್ರಾಮ ಜೀವನದಲ್ಲಿ ಕಷ್ಟ ನಷ್ಟಗಳನ್ನು ಪಡೆಯುವವರು ಯಾರು ಇದ್ದಾರೋ ಮತ್ತು ಅವರ ಜೀವನಕ್ಕೆ ದುಃಖಮಯವನ್ನು ತರುವವರು ಯಾರು ಇದ್ದಾರೋ ಅಂತಹವರನ್ನು ಹಿಂದೆ ಆಗಾಗ್ಗೆ ತೊಡೆದು ಹಾಕುತ್ತಿದ್ದರು. ಆ ರೀತಿ ಈಗ ಇದ್ದಿದ್ದರೆ ಇಂತಹ ದಿನಗಳು ಬರುತ್ತಿರಲಿಲ್ಲ. ನಮ್ಮಲ್ಲಿದ್ದ ಹಿಂದಿನ ರಾಜ್ಯ ಸರ್ಕಾರದ ಕಾನೂನುಗಳು ದಿನದಿನಕ್ಕೂ ಮೇಲಿಂದ ಮೇಲೆ ಬದಲಾವಣೆಗಳು ಆಗುತ್ತಾ ಬಂದುದೇ ಇದಕ್ಕೆ ಮುಖ್ಯ ಕಾರಣ. ಈಗಲೂ ಅನೇಕರು ಹಿಂದಿನ ಗ್ರಾಮ ಜೀವನವೇ ಹೆಚ್ಚು ಉತ್ತಮವಾಗಿತ್ತೆಂದು ಭಾವನೆ ಮಾಡಿಕೊಂಡಿದ್ದಾರೆ. ಈಗ ಆ ಕಾನೂನುಗಳು, ವಿರೋಧವಾಗಿವೆ. ಆದರೆ ಗ್ರಾಮ ಜೀವನದ ಅನುಭವ ಜೀವನಕ್ಕೆ ವ್ಯತಿರಿಕ್ತವಾಗಿದೆ. ಈ ರೀತಿ ಹಾರ್ಡ್‌ಷಿಪ್ ಉಂಟುಮಾಡತಕ್ಕ ಕೃತ್ರಿಮವನ್ನು ಸರ್ಕಾರದವರು ಅದರಲ್ಲೂ ಮಂತ್ರಿಗಳು ಇಟ್ಟುಕೊಂಡರೆ ಬಹಳ ಕಷ್ಟವಾಗುತ್ತದೆ. ಇದನ್ನು ಸರಿಯಾಗಿ ತೀರ್ಮಾನ ಮಾಡಬೇಕು. ಇಂತಹ ಸಂದರ್ಭದಲ್ಲಿ ಅವರ ಹಾರ್ಡ್‌ಷಿಪ್ಪನ್ನು ಸರಿಯಾಗಿ ತೀರ್ಮಾನ ಮಾಡದೇ ಹೋದರೆ.....

ಸಾಮಾನ್ಯವಾಗಿ ಹಿಂದೆ ಒಬ್ಬ ರೈತ 100 ರೂಪಾಯಿಗಳನ್ನು ಕೊಟ್ಟು ಒಂದು ಜಮೀನನ್ನು ಕೊಂಡಿರುತ್ತಾನೆ ಎನ್ನೋಣ. ಈಗ ಅದಕ್ಕೆ 10 ರೂಪಾಯಿಗಳು ಮಾತ್ರ ಬಿಲ್ ಬರುತ್ತದೆ ಎಂದರೆ

ಹೇಗೆ? ಇದನ್ನು ಒಪ್ಪಿಕೊಳ್ಳುತ್ತೀರಾ ಎಂದರೆ ಹೇಗೆ? ಆಗಿಗಿಂತಲೂ ಈಗ ಇನ್ನು ಹೆಚ್ಚಿಗೆ ಅದರ ಬೆಲೆಯಾಗಬೇಕು. ಕಾನೂನುಗಳನ್ನು ಬಲ್ಲವರು ಅತಿ ವ್ಯಾಪ್ತಿ ಕಾನೂನುಗಳನ್ನು ಮಾಡಿಸಬಹುದೇ? ತಾವು ಕಾನೂನುಗಳ ಸಚಿವರಾಗಿರುವ ಕಾಲದಲ್ಲಿ ಮೂಲಭೂತವಾದ ಹಕ್ಕನ್ನು ಪಡೆದುಕೊಂಡಿರುವ ಮತ್ತು ನಿರ್ಗತಿಕರಾಗಿರುವ 46 ಸಾವಿರ ಪ್ರಜಾಸಂಖ್ಯೆಗೆ ಏನು ಮಾಡುತ್ತೀರಿ? ನನ್ನ ಅಭಿಪ್ರಾಯ ಈ ಸಂದರ್ಭದಲ್ಲಿ ಏನಿದೆಯೆಂದರೆ, ಸಚಿವ ಮಂಡಲಿಯಲ್ಲಿ ಇದನ್ನು ಬಹಳ ಚೆನ್ನಾಗಿ ಆಲೋಚಿಸನೆ ಮಾಡಬೇಕು. ಮುಖ್ಯವಾಗಿ ಜಮೀನು ಕೊಂಡಿರುವವನಿಗೆ ಅಪಾಯವಾಗಬಾರದು ಒಂದೊಂದು ವೇಳೆ ಏನೋ ಕಾರಣಾಂತರಗಳಿಂದ ಅಂತಹ ಜಮೀನನ್ನು ಹಾಳು ಮಾಡಿಕೊಂಡಿರುತ್ತಾನೆ, ಈಗ ಅಂತಹವನು ನಿವೃತ್ತಿ ಹೊಂದುವ ಕಾಲದಲ್ಲಿ ಅದನ್ನು ನಗುವ ಹಾಗೆ ಮಾಡಬೇಕು. ಅವನಿಗೆ ತನ್ನ ಜಮೀನಿಂದ ಬರುತ್ತಿದ್ದ ಆದಾಯವನ್ನು ಕೊಡಬೇಕು. ಒಂದು ವೇಳೆ ಅದನ್ನು ಕೊಡುವುದಕ್ಕೆ ಸಾಧ್ಯವಿಲ್ಲದಿದ್ದರೆ ತನಗೆ ಜಮೀನು ಇಲ್ಲದೇ ಹೋದ ಪಕ್ಷದಲ್ಲಿ ಕೊನೆಯ ಪಕ್ಷ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಎಕರೆಗೆ ಜಮೀನು ಇಷ್ಟು ಕಾಳು ಅವನಿಗೆ ಕೊಡಬೇಕಾಗಿತ್ತೆಂದು ಹಿಂದೆಯೇ ತೀರ್ಮಾನವಾಗಿತ್ತು. ಅದೇ ರೀತಿ ಈಗಲೂ ಅವನಿಗೆ ಕೊಡಿ. ಅವನಿಗೆ ಪ್ರತಿ ವರ್ಷವೂ ಮಿರಾಸೆ ಬರುವ ಹಾಗೆ ಮಾಡಬೇಕು. ಪ್ರಪಂಚದಲ್ಲಿ ಜೀವನ. ಇವತ್ತು ಮುಖ್ಯ. ಇದು ಪ್ರಜಾ ರಾಜ್ಯ ಅವನಿಗೆ ಇನಾಂ ಇರಲಿ, ಇಲ್ಲದೇ ಇರಲಿ. ಪ್ರತಿಯೊಬ್ಬ ಮನುಷ್ಯವನ್ನು ಸುಖೀರಾಜ್ಯದಲ್ಲಿರಿಸಬೇಕು ಎಂಬುದೇ ಸರ್ಕಾರದ ಮುಖ್ಯೋಧ್ಯೇಯವಾಗಿರುವಾಗ ಅಧಿಕಾರದಿಂದ ಅವನನ್ನು ಚ್ಯುತಿಗೊಳಿಸುವ ಕಾಲದಲ್ಲಿ ಖಂಡಿತವಾಗಿ ಅಂತಹವನನ್ನು ಅನಾಥವನ್ನಾಗಿ ಮಾಡಬಾರದು. ತಾವು ಇರುವಾಗ ಆತ ಅನಾಥ ಶಿಶು ಆಗಬಾರದು, ಆ ರೀತಿಮಾಡಲೂಬಾರದು. ಹಣ ಖರ್ಚುಮಾಡಿ ಜಮೀನನ್ನು ಕೊಂಡುಕೊಂಡು, ಬೇಸಾಯ ಮಾಡಲಿ ಅಥವಾ ಇನ್ನಾವುದಾದರೂ ಕೈಗಾರಿಕೆ ಮಾಡಲಿ ಅದನ್ನೇ ಆಧಾರವಾಗಿಟ್ಟುಕೊಂಡು ಹಣ ತೆಗೆದುಕೊಂಡಿರುವವನಿಗೆ ಮತ್ತು ಹಣ ಕೊಟ್ಟಿರುವವನಿಗೆ ಯಾವ ರೀತಿಯಲ್ಲೂ ತೊಂದರೆ ಮಾಡಬಾರದು. ಈ ಅಧಿಕಾರವನ್ನು ಕಳೆದುಕೊಳ್ಳುವ ಹಕ್ಕುದಾರನಿಗೆ ಮಿರಾಸೆ 20ರಷ್ಟಾದರೂ ಕೊಡಬೇಕು ಎಂದು ನಾನು ಹೇಳುತ್ತೇನೆ. ಅದು ಯೋಗ್ಯ ಮತ್ತು ನ್ಯಾಯ. ನಾನು ಏತಕ್ಕೋಸ್ಕರ ಈ ಮಸೂದೆಯ ಮೇಲೆ ಇಷ್ಟು ಹೊತ್ತು ಮಾತನಾಡುತ್ತಿದ್ದೇನೆಂದರೆ, ಈ ಮಸೂದೆ ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ಹೋಗಿ ಬಂದ ಮೇಲೆ ಇಲ್ಲಿ ಮಾತನಾಡಲಿಕ್ಕೆ ಅಷ್ಟು ಕಾಲಾವಕಾಶವಿರುವುದಿಲ್ಲ. ಅಲ್ಲದೆ ಆ ಸಂದರ್ಭದಲ್ಲಿಯೇ ನಮ್ಮೆಲ್ಲರ ಈಗಿನ ಸಲಹೆಗಳನ್ನು ಪರಿಶೀಲಿಸಬಹುದು. ಮತ್ತು ಪ್ರತಿಯೊಂದು ಕ್ಲಾಜನ್ನೂ ಚೆನ್ನಾಗಿ ವಿಚಾರ ಮಾಡುತ್ತಾರೆ. ಆಗ ಅದು ಒವರ್ ಆಲ್‌ಪಿಕ್ಚರ್ ಆಗಿ ಬರುತ್ತದೆ. ಅದಕ್ಕಾಗಿ ಎಲ್ಲ ವಿಚಾರಗಳನ್ನು ಈಗಲೇ ಹೇಳುತ್ತಿದ್ದೇನೆ.

ಇನ್ನು 8ನೇ ಸೆಕ್ಷನ್. ಇದು ಅನಗತ್ಯ ಅದರಲ್ಲಿ ಈ ರೀತಿ ಹೇಳಿದೆ. ಯಾರಾದರೂ ಅವರ ಆಸ್ತಿಗೆ ಮುಂದೆ ಅಧಿಕಾರಿಗಳು ಇದ್ದರೆ ಕಾನೂನು ಪ್ರಕಾರ ಅವರಿಗೆ ಇರಬೇಕಾದ ಅರ್ಹತೆ ಇದ್ದೇ ಇರುತ್ತದೆ. ಆದ್ದರಿಂದ ಈ 8ನೇ ಅನುಚ್ಛೇದವನ್ನು ಸೇರಿಸುವುದು ಅನಗತ್ಯ. ಅದನ್ನು ತೆಗೆದೇ ಹಾಕಬಹುದು ಅಥವಾ ಬದಲಾವಣೆ ಮಾಡಬಹುದು.

ಇನ್ನು ಎಲ್ಲಕ್ಕಿಂತಲೂ ಮುಖ್ಯವಾಗಿ 10ನೆಯ ಅನುಚ್ಛೇದವಿದೆ. ಅದು ಕಾಂಪೆನೆಸೇಷನ್‌ಟು ಹೋಲ್ಡರ್ ಆಫ್ ಹೆರಿಡಿಟರಿ ವಿಲೇಜ್ ಆಫೀಸ್ ಎಂದು ಸರ್ಕಾರದವರು ಗ್ರಾಮದಲ್ಲಿ ದುಡ್ಡು ಸಂಗ್ರಹ ಮಾಡುವಾಗ ಸರ್ಕಾರದ ರೆವಿನ್ಯೂ ಸಚಿವರು ಏನು ಔದಾರ್ಯವನ್ನು ತೋರಿಸಿದ್ದರೋ ಅದೇ ಔದಾರ್ಯ, ಅದೇ ನೀತಿ, ಅದೇ ಶೀಲ, ಅದೇ ದರ್ಮಬುದ್ದಿ ಈ ಕ್ಲಾಜನ್ನು ಮಾಡುವಾಗ ಅವರಿಗೆ ಇರಲಿಲ್ಲವೇ ಎಂದು ಕೇಳುತ್ತೇನೆ. ಇವರಿಗೆ ಇಷ್ಟು ಮನೋವೃತ್ತಿ ಏಕೆ ಬಂತು? ಈ 'ಎ' ಸೆಕ್ಷನ್ 'ಬಿ' ಸೆಕ್ಷನ್ ಮತ್ತು 'ಸಿ' ಸೆಕ್ಷನ್‌ಗಳು ಕೆಲವು ಭಾಗಗಳಿಗೆ ಅದರಲ್ಲೂ ಹೈದರಾಬಾದ್ ಪ್ರಾಂತ್ಯಕ್ಕೆ ಅನ್ವಯವಾಗದಿರುವ ಹಾಗೆ ಹೇಳಿದ್ದಾರೆ. ಇದು ಮುಂದೆ ಬಹಳ ತೊಂದರೆಯನ್ನುಂಟು ಮಾಡುತ್ತದೆ. ಸ್ಮಾಲ್ ...... ರೇಟ್ ಆಫ್ ಪ್ರೊಮೋಷನ್ ಆಫ್ ಕಾಂಪೆನ್‌ಸೇಷನ್ ಇಟ್ಟಿದ್ದಾರೆ. ಇದು ನ್ಯಾಯಬದ್ಧವಾದುದಲ್ಲ. ಧರ್ಮಕ್ಕನುಸಾರವಾಗಿಯೂ ಇಲ್ಲವೆಂದು ಹೇಳುತ್ತೇನೆ.

ಈ ವಿಚಾರವನ್ನು ಮಾನ್ಯ ಸಚಿವರು ಹೇಳದೇ ಇದ್ದ ಮೇಲೆ ಹೇಗೆ? ಆವರೆ ಸುಮಾರು 2–3 ಬಾರಿ ಅನೇಕ ಪ್ರಬಲವಾದ ಕಾರಣಗಳಿಂದ ಅವರ ಪೋಟಪಿಗೆಯನ್ನು ಅಂದರೆ ಈ ವಾರ್ಷಿಕ ಸಂಭಾವನೆಯನ್ನು ಹೆಚ್ಚಿಸಿಕೊಂಡು ಬಂದರು. ಆಹಾರ ಪದಾರ್ಥಗಳ ಅಭಾವ ದಿನೇ ದಿನೇ ಹೆಚ್ಚುತ್ತಾ ಬಂದಿತು. ಸರ್ಕಾರಿ ಅಧಿಕಾರಿಗಳಾಗಿರುವವರಿಗೆ ಸಂಬಳಗಳನ್ನು ಹೆಚ್ಚು ಮಾಡುತ್ತಿದ್ದೀರಿ. ಅವರಿಗೆ ತುಟ್ಟಿ ಭತ್ಯೆ ಬೇರೆ ಕೊಡುತ್ತಿದ್ದೀರಿ. ಅದರ ಮೇಲೆಯೂ ಮಾಡಬೇಕಾದ ಪರಿಸ್ಥಿತಿಯೂ ಅವರಿಗೆ ಬಂತು.

ಇವರು ಎಂದರೆ ಗ್ರಾಮಾಧಿಕಾರಿಗಳು ಸರ್ಕಾರದ ಕೆಲಸವನ್ನು ಹೆಚ್ಚಾಗಿ ಮಾಡಬೇಕಾಗಿರುವುದರಿಂದ ಹೆಚ್ಚು ಸಂಭಾವನೆಯನ್ನು ಕೊಡಬೇಕಾದದ್ದು ಅತ್ಯಗತ್ಯ. ಈಗ ಅವರ ಕೆಲಸಗಳೆಲ್ಲಾ ಹೋಯಿತು. ಅವರಿಗೆ ಬರುತ್ತಿದ್ದ ಸಂಭಾವನೆಯೂ ಹೋಯಿತು. ಇಲ್ಲಿಯ ತನಕ ಸರ್ಕಾರದವರು ಅವರ ಜೀವನದ ಭಾರವನ್ನು ಹೊರಬೇಕಾಗಿತ್ತು. ಆದರೆ ಈಗ ಅವರಿಗೆ ಇದ್ದ ಹಕ್ಕುಭಾದ್ಯತೆಗಳನ್ನೆಲ್ಲಾ ಕಿತ್ತುಹಾಕಿ ಅವರಿಗೆ 3ಪಟ್ಟು 6 ಪಟ್ಟು ಆಮೇಲೆ 7ಪಟ್ಟು ಪರಿಹಾರ ಕೊಡುತ್ತೇವೆಂದು ಹೇಳಿದರೆ ಇದು ಯಾವ ನೀತಿ, ಯಾವ ಧರ್ಮ? ಅವರನ್ನು ಮನೆಗೆ ಕಳುಹಿಸುವಾಗ ಅವರನ್ನು ನಗುವ ಹಾಗೆ ಮಾಡುವುದು ಸರ್ಕಾರದವರ ಧರ್ಮ. ಅದನ್ನು ಬಿಟ್ಟು 7ಪಟ್ಟು ಕೊಡುತ್ತೇವೆಂದು ಹೇಳಿದರೆ ಅದು ನಿಲಕ್ಷಣವಾಗಿದೆ. ಅದಕ್ಕೆ ಜನ ಒಪ್ಪುವುದಿಲ್ಲ. ಅದು ಧರ್ಮಕ್ಕೆ ವಿರುದ್ಧವಾದುದು, ನೀತಿ ಬಾಹಿರವಾದುದು. ಅವರು ಸಂಪೂರ್ಣ ಜೀವನ ಮಾಡುವುದಕ್ಕೆ ಸಹಾಯಕವಾಗುವಂತೆ ಪ್ರಯತ್ನ ಮಾಡಬೇಕು. ಅವರ ಸಂಭಾವನೆಯ 20ಪಟ್ಟುಕೊಟ್ಟ ಪಕ್ಷದಲ್ಲಿ ಇದನ್ನೂ ಇನ್‌ಕ್ಲೂಡ್ ಮಾಡಿಕೊಡಬೇಕು. ಅವರಿಗೆ ವರ್ಷಕ್ಕೆ ಸಂಭಾವನೆ ಏನು ಬರುತ್ತಿತ್ತೋ ಅದರ 20ರಷ್ಟು ಅವರಿಗೆ ಪರಿಹಾರ ದ್ರವ್ಯವನ್ನು ಕೊಟ್ಟ ಪಕ್ಷದಲ್ಲಿ ನೀವು ಅವರಿಗೆ ಯೋಗ್ಯ ರೀತಿಯಲ್ಲಿ ಒಂದು ಪ್ರೋತ್ಸಾಹ ಕೊಡತಕ್ಕ ರೀತಿಯಲ್ಲಿ ನಡೆದು ಕೊಂಡಿದ್ದೀರಿ ಎಂದು ಕೆಲವು ಜನ ಹೇಳುತ್ತಾರೆ. ಸರ್ಕಾರದವರು 20ರಷ್ಟು ದುಡ್ಡುಕೊಟ್ಟರೂ ಅವರು ಅದರಿಂದ 3 ತಿಂಗಳು ಜೀವನ ಮಾಡಿಕೊಳ್ಳಬಹುದು.

ಅದು ಬಹಳ ಅಪ್ಯಾಯಮಾನವಾದದ್ದು. ಪ್ರಭುತ್ವ ಪಕ್ಷದವರು 30ಪಟ್ಟು ಕೊಡುತ್ತೇವೆಂದು ಒಪ್ಪಿದ ಪಕ್ಷದಲ್ಲಿ ಅವರಿಗೆ ಕನ್‌ಗ್ರ್ಯಾಚುಲೇಟ್ ಮಾಡುತ್ತೇನೆ. ಅವರು ಅದನ್ನು ಮಾಡಬೇಕು. ನಾನೇನು ಮಾಡಬಲ್ಲೆ? ಅವರನ್ನು ಅನುಗ್ರಹಿಸಬೇಕು ಎಂದು ಕೇಳಿ ಕೊಳ್ಳಬಲ್ಲೆ. ಇನ್ನು 20–25 ಪಟ್ಟು ಕೊಡದೆ ಹೋದರೆ ತಪ್ಪಾಗುತ್ತದೆ ಎಂದು ನಾನು ಹೇಳುತ್ತೇನೆ. ಗ್ರಾಮಾಧಿಕಾರಿಗಳು ಪಟೇಲರು, ಶ್ಯಾನುಭೋಗರು ಅಕ್ಷರಸ್ಥರಾದ ಜನರು ಇದ್ದರೆ, ಅವರಲ್ಲಿ ಯೋಗ್ಯರಾದ ಜನರು ಇದ್ದರೆ ಅಂಥವರು ಸೇವೆಯನ್ನು ಗ್ರಾಮ ಪಂಚಾಯಿತಿ ಸೆಕ್ರೆಟರಿ ಅಥವಾ ಅಸಿಸ್ಟೆಂಟ್ಸ್ ಆಗಿ ಅವರನ್ನು ಉಪಯೋಗಿಸಿಕೊಳ್ಳಬೇಕು. ಇಲ್ಲದೆ ಹೋದ ಪಕ್ಷದಲ್ಲಿ ಒಂದು ಗಾದೆ ಇದೆ. ಅದರಲ್ಲಿ ಹೇಳಿರುವಂತೆ ತಮ್ಮ ಕಾಲು ಮತ್ತು ತಲೆಯನ್ನು ಕತ್ತರಿಸಿಕೊಂಡ ಪ್ರಕರಣ ಬರುತ್ತದೆ. ಗ್ರಾಮ ಜೀವನದ ಗಂಧವೇ ಇಲ್ಲದೆ ಇರತಕ್ಕವನು ಗ್ರಾಮಾಧಿಕಾರಿಯಾದಲ್ಲಿ ಮೂರ್ಖನಾಗುತ್ತಾನೆ. ಬೀಡಿ ಸೇದಲು ಬಾರದವನು ಗಡ್ಡ ಸುಟ್ಟುಕೊಂಡ ಹಾಗಾಗುತ್ತದೆ. ಗಡ್ಡ ಸುಟ್ಟದ್ದರಿಂದ ಬೆಂಕಿಯೂ ಮೇಲಕ್ಕೆ ಏಳಲಿಲ್ಲ. ಅವನಿಗೆ ತೇಜಸ್ಸೂ ಬರಲಿಲ್ಲ. ಗ್ರಾಮ ನೌಕರರಲ್ಲಿ ಎಲ್ಲರನ್ನೂ ತೆಗೆದುಕೊಳ್ಳಿ ಎಂದು ನಾನು ಹೇಳುವುದಿಲ್ಲ. ಯಾವಾಗ ಅವರನ್ನು ರದ್ದುಮಾಡಿ ಅವರಿಗೆ ಒಂದು ವಿನಾಯಿತಿ ಮಾಡಿಕೊಟ್ಟಿದ್ದೀರಿ. ಅವರಿಗೆ ತೊಂದರೆ ಆಗದಂತೆ ಇವರಿಗೆ ಪ್ರಿಫರೆನ್ಸ್ ತೋರಿಸಬೇಕು. ಅವರನ್ನು ಉದ್ಧಾರ ಮಾಡುವುದಕ್ಕೆ ನಾನು ಹೇಳಲಿಲ್ಲ. ಹಳ್ಳಿಯಲ್ಲಿರತಕ್ಕ ಜನರನ್ನು ಉದ್ಧಾರ ಮಾಡಬೇಕಾಗಿದ್ದರೆ ಗ್ರಾಮಾಧಿಕಾರಿಗಳಾಗಿದ್ದು ನಿವೃತ್ತಿ ಹೊಂದುವವರು ಇದಕ್ಕೆ ಅರ್ಹರಾಗಿರುವವರು ಅಕೌಂಟ್ಸ್ ಬಲ್ಲವರು, ಹೆಚ್ಚು ಇನ್ನೊಬ್ಬರ ಗುಂಪು ಎನ್ನತಕ್ಕಂಥ ಸಂಕುಚಿತ ಮನೋಭಾವನೆಯನ್ನು ಇಟ್ಟುಕೊಳ್ಳದೆ ಇರುವವರನ್ನು ಉಪಯೋಗ ಮಾಡಿಕೊಳ್ಳಬೇಕು.

ಅದನ್ನು ಹಾಗೆಯೇ ಬದಲಾವಣೆ ಮಾಡುತ್ತಿದ್ದಾರೆ, ಆದರೆ ಅದು ಬಹಳ ಕಷ್ಟದಾಯಕವಾದ ವಿಷಯ. ಒಟ್ಟಿನಲ್ಲಿ ಸುಮಾರು ಒಂದು ಲಕ್ಷ ಜನ ಇವೊತ್ತು ನಿರುದ್ಯೋಗಿಗಳ ಗುಂಪಿಗೆ ಸೇರಿ ತಮ್ಮ ಆಗ್ರಹಕ್ಕೆ ತುತ್ತಾಗಿದ್ದಾರೆ. ಅವರ ಸೇವೆ ಬೇರೆ ರೀತಿಯಲ್ಲಿ ಜನರಿಗೆ ಸಿಕ್ಕುವ ಹಾಗೆ ಮಾಡಿ ಅವರು ಅತೃಪ್ತರಾದದೆ ಇರುವಂತೆ ನೋಡಿಕೊಳ್ಳಬೇಕೆಂದು ವಿನಂತಿ ಮಾಡಿಕೊಂಡು ಅಕಾಲಿಕವಾಗಿ ಈ ಮಸೂದೆಯನ್ನು ತರಬಾರದಾಗಿತ್ತು ಎಂದು ಹೇಳಿ ನನ್ನ ವಂದನೆಗಳನ್ನು ಮಾನ್ಯ ಸಭಾಪತಿಗಳಿಗೆ ಸೂಚಿಸಿ ನನ್ನ ಮಾತನ್ನು ಮುಗಿಸುತ್ತೇನೆ.

– * –

# V ಭೂ ಸುಧಾರಣಾ ಕಾನೂನುಗಳು ಕುರಿತಂತೆ ಪ್ರೊ: ಎಂ.ಪಿ.ಎಲ್. ಶಾಸ್ತ್ರೀಯವರ ಭಾಷಣಗಳು

## 1. ಮೈಸೂರು ಇನಾಂ ರದ್ದತಿ ಮಸೂದೆ, 1954ರ ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ – ಈ ತಿದ್ದುಪಡಿಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಹೇಳುತ್ತಾ ಮಾನ್ಯ ರೆವೆನ್ಯೂ ಸಚಿವರು ಎರಡುಮೂರು ನಿದರ್ಶನಗಳನ್ನು ಹೇಳಿದ್ದಾರೆ. ಇವೆಲ್ಲಾ ಸಾಮಾನ್ಯವಾಗಿ ಕಾನೂನು ಮಾಡುವಾಗ ಈ ರೀತಿ ಪ್ರಯೋಗ ಮಾಡುವ ನಿದರ್ಶನಗಳೇ ಅಲ್ಲ. ಇನ್ನು ಶ್ರೀಮಾನ್ ಜಿ. ವೀರಪ್ಪನವರ ವಾದದ ವಿಚಾರದಲ್ಲಿ ಒಂದು ಮಾತು ಹೇಳಬೇಕಾಗಿದೆ. ಅವರು ಈ ವಿಧವಾದ ಪ್ರಾವಿಜನ್ ಇರುವುದು ತಪ್ಪು ಎಂದು ಭಾವನೆ ಮಾಡಿಕೊಂಡಿದ್ದರೆ ಅದೂ ಅವರು ಸುಪ್ರಸಿದ್ಧ ನ್ಯಾಯವಾದಿಗಳಾಗಿ, ನನಗೆ ಆಶ್ಚರ್ಯವಾಗುತ್ತದೆ. ಯಾವುದೋ ಒಂದು ಕಾನ್‌ಫ್ಲಿಕ್ಟ್ ಬರುತ್ತದೆ. ಆ ಸಭೆಗೂ ಇದಕ್ಕೂ ಎಂದು ಹೇಳಿ, ಇದನ್ನು ಒತ್ತಾಯ ಮಾಡಬಾರದೆಂದು ಹೇಳಿದ್ದಾರೆ. ಆ ಹೆದರಿಕೆಯ ಮನೋ ವೃತ್ತಿಯನ್ನು ನಾನು ಒಪ್ಪತಕ್ಕವನಲ್ಲ. ತಾವು ಮೊದಲೇ ಅಪ್ಪಣೆ ಕೊಡಿಸಿದ ಹಾಗೆ, ಇದನ್ನು ಒಂದು ಹೆದರಿಕೆಯ ದೃಷ್ಟಿಯಿಂದಾಗಲಿ ಅಥವಾ ಹೊಗಳಿಕೆಯ ದೃಷ್ಟಿಯಿಂದಾಗಲಿ ವಿಮರ್ಶೆ ಮಾಡುವುದಕ್ಕಿಂತ ಇಡೀ ದೇಶದ ಹಿತದೃಷ್ಟಿಯಿಂದ ವಿಮರ್ಶೆ ಮಾಡುವುದು ಯೋಗ್ಯವೆಂದು ನನ್ನ ಭಾವನೆ. ನಮ್ಮ ಮೈಸೂರು ದೇಶದಲ್ಲಿ ಎರಡು ಶಾಸನ ಸಭೆಗಳೂ ಯಾವಾಗಲೂ ಒಂದನ್ನು ಇನ್ನೊಂದು ತಪ್ಪರ್ಥ ಮಾಡಿಕೊಂಡಿಲ್ಲ. ಈ ಸಾಮರಸ್ಯ ಮೈಸೂರಲ್ಲಿ ಅನೇಕ ವರ್ಷಗಳಿಂದಲೂ ಬೆಳೆದುಕೊಂಡು ಬಂದಿದೆ. ಎರಡು ಸಭೆಗಳೂ ಶಾಸಕಾಂಗದ ಎರಡು ಚಕ್ರಗಳ ಹಾಗೆ ನಡೆದುಕೊಂಡು ಹೋಗುತ್ತಿವೆ.

ಹೀಗೆ ಒಬ್ಬೊರಿಗೊಬ್ಬರು ವಿಚಾರ ವಿನಿಮಯಮಾಡಿಕೊಂಡು ಒಂದು ಕಡೆಯ ಬೆಳಕನ್ನು ತೆಗೆದುಕೊಂಡು ಹೋಗಿ ದೇಶದ ಇನ್ನೊಂದು ಕಡೆಗೆ ಬಿತ್ತಿ, ಅದನ್ನು ದೇಶದ ಜನರಿಗಾಗಿ ಉಪಯೋಗಮಾಡಿ ಇದರಿಂದ ದೇಶದ ಹಿತದೃಷ್ಟಿಯನ್ನು ಬೆಳೆಸಿಕೊಂಡು ಬರಬೇಕೆಂದು ಹೇಳುತ್ತಿದ್ದೇನೆ.

ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಜಿ ವೀರಪ್ಪನವರು ಏನೊಂದು ಭಾವನೆ ಮಾಡಿಕೊಂಡಿದ್ದಾರೋ ಅಂಥ ಒಂದು ದೃಷ್ಟಿ ಇರಬಾರದೆಂದು ನಾನು ತಿಳಿದುಕೊಂಡಿದ್ದೇನೆ. ಹೀಗೆ ಏನಾದರೂ ಒಂದು ಕಾನೂನು ಮಾಡುವಾಗ ಆ ಜ್ಯೂರಿಸ್‌ಪ್ರೂಡೆನ್ಸ್ ಎಂದು ಯಾವುದಿದೆಯೋ ಅದರಲ್ಲಿ ಏನು ಹೇಳಿರುತ್ತದೆಯೋ ಅದಕ್ಕನುಸಾರವಾಗಿ ಮತ್ತು ಅಂಥ ಶಾಸ್ತ್ರ ಸಂಪ್ರದಾಯಗಳಿಗೆ ಅನುಸಾರವಾಗಿ ನಡೆದುಕೊಂಡು ಬರಲು ಅವಕಾಶವಿರುವಂತೆ ಅದು ಒಂದು ಸಾಮಾನ್ಯ ಕಾನೂನಾಗಿರುವಂತೆ ಮಾಡಿಕೊಂಡು ಬರಬೇಕು. ತಾವು ಈ ದಿವಸ ಹಂದಿರತಕ್ಕಂಥ ಈ ಕಾನೂನು ಭೂಸುಧಾರಣೆಗೆ ಸಹಾಯಕವಾಗಿರುವಂಥ ಒಂದು ಕಾನೂನಾಗಿರುತ್ತದೆಂದು ನಾನು ಭಾವನೆ

1. ಮೈಸೂರು ಇನಾಂ ರದ್ದತಿ ಮಸೂದೆ, 1954ರ ಕುರಿತಂತೆ 16.4.1954, 17.4.1954 ರಂದು ನಡೆದ ಚರ್ಚೆಯಲ್ಲಿ

ಮಾಡಿಕೊಂಡಿದ್ದೇನೆ. ಇದೇ ಎಲ್ಲರ ಭಾವನೆ ಎಂದು ಕಂಡುಬರುತ್ತದೆ. ಇನಾಂದಾರನ ಮೇಲೆ ಹಾಕುವುದು ಸರಿಯಾದದ್ದಲ್ಲ. ಇದನ್ನು ತೆಗೆದುಹಾಕಬೇಕೆಂದು ಹೇಳುತ್ತೇನೆ. ಹಾಗೆ ಮಾಡುವುದು ಉಚಿತವೆಂದು ಹೇಳಿ ನಾನು ಈ ತಿದ್ದುಪಡಿಯನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಸ್ವಾಮಿ, ನನ್ನ ತಿದ್ದುಪಡಿಯ ಈ ರೀತಿಯಾಗಿದೆ:–

"In item (i) of sub clause (1) for the words "twenty time", the words 'twenty-five times' shall be substituted." ಇದನ್ನು ಮಂಡಿಸುತ್ತೇನೆ.

ಮಾನ್ಯ ಸಭಾಪತಿಗಳವರೆ, ಈ 17ನೆಯ ಅನುಚ್ಛೇದ ಇನಾಂದಾರರುಗಳಿಗೆ ಸೇರಿದ್ದಂಥ ಜಮೀನುಗಳನ್ನು ಸರ್ಕಾರದವರು ಅವರಿಂದ ತೆಗೆದುಕೊಂಡು ಆ ಜಮೀನುಗಳನ್ನು ಖಾಯಂ (ಖಾಯಂ) ಟನೆಂಟುಗಳಿಗೂ ಮತ್ತು ಪರ್ಮನೆಂಟ್ ಟನೆಂಟುಗಳಿಗೂ ಮತ್ತು ಕ್ವಾಸಿ–ಪರ್ಮನೆಂಟ್ ಟನೆಂಟುಗಳಿಗೂ ಕೊಡತಕ್ಕ ಸಂದರ್ಭದಲ್ಲಿ ಆ ಇನಾಂದಾರರಿಗೆ ಕೊಡತಕ್ಕಂಥ ಒಂದು ಪರಿಹಾರ ದ್ರವ್ಯದ ಮೊಬಲಗಿಗೆ ಸಂಬಂಧಪಟ್ಟಿದ್ದಾಗಿರುತ್ತದೆ. ಆದರೆ ಈಗ ಈ ಮಸೂದೆಯಲ್ಲಿ ಇನಾಂದಾರರುಗಳಿಗೆ ಏನೊಂದು ಪರಿಹಾರವನ್ನು ಕೊಡಬೇಕೆಂಬುದಾಗಿ ಸೂಚಿಸಲಾಗಿರುತ್ತದೆಯೋ ಅದು ಕೇವಲ ಅತ್ಯಲ್ಪವಾಗಿರುತ್ತದೆಯೆಂದು ನಾನು ಭಾವನೆ ಮಾಡಿಕೊಂಡಿದ್ದೇನೆ. ಆದರೆ ಈ 17ನೆಯ ಅನುಚ್ಛೇದದ ಎಕ್ಸ್‌ಪ್ಲನೇಷನ್ನಲ್ಲಿ ತಿಳಿಸಿರುವ ವಿಚಾರಕ್ಕೂ ಮತ್ತು ಈ ಪರಿಹಾರ ಮೊಬಲಗನ್ನು ಕೊಡಭೇಕೆಂಬುದಕ್ಕೂ ಸ್ವಲ್ಪ ವ್ಯತ್ಯಾಸವಿದೆಯೆಂದು ಕಂಡುಬರುತ್ತದೆ.

ಅವರು ಏನು ಒಂದು ಲ್ಯಾಂಡ್ ರೆವ್‌ನ್ಯೂವನ್ನು ಕೊಡುತ್ತಾರೋ ಅದರ 20ರಷ್ಟನ್ನು ಇನಾಂದಾರರಿನಿಗೆ ಪರಿಹಾರ ರೂಪವಾಗಿ ಕೊಡಬೇಕೆಂದು ಸೂಚನೆ ಮಾಡಿದ್ದಾರೆ. ಇದು ತೀರ ಅತ್ಯಲ್ಪವಾಯಿತೆಂದು ಹೇಳಬೇಕಾಗಿದೆ. ಈ ಲ್ಯಾಂಡ್ ರೆವನ್ಯೂ ಎಂಬತಕ್ಕದ್ದು ಕೆಲವು ಕಡೆ ಎಕರೆಯೊಂದಕ್ಕೆ ಹನ್ನೆರಡಾಣೆಗಳಿರಬಹುದು, ಮತ್ತೆ ಕೆಲವು ಕಡೆ ಎಕರೆಗೆ ಒಂದು ರೂಪಾಯಿ ಇರಬಹುದು. ಇನ್ನೂ ಕೆಲವು ಕಡೆ ಒಂದೂವರೆ ರೂಪಾಯಿಗಳಿದ್ದರೂ ಇರಬಹುದು. ಹೀಗೆ ಒಂದು ಎಕರೆ ಜಮೀನಿಗೆ ಕೊಡಲ್ಪಡುತ್ತಿರುವ ಕಂದಾಯದ 20ರಷ್ಟನ್ನು ಪರಿಹಾರವಾಗಿ ಇನಾಂದಾರರಿಗೆ ಕೊಡಬೇಕೆಂದು ಹೇಳಿರತಕ್ಕದ್ದನ್ನು ಲೆಕ್ಕ ಹಾಕಿ ನೋಡಿದರೆ ಅದು ಕೇವಲ 20–25 ರೂಪಾಯಿಗಳಿಗೆ ಹೆಚ್ಚಿಗೆ ಆಗಲಾರದೆಂದು ತಿಳಿದುಬರುತ್ತದೆ. ಇಷ್ಟು ಮೊಬಲಗಿನ ಪರಿಹಾರದಿಂದ ಆ ಇನಾಂದಾರರಿಗೆ ಯಾವ ಪ್ರಯೋಜನವಾಗಲಿ ಅಥವಾ ಯಾವ ಒಂದು ಸೌಕರ್ಯವಾಗಲಿ ದೊರೆಯುವುದಿಲ್ಲವೆಂದು ನಾನು ತಿಳಿಸಬೇಕಾಗಿದೆ. ಹಣದ ರೂಪದಲ್ಲಿ ಅಲ್ಲದೆ ಧಾನ್ಯಗಳ ರೂಪದಲ್ಲಿ ಪಾವತಿ ಮಾಡತಕ್ಕಂಥ ಸಂದರ್ಭಗಳಲ್ಲಿ ಈ ಜಮೀನ ಕಂದಾಯವನ್ನು ನಿರ್ಧರಿಸಬೇಕಾಗಿದ್ದರೆ 1954ನೆಯ ಇಸವಿ ಜನವರಿ ಒಂದನೆಯ ತಾರೀಖಿನ ದಿನ ಆ ದವಸಧಾನ್ಯಗಳಿಗೆ ಇದ್ದಂಥ ಬಜಾರು ಬೆಲೆಯ ಆಧಾರದ ಮೇಲೆ ನಿರ್ಧಾರಮಾಡಿ ಆ ಪ್ರಕಾರ ಪರಿಹಾರ ಕೊಡಬಹುದೆಂದು ಈ ಎಕ್ಸ್‌ಪ್ಲನೇಷನ್ನಿನಲ್ಲಿ ತಿಳಿಸಿದ್ದಾರೆ. ಹೀಗೆ ಇಲ್ಲಿ ತಿಳಿಸಿರುವುದಕ್ಕೂ ಮತ್ತು ವಿವರಣೆಯ (3)ನೆಯ ಒಳಪ್ರಕಾರಣದಲ್ಲಿ ಸೂಚಿಸಿರುವುದಕ್ಕೂ ಎಂದರೆ, ಅಲ್ಲಿ ಈ ಲ್ಯಾಂಡ್ ರೆವೆನ್ಯೂ ಎಂದು ಹೇಳಿರುವುದಕ್ಕೂ ಒಂದು ವ್ಯತ್ಯಾಸ ಕಂಡುಬರುತ್ತದೆ.

ಅಲ್ಲಿ ಕೇವಲ ಹಣದ ರೂಪದಲ್ಲಿ ಕಂದಾಯವನ್ನು ಪಾವತಿ ಮಾಡುತ್ತಿರುವಾಗ ಮಾತ್ರ ಆ ರೀತಿ ಮಾಡಬೇಕೆಂದು ಅರ್ಥವಾಗುತ್ತದೆ. ಹೀಗೆ ಈ ಒಂದು ಎಕ್ಸಪ್ಲನೇಷನ್ನಿಗೂ ಆ ಒಂದು ಎಕ್ಸ್‌ಪ್ಲನೇಷನ್ನಿಗೂ ವ್ಯತ್ಯಾಸವಿರುತ್ತದೆ. ಹೀಗೆಲ್ಲಾ ವ್ಯತ್ಯಾಸವಿರುವುದರ ಜೊತೆಗೆ ಈಗ ಇನಾಂದಾರನಿಗೆ ಪಾವತಿ ಮಾಡತಕ್ಕಂಥ ಪರಿಹಾರದ ಮೊಬಲಗನ್ನು ಈ ಕಂದಾಯದ ಎಂದರೆ ಹಣದ ರೂಪದಲ್ಲಿ ಕೊಡಲಾಗುತ್ತಿರುವ ಕಂದಾಯದ 20ರಷ್ಟನ್ನು ಕೊಡಬೇಕೆಂದು ಹೇಳಿರುದರಲ್ಲಿ ಆತನಿಗೇನೂ ಸೌಕರ್ಯವಾಗುವುದಿಲ್ಲ. ಈ ಕಾರಣದಿಂದ ಈಗ ಸರ್ಕಾರದವರೇನೂ 20ರಷ್ಟನ್ನು ಕೊಡಬೇಕೆಂದು ತಿಳಿಸಿದ್ದಾರೋ ಅದನ್ನು ಇನ್ನೂ ಸ್ವಲ್ಪ ಹೆಚ್ಚು ಮಾಡಿದರೆ, ಎಂದರೆ 25 ರಷ್ಟನ್ನಾದರೂ ಮಾಡಿದರೆ ಆ ಇನಾಂದಾರನಿಗೆ ಸ್ವಲ್ಪ ಅನುಕೂಲವಾಗಬಹುದೆಂಬ ಉದ್ದೇಶದಿಂದ ನಾನು ಈಗ ಈ ತಿದ್ದುಪಡಿಯನ್ನು ತಂದಿದ್ದೇನೆ. ನಾನು ಕೇಳಿರತಕ್ಕದ್ದಾದರೂ ಕೇವಲ ಅಲ್ಪ ಪ್ರಮಾಣದ ಸಹಾಯ. ಸರ್ಕಾರದವರೂ ಮತ್ತು ಈ ಶೂನ್ಯ ಸಭೆಯವರೂ ಇದನ್ನು ದೊಡ್ಡ ಮನಸ್ಸು ಮಾಡಿ ಒಪ್ಪಿಕೊಳ್ಳಬೇಕೆಂದು ಅರಿಕೆ ಮಾಡಿಕೊಂಡು ನಾನು ಈ ತಿದ್ದುಪಡಿಯನ್ನು ಸಭೆಯ ಮುಂದೆ ಇಡುತ್ತೇನೆ.

ಈ ತಿದ್ದುಪಡಿಯನ್ನು ಮಂಡಿಸಲು ನನ್ನ ಉದ್ದೇಶವಾದರೂ ಇಷ್ಟೆ : ಸರ್ಕಾರದವರು ಈಗಾಗಲೇ ಏನೊಂದು ಜಮೀನುಗಳನ್ನು ಈ ಇನಾಂದಾರನಿಗೆ ಬಿಡಬೇಕೆಂದು ಹೇಳಿದ್ದಾರೋ ಅದಕ್ಕಿಂತಲೂ ಇನ್ನೊಂದು ಹತ್ತು ಎಕರೆ ಭೂಮಿಯನ್ನು ಜಾಸ್ತಿಯಾಗಿ ಹಾಕಿಕೊಡಬೇಕೆಂದು ಕೇಳತಕ್ಕದ್ದೇ ಆಗಿದೆ. ಈಗಾಗಲೇ ಸರ್ಕಾರದವರು ಆ ಇನಾಂದಾರನಿಗೆ ಖುಷ್ಕಿ ಜಮೀನಾಗಿದ್ದರೆ 10 ಎಕರೆ ತರೀ ಭೂಮಿಯಾಗಿದ್ದರೆ 5 ಎಕರೆ ಮತ್ತು ಬಾಗಾಯಿತು ಜಮೀನಾಗಿದ್ದರೆ ಎರಡೂವರೆ ಎಕರೆ ಭೂಮಿಯನ್ನು ಕೊಡಬಹುದೆಂದು ಒಪ್ಪಿಕೊಂಡಿದ್ದಾರೆ. ಆದರೆ ನಾನೀಗ ತಂದಿರತಕ್ಕ ತಿದ್ದುಪಡಿಯನ್ನು ಇನ್ನೂ 10 ಎಕರೆ ಭೂಮಿಯನ್ನು ಜಾಸ್ತಿಯಾಗಿ ಇನಾಂದಾರನಿಗೆ ಕೊಡಬೇಕೆಂದು ಅರ್ಥವಾಗುತ್ತದೆ. ಈಗ ಸರ್ಕಾರದವರೇನು ಕೊಡಬೇಕೆಂದು ಉದ್ದೇಶಿಸಿರುತ್ತಾರೋ ಅದರಿಂದ ಅವರಿಗೆ ಸುಖವಾಗಿ ಜೀವನಮಾಡಲು ಅವಕಾಶವಿರಲಾರದು. ಆದುದರಿಂದ ಅವರಿಗೆ ಸುಖವಾಗಿ ಜೀವನವನ್ನಾದರೂ ನಡೆಸಿಕೊಂಡು ಹೋಗುವುದಕ್ಕೆ ಒಂದು ಅವಕಾಶವನ್ನುಂಟು ಮಾಡಲು ಇನ್ನೂ 10 ಎಕರೆ ಭೂಮಿಯನ್ನು ಆ ಇನಾಂದಾರರಿಗೆ ಕೊಡಬೇಕೆಂದು ಒಂದು ರಿತ್ಯ ಈ ತಿದ್ದುಪಡಿಯಲ್ಲಿ ಅಡಕವಾಗಿರುತ್ತದೆ. ಮಾನ್ಯ ಮಂತ್ರಿಗಳೂ ಮತ್ತು ಈ ಮಾನ್ಯ ಸಭೆಯವರೂ ಇದನ್ನು ಪರಿಶೀಲನೆ ಮಾಡಬೇಕು. ಅದನ್ನು ಪ್ರತಿಪಾದನೆ ಮಾಡಲೇಬೇಕು. ನಮ್ಮ ದೇಶದಲ್ಲಿ ಯಾರು ಯಾರು ಭೂಮಿಯನ್ನು ಸಾಗುವಳಿ ಮಾಡಿಕೊಂಡು ಆ ಒಂದು ವೃತ್ತಿಯಲ್ಲಿಯೇ ಪ್ರಾಮಾಣಿಕತನದಿಂದ ಜೀವನ ನಡೆಸಿಕೊಂಡು ಬರುತ್ತಿದ್ದಾರೋ ಅಂಥವರುಗಳಿಗೆಲ್ಲಾ ಒಂದು ಗೊತ್ತಾದ ಪರಿಮಾಣದಲ್ಲಿ ಅವರ ಜೀವನಕ್ಕೆ ಸಾಕಾಗುವಷ್ಟು ಭೂಮಿಯನ್ನು ಅವರಿಗೆ ಬಿಟ್ಟುಕೊಡಲೇಬೇಕೆಂದು ಹೇಳತಕ್ಕವರ ಪೈಕಿ ನಾನೂ ಒಬ್ಬ. ಆ ತತ್ವವನ್ನು ನಾನೂ ಸಹ ಒಪ್ಪುತ್ತೇನೆ. ಈ ದಿವಸ ತಾವೇನು ಹೀಗೊಂದು ಜಮೀನನ್ನು ಅವರಿಗೆ ಬಿಟ್ಟುಕೊಡುತ್ತೀರೋ ಇದರಿಂದಲೇ ಅವರು ಮುಂದುವರಿಯಬೇಕಾಗಿರುತ್ತದೆ. ಅದರ ವಿಶಿಷ್ಟ ಜೀವನೋಪಾಯದ ಖರ್ಚು ವೆಚ್ಚಗಳೆಲ್ಲ ಇದರಿಂದಲೇ ಅವರಿಗೆ ದೊರೆಯಬೇಕಾಗಿರುತ್ತದೆ. ಅಲ್ಲದೆ ಆ ಇನಾಂದಾರರುಗಳಲ್ಲಿ ಈ ದಿವಸ ಅನೇಕ ಅವಿಭಕ್ತ ಕುಟುಂಬಗಳು

ಬೇರೆ ಇದ್ದು ಅಂಥ ಕುಟುಂಬದಲ್ಲಿ 40–50 ಜನಗಳಿರುತ್ತಾರೆ. ಅವರಿಗೆ ಈಗ ಸರ್ಕಾರದವರು ಬಿಡಬೇಕೆಂದು ನಿರ್ಧರಿಸತಕ್ಕಂಥ ಜಮೀನು ಅವರ ಜೀವನಕ್ಕೆ ಏತಕ್ಕೂ ಸಾಲುವುದಿಲ್ಲ. ಅವರು ವರ್ಷದಲ್ಲಿ ಅರ್ಧಂಬರ್ಧ ಜೀವನ ಮಾಡಬಹುದು. ಆದುದರಿಂದ ಸರ್ಕಾರದವರು ಈಗೇನು ಒಂದು ದೊಡ್ಡಮನಸ್ಸು ಮಾಡಿ ಉದಾರ ಭಾವನೆಯನ್ನು ತೋರಿಸಿ ಈ ದಿವಸ ಆ ಇನಾಂದಾರರಿಗೆ 10 ಎಕರೆ ಖುಷ್ಕಿ ಅಥವಾ 5 ಎಕರೆ ತರಿ ಅಥವಾ ಎರಡೂವರೆ ಎಕರೆ ಬಾಗಾಯಿತು ಜಮೀನುಗಳನ್ನು ಬಿಡಬೇಕೆಂದು ಮಾಡಿದ್ದಾರೋ ಇದಕ್ಕೆ ಪ್ರತಿಯಾಗಿ ಆತನಿಗೆ ಎಲ್ಲಾ ಬಗೆಯ ಜಮೀನುಗಳೂ ಸೇರಿ 20 ಎಕರೆಗಳಿಗೆ ಕಡಿಮೆಯಿಲ್ಲದಷ್ಟು ಭೂಮಿಯನ್ನು ಕೊಡಬೇಕೆಂದು ಈ ತಿದ್ದುಪಡಿಯನ್ನು ತಂದಿದ್ದೇನೆ. ಈಗಾಗಲೇ ಈ ಬಗ್ಗೆ ಸರ್ಕಾರದವರೂ ಮತ್ತು ಈ ಸಭೆಯವರೂ ಏನೊಂದು ದೊಡ್ಡಮನಸ್ಸು ಮಾಡಿ ಇದಕ್ಕೆ ಒಪ್ಪಿಗೆ ಕೊಟ್ಟಿದ್ದಾರೋ ಅದೇ ರೀತಿ ಈಗಲೂ ತಮ್ಮ ಮನಸ್ಸನ್ನು ಸರ್ಕಾರದವರು ಪರಿವರ್ತನೆ ಮಾಡಿಕೊಂಡು, ಒಂದು ದೊಡ್ಡ ಉದಾರ ಭಾವನೆಯನ್ನು ತೋರಿಸಿ ಇದನ್ನು ಒಪ್ಪಿಕೊಳ್ಳಬೇಕೆಂದು ನಾನು ಸರ್ಕಾರದವರನ್ನು ಈ ಸಭೆಯ ಮೂಲಕ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ. ಇದಕ್ಕೆ ಸಭೆಯವರೆಲ್ಲಾ ತಮ್ಮ ಬೆಂಬಲ ನೀಡಬೇಕೆಂದು ಕೇಳಿಕೊಳ್ಳುತ್ತೇನೆ.

## 2. ಗೇಣಿ ಶಾಸನ, 1961 ರ ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ :–

ಶ್ರೀಮಾನ್ ವೆಂಕಟಪ್ಪನವರ ತಿದ್ದುಪಡಿಯನ್ನು ಸಮರ್ಥನೆ ಮಾಡುವುದಕ್ಕಾಗಿ ನಾನು ನಿಂತಿದ್ದೇನೆ. ಈ ವಿಧೇಯಕದ 22ನೆಯ ಖಂಡದಲ್ಲಿರುವ "eviction of tenant for defaultete" ಎಂದಿರುವುದು 5ನೆಯ ಖಂಡದಲ್ಲಿ ಬರುವ ಐದಾರು ವರ್ಗಗಳ ಜನರಿಗೆ ಅನ್ವಯಿಸುವುದು. ಈ ವಿಧೇಯಕ ಅಂಗೀಕಾರವಾಗಿ ಕಾನೂನಾದ ಮೇಲೆ ಭೂಮಾಲೀಕ ಮತ್ತು ಗೇಣಿದಾರ ಎನ್ನುವ ಪ್ರಶ್ನೆಯೇ ಇರುವುದಿಲ್ಲ. ತನ್ನ ಸ್ವಂತ ಸಾಗುವಳಿಗಾಗಿ ಯಾರಾದರೂ ಜಮೀನನ್ನು ತನ್ನ ವಶಕ್ಕೆ ತೆಗೆದುಕೊಂಡ ಪಕ್ಷದಲ್ಲಿ ಅವನೇ ವ್ಯವಸಾಯ ಮಾಡುತ್ತಾನೆ, ಭೂಮಾಲೀಕನೂ ಆಗುತ್ತಾನೆ. ಇದುವರೆಗೆ ಯಾರು ರೈತರಾಗಿದ್ದಾರೋ ಅವರೂ ಭೂಮಾಲೀಕರಾಗುತ್ತಾರೆ. ಟೆನೆಂಟ್ ರೈತನನ್ನು ದೂಡುವ ಪ್ರಕರಣ ಯಾರಿಗೆ ಅನ್ವಯಿಸುತ್ತದೆಂದರೆ, 5ನೆಯ ಖಂಡದಲ್ಲಿ ಸೂಚಿಸಿರುವ ಜನರಿಗೆ ಎಂದರೆ ಸಣ್ಣ ಹಿಡುವಳಿದಾರರು, ಮೈನರ್‌ಗಳು, ಅಶಕ್ತರು, ಅನಾಥರು, ಅವಿವಾಹಿತರು, ವಿಧವೆಯರು, ಇತ್ಯಾದಿ ಕಾರಣಾಂತರರಿಂದ ತಾವೇ ಸ್ವಂತವಾಗಿ ಬೇಸಾಯ ಮಾಡುವುದಕ್ಕೆ ಸಾಧ್ಯವಿಲ್ಲದಿರುವ ಜನರಿಗೆ ಅನ್ವಯಿಸುತ್ತದೆ. ಈ ಜನರು ಮಾತ್ರ ಇತರರ ಮೂಲಕ ಸಾಗುವಳಿ ಮಾಡಿಸುವುದಕ್ಕೆ ಅವಕಾಶವಿದೆ. ರೈತರನ್ನು ಉದ್ಧಾರ ಮಾಡಬೇಕೆನ್ನುವಾಗ ಹಾಗೆಯೇ ಬುದ್ಧಿ ಮತ್ತು ಅಂಗವಿಕಲರು,

---

2. ಗೇಣಿ ಶಾಸನ, 1961ರ ಕುರಿತಂತೆ 13.11.1961ರಂದು ನಡೆದ ಚರ್ಚೆಯಲ್ಲಿ

ಚಿಕ್ಕಮಕ್ಕಳು, ದೇಶವನ್ನು ರಕ್ಷಣೆ ಮಾಡತಕ್ಕ ಸೈನಿಕರು, ಯಾವ ಕೆಲಸ ಮಾಡಲೂ ಅಶಕ್ತರಾಗಿರುವ ಜನರು ಇವರನ್ನೆಲ್ಲಾ ರಕ್ಷಣೆ ಮಾಡಬೇಕು.

ಅವರು ಭೂಮಿಗಳನ್ನು ರೈತರಿಗೆ ಕೊಟ್ಟಿರುತ್ತಾರೆ. ಅವರು ಕೊಟ್ಟಿರುವುದು ರೈತರು ತಾವು ಬೆಳೆದ ಬೆಳೆಯಲ್ಲಿ ಎಷ್ಟು ಅವರಿಗೆ ಗುತ್ತಿಗೆ ಸಲ್ಲಬೇಕೋ ಎಷ್ಟು ಭಾಗ ಅವರಿಗೆ ಸಂದಾಯಮಾಡುಬೇಕೋ ಅದನ್ನು ಪ್ರತಿ ವರ್ಷವು ಮಾಡುವುದಿಲ್ಲವಾದರೆ ಈ ವಿಧವಾಗಿರತಕ್ಕ ಎಕ್ಸಾಂಷನ್ ಮಾಡುವುದು ಏನಿಟ್ಟಿದ್ದೀರಿ ಇದು ಅನುಪಯುಕ್ತವಾಗುತ್ತದೆ. ಅರ್ಥರಹಿತವಾಗುತ್ತದೆ. ಇದು ಕೊಟ್ಟಿರುವುದು ಅಶಕ್ತತೆಯಿಂದ ದೌರ್ಬಲ್ಯದಿಂದ, ವಿಶೇಷ ಪರಿಸ್ಥಿತಿಯಿಂದ ಈ ಸಾಮಾನ್ಯ ವರ್ಗ ಏನಿದೆ, ಈ ಸಹಾಯ ಅಪೇಕ್ಷ ಮಾಡುವವರು ಯಾರಿದ್ದಾರೆ ತಾವೇ ಸ್ವಂತವಾಗಿ ಸಾಗುವಳಿಯನ್ನು ಮಾಡುವುದಕ್ಕೆ ಯೋಗ್ಯತೆ ಇಲ್ಲದೇ ಇರತಕ್ಕವರು ಯಾರಿದ್ದಾರೆ ಅವರನ್ನೆಲ್ಲಾ ನಿಜವಾಗಿಯೂ ಇದು ನಿರ್ಮೂಲ ಮಾಡುವುದು ಆಗುತ್ತದೆ. ಎರಡು ಕನ್‌ಸಿಕ್ಯುಟೀವ್ ಇಯರ್ಸ್ ಅಂತ ಮಾಡಿರುವುದರಿಂದ ಅವರು ಜೀವನ ಮಾಡುವುದಕ್ಕೆ ಪ್ರತಿ ವರ್ಷದಲ್ಲೂ ಬೆಳೆಯಲ್ಲಿ ಕೊಡಬೇಕಾದ ಭಾಗವನ್ನು ಸಲ್ಲಿಸುವುದು ಒಂದು. ಎರಡನೆಯದು ಈ ಚಿಕ್ಕ ಗುಂಪಿನ ಭೂಮಾಲೀಕರ ಮತ್ತು ರೈತರ ಸಾಮರಸ್ಯವನ್ನು ಉಳೀಕೊಂಡು ಬರುವುದಕ್ಕೆ ಎರಡು ವರ್ಷ ಎನ್ನುವುದನ್ನು ಒಂದು ವರ್ಷಕ್ಕೆ ಇಳಿಸಬೇಕು. ಈಗ ಮದುವೆಯಾಗದ ಹೆಂಗಸರು ಮತ್ತು ಮೈನರ್ಸ್, ಆರ್ ಮೋರ್ಸ್ಸ್‌ನಲ್ಲಿರುವವರು ಪ್ರತಿ ವರ್ಷ ಕೋರ್ಟಿಗೆ ಹತ್ತಿ ದಾವ ಅರ್ಜಿ ದಾಖಲು ಮಾಡಿ ನೋಟೀಸ್ ಕೊಟ್ಟು ಜೀವನ ಮಾಡಬೇಕು. ರಕ್ತಶೋಷಣೆ ಮಾಡುತ್ತೇವೆ ಎಂದು ಹೇಳುತ್ತಾರೆ. ರಕ್ತಶೋಷಣೆ ಆಗುವುದು ರೈತನಿಗೆ ಅಲ್ಲ ಇಲ್ಲಿ ಎಕ್ಸಂಷನ್ ಕೊಟ್ಟಿರುವವರಿಗೆ ಆಗುತ್ತದೆ. ಆದ್ದರಿಂದ ಎಕ್ಸಂಷನ್ ಯಾವ ಅಭಿಮಾನದಿಂದ, ವಿಶ್ವಾಸದಿಂದ ಔದಾರ್ಯದಿಂದ ಕೊಟ್ಟಿದ್ದೀರೋ ಅದು ಅರ್ಥವಿಲ್ಲದ ಹಾಗಾಗುತ್ತದೆ. ಅದು ಒಂದು. ಎರಡನೆಯದು ರೈತ ಮತ್ತು ಈ ಚಿಕ್ಕಗುಂಪು ಕೆಲವು ಕಾಲ ಈ ಭೂಮಿಯನ್ನು ರೈತನ ಮೂಲಕ ಸಾಗುವಳಿ ಮಾಡಿಸಬಹುದಾದ ಜನ ಇಬ್ಬರ ನಡುವೆ ಬೇಕಾದಷ್ಟು ವಿರಸ, ದುಃಖವುಂಟಾಗುತ್ತದೆ. ಮೂರನೆಯದಾಗಿ ನಮ್ಮಲ್ಲಿ ಅಡಗಿರತಕ್ಕ ಮೂಲಭೂತವಾದ ತಪ್ಪು ಏನೆಂದರೆ ಈಗಿರತಕ್ಕ ಮನಃ ಕಷಾಯ ಹೊರಟು ಹೋಗಬೇಕು. ಮನಸ್ಸಿನ ಸಾಮರಸ್ಯ ಉಂಟಾಗಬೇಕು ಎಂದು ಏನಿದೆಯೋ ಅದನ್ನು ಹೋಗಲಾಡಿಸಲು ಸಹಕಾರಿಯಾಗದೇ ಪುನಃ ಬೇರೆ ವಿಧದಲ್ಲಿ ಸೃಷ್ಟಿ ಮಾಡಿದ ಹಾಗಾಗುತ್ತದೆ. ಇದನ್ನು ತಪ್ಪಿಸುವುದು ಬಹಳ ಯೋಗ್ಯ, ಉಚಿತ, ರೆವಿನ್ಯೂ ಮಿನಿಷ್ಟರಿಗೆ ಇದುವರೆಗಾಗಲೇ ಗೊತ್ತಾಗಿದೆ. ಇನಾಂ ರದ್ದಿಯಾತಿ ಕಾನೂನು ಆಯಿತು. ಎಷ್ಟೋ ಜನ ಇನಾಂದಾರರು 1/4 ಭಾಗವೋ 1/6 ಭಾಗವೋ ಎಷ್ಟು ಕೊಡುತ್ತೀರೋ ಅಷ್ಟೆ ಕೊಡಿ ಸಾಕು ಎನ್ನುತ್ತಿದ್ದಾರೆ. ಅದೂ ಕೊಡುವುದಕ್ಕೆ ಸಾಧ್ಯವಾಗಿಲ್ಲ. ಅನೇಕ ಸಂಸಾರಗಳು ನಿರ್ಗತಿಕವಾಗಿ ನಿಂತಿವೆ. ಅದೇ ಪರಿಸ್ಥಿತಿ ಈಗ ಇಲ್ಲಿ ನಿರ್ಗತಿಕರಾಗತಕ್ಕ ಈ 6 ಗುಂಪಿಗೆ ಬರುತ್ತದೆ. ವರ್ಷಂಪ್ರತಿ ಎಂದು ಮಾಡುವುದರಿಂದ ಬಹಳ ಯೋಗ್ಯವಾಗುತ್ತದೆ. ಬಹಳ ಸಾಮರಸ್ಯ ಬರುತ್ತದೆ. ಜನ ದಾವ ಹಾಕುವುದು, ಕೋರ್ಟುಗಳಿಗೆ ಹೋಗುವುದನ್ನು ತಪ್ಪಿಸಿದ ಹಾಗಾಗುತ್ತದೆ. ಒಂದೇ ಹಳ್ಳಿಯಲ್ಲಿರತಕ್ಕ ಜನ ಪ್ರತಿ ದಿವಸ ಸೇರಿ ಬೆಳೆ

ಬೆಳೆದು ತಂದು ಹಾಕಿ ತಿನ್ನತಕ್ಕ ಪ್ರಕರಣ ಇದೆ. ಇಂಥಾದ್ದರಲ್ಲಿ ವಿರಸವಾಗಬಾರದು. ಇದು ಧರ್ಮಕ್ಕೆ ವಿರೋಧ ಕಾನೂನಿಗೆ ವಿರೋಧವಾಗುತ್ತದೆ ಎಂದು ಹೇಳಿ ಇದರ ಹಿಂದೆ ಇರತಕ್ಕ ತತ್ವವನ್ನು ರೆವಿನ್ಯೂ ಸಚಿವರು ಮನಗಾಣುತ್ತಾರೆ, ಒಪ್ಪಿಕೊಳ್ಳುತ್ತಾರೆ ಎಂಬ ನಂಬಿಕೆಯಿಂದ ಇದನ್ನು ಸಮರ್ಥನೆ ಮಾಡುತ್ತೇನೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಸ್ವಾಮಿ ಇದರಲ್ಲಿ ಅರ್ಥ ಇಷ್ಟೆ. ಸೆಕ್ಷನ್ (33)ರಲ್ಲಿ "In the absence of an express intimation in writing to the contrary by tenant, every payment made by a tenant to the landlord shall be presumed to be a payment on account of rent due by tenant for the year in which the payment is made". ಎಂದು ಇದೆ. ಇದರಲ್ಲಿ ಎರಡು ವರ್ಷ ಮೂರು ವರ್ಷ 5ನೇ ಸೆಕ್ಷನ್‌ನಲ್ಲಿ ಕಂಡುಬರತಕ್ಕ ಜನಗಳಿಗೆ ಕೊಡದೆ ಹೋದ ಪಕ್ಷದಲ್ಲಿ ಅವನು ಕೊಡತಕ್ಕಂಥ ರೆಂಟನ್ನು ಹಿಂದಿನ ವರ್ಷಕ್ಕೆ ವಜಾ ಹಾಕತಕ್ಕದ್ದು ನ್ಯಾಯವಾಗಿರುತ್ತದೆ. ಅದನ್ನು ಬಿಟ್ಟು ಅವನು ರೆಂಟ್ ಕೊಡತಕ್ಕ ವರ್ಷಕ್ಕೆ ವಜಾ ಹಾಕಿದ ಪಕ್ಷದಲ್ಲಿ ಹಿಂದೆ ಕೊಡ ಬೇಕಾಗಿರತಕ್ಕ ರೆಂಟು ಏನಿದೆ ಅದು ಭೂಮಾಲಿಕನಿಗೆ ಸಂದಾಯವಾಗತಕ್ಕ ಸಂಭವ ಬರುವುದಿಲ್ಲ. ಎರಡು ವರ್ಷ ರೆಂಟು ಕೊಟ್ಟಿರುವುದಿಲ್ಲ. ಎರಡು ವರ್ಷ ಆದ ಮೇಲೆ ಕೊಂಚ ರೆಂಟ್ ಹೊಡುತ್ತಾನೆ. ಮೂರನೇ ವರ್ಷ ರೆಂಟ್ ಕೊಟ್ಟಾಗ ಹಿಂದಿನ ರೆಂಟಿಗೆ ಉತ್ತಾರ ಹಾಕದೆ ಹೋದ ಪಕ್ಷದಲ್ಲಿ ಅವನಿಗೆ ತೊಂದರೆಯಾಗುತ್ತದೆ. ಜೊತೆಗೆ ಹಿಂದಿನ ರೆಂಟ್ ಬಾರದೆ ಇರುವ ಹಾಗೆ ಆಗುತ್ತದೆ. ಅದನ್ನು ನಿವಾರಣೆ ಮಾಡುವುದಕ್ಕೆ sub-class (1) ತೆಗೆದುಹಾಕಬೇಕೆಂದು ಹೇಳುತ್ತೇನೆ. ಯಾವಾಗ ರೆಂಟ್ ರಿಸೀವ್ ಮಾಡುತ್ತಾರೆಯೋ ಆಗ ರೈಟಿಂಗ್‌ನಲ್ಲಿ ಅವನಿಗೆ ರಸೀತಿ ಕೊಡಬೇಕಾದ್ದು ಯೋಗ್ಯ ಎಂದು ಹೇಳುತ್ತೇನೆ.

ಹೀಗೆ ಒಂದು ಸರ್ಕಾರ ರೈತನನ್ನು ಉದ್ಧಾರ ಮಾಡಬೇಕೆಂದು ತೀರ್ಮಾನ ಮಾಡುತ್ತದೆಯೋ ಹಾಗೆಯೇ ಆ ರಾಜ್ಯದ ಇತರ ಪ್ರಜೆಗಳ ಹಕ್ಕು ಬಾಧ್ಯತೆ ಮತ್ತು ಜೀವನ ಮಾರ್ಗ ಇದನ್ನು ಸುರಕ್ಷಿತವಾಗಿ ಇಟ್ಟು ಕಾಪಾಡುವುದು ಅತ್ಯಗತ್ಯ. ಪೊಲೀಸ್ ರಾಜ್ಯದಲ್ಲಿಯೂ ಕೂಡ person and property ಇವುಗಳನ್ನು ರಕ್ಷಿಸಿ ಉಳಿಸುವುದಕ್ಕಾಗಿ ಕೆಲಸ ಮಾಡುತ್ತಾರೆ. ಹೀಗಿರುವಾಗ ಕ್ಷೇಮ ರಾಜ್ಯದಲ್ಲಿ ಇದನ್ನು ಎಷ್ಟು ಮಟ್ಟಿಗೆ ಮಾಡಬೇಕೆಂಬುದನ್ನು ಮಾನ್ಯ ರೆವಿನ್ಯೂ ಸಚಿವರು ಅರಿಯಬೇಕು. ಇದು ಸಣ್ಣ ಪುಟ್ಟ ಜಮೀನ್‌ದಾರರು, ಅವಿವಾಹಿತ ಹೆಣ್ಣು ಮಕ್ಕಳು, ವಿಧವೆಯರು, ಶಾರೀರಕ ಮತ್ತು ಮಾನಸಿಕ ದೌರ್ಬಲ್ಯವುಳ್ಳವರೂ ಆದ ಜನ ತಾವೇ ಬೇಸಾಯ ಮಾಡುವುದಕ್ಕಾಗದೇಯಿರುವ ಜನರಿಗೆ ಅನ್ವಯವಾಗುವುದು, ಇವರಿಗೆ ಬರಬೇಕಾದ ಬೆಳೆಯ ಭಾಗವನ್ನು ಸರಿಯಾದ ಕಾಲದಲ್ಲಿ ಬಾರದೆಯಿರುವುದಲ್ಲದೆ ಹಿಂದಿನ ಬಾಕಿಯಿದ್ದರೂ ಅವನ್ನು ಗಮನಿಸದೆ ಯಾವ ವರ್ಷ ಕೊಟ್ಟರೆ ಆ ವರ್ಷಕ್ಕೆ ಉತ್ತಾರ ಹಾಕುವುದೆಂದರೇ ಈ ಜನ ದುಃಖದಿಂದ ನಿಟ್ಟುಸಿರು ಬಿಡುತ್ತಾರೆ. ಸಂಕಟ ಪಡುತ್ತಾರೆ, ಇದು ಒಳ್ಳೆಯದಲ್ಲ. ಮಾನ್ಯ ಸಚಿವರು ಇದನ್ನು ಮನಗಾಣಬೇಕು. ಯಾವ ವರ್ಷ ಗೇಣೀದಾರ ಕೊಟ್ಟರೂ ಭೂಮಾಲೀಕನಿಗೆ ಸಂದಾಯವಾಗಬೇಕಾದ, ಬಾಕಿಯಿರುವ ಗೇಣಿಗೆ ಅದನ್ನು ಉತ್ತಾರ

ಹಾಕಬೇಕು. ಕಾನೂನಿನ ಪ್ರಕಾರ ಪ್ರಜೆಗೆ ಏನು ಹಕ್ಕು ಬಾಧ್ಯತೆಗಳಿರುತ್ತವೆಯೋ ಅದನ್ನು ಮೊಟಕು ಮಾಡುವುದಕ್ಕೆ ಅಥವಾ ಅದನ್ನು ಉಪಯೋಗಿಸಲು ತಡೆಹಾಕುವುದಕ್ಕೆ ಪ್ರಯತ್ನ ಮಾಡಬಾರದು.

"When any rent is received in respect or any land by a landlord or by a person on behalf of such landlord the landlord or, as the case may be such person shall at the time when such rent is received by him give a written receipt therefore in such form and in such manner as may be prescribed. ಎಂದಿದೆ. ರೈತರು ಅನಕ್ಷರಸ್ಥರಾಗಿರುತ್ತಾರೆ ಬಲವಿಲ್ಲದವರು ಎಂದು ಹೀಗೆ ಮಾಡಿದ್ದಾರೆ. ಹೀಗೆಯೇ ಈ ನಾಲ್ಕೈದು ವರ್ಗಗಳ ಜನರು, ಎಂದರೆ, ಅವಿವಾಹಿತ ಹೆಣ್ಣು ಮಕ್ಕಳು, ಹುಚ್ಚರು, ವಿಧವೆಯರೂ ಅಬಲರು, ಅವರಿಗೆ ಸಲ್ಲಬೇಕಾದ ಗೇಣಿಯನ್ನು ಸಲ್ಲುವಂತೆ ಮಾಡುವುದು ನ್ಯಾಯ. ಇವರಿಗೆ ಬರಬೇಕಾದ ಗೇಣಿ ಪೂರ್ತಿಯಾಗಿ ಸಂದಾಯ ಮಾಡುವುದಕ್ಕೆ ಅವಕಾಶ ಮಾಡಿ ಕಾನೂನು ಮಾಡಬೇಕಾದುದು ಯೋಗ್ಯ.

## 3. 1961ರ ಸೀಲಿಂಗ್ ಆನ್‌ಲ್ಯಾಂಡ್ ಕುರಿತಂತೆ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ) :-**

ಸ್ವಾಮಿ, ಇದು ಬಹಳ ಸುಲಭವಾದದ್ದು. 63ನೇ ಕ್ಲಾಸ್ "Ceiling on land" ಎನ್ನತಕ್ಕ ಕ್ಲಾಸ್. ಸೀಲಿಂಗ್ ಆನ್ ಲ್ಯಾಂಡ್ 27 ಸ್ಟಾಂಡರ್ಡ್ ಎಕರೆಯನ್ನು ಒಬ್ಬೊಬ್ಬ ಉಳಿಸಿಕೊಳ್ಳುವುದಕ್ಕೆ ಅವಕಾಶವಿದೆ. 27 ಎಕರೆಯನ್ನು ಉಳಿಸಿಕೊಳ್ಳುವುದು ಇದೆಯಲ್ಲಾ ಅದು ಲ್ಯಾಂಡ್‌ಲಾರ್ಡಿಗೂ ಅನ್ವಯವಾಗುತ್ತದೆ. ಟೆನೆಂಟಿಗೂ ಅನ್ವಯವಾಗುತ್ತದೆ. ಲ್ಯಾಂಡ್ ಲಾರ್ಡಿಗೂ ಟೆನೆಂಟಿಗೂ ಅನ್ವಯವಾಗತಕ್ಕ 27 ಎಕರೆ ಜಮೀನನ್ನು ಉಳಿಸಿಕೊಳ್ಳುವುದಕ್ಕೆ, ಮಾರ್ಟಿಗೇಜ್ ಮಾಡಿರುವ ಪ್ರಾಪಟ್ಟಿಯೂ ಸಹ ಸೇರಿದ ಪಕ್ಷದಲ್ಲಿ ಆಗ ನಿಜವಾಗಿ 27 ಎಕರೆ ಬರಲಿಲ್ಲ. ನಿಮ್ಮ ಉದ್ದೇಶ ಏನಿದೆ? ಯಾವುದಾದರೂ "No person either by himself or if he has a family, or is a member of a joint family, together with any other member of this family or of the joint family, as the case may be shall, whether as a land owner, land lord or tenant or as a mortgages with possession or otherwise or partly in one capacity and partly in another, hold land in excess of the ceiling area. ಎಂದು ಇದೆ. ಇದರಲ್ಲಿ ಹಾಕಿರತಕ್ಕ ನಿರ್ಬಂಧಗಳು 3-4 ಇದೆ. ಸೀಲಿಂಗ್ ಅನ್ವಯವಾಗುವುದು ಲ್ಯಾಂಡ್ ಲಾರ್ಡ್ ಮತ್ತು ಟೆನೆಂಟ್ ಇವರಿಬ್ಬರಿಗೂ ಅನ್ವಯವಾಗುತ್ತದೆ. ಎರಡನೆಯದು mortage with possession or otherwise ಎರಡೂ ಕಟ್ ಮಾಡಿದೆ. 27 standard acre ಯಾರಿಗಾದರೂ ಒಬ್ಬರಿಗೆ ಬಿಡುತ್ತೇವೆ ಎಂದು ಹೇಳಿದ ಪಕ್ಷದಲ್ಲಿ ಆ ಭೂಮಿಯಲ್ಲಾ ಮಾರ್ಟ್‌ಗೇಜ್ ಮಾಡಿಕೊಂಡಿರತಕ್ಕ ಭೂಮಿಗೆ ಸೇರಿದ್ದು. ಅದನ್ನು ಬಿಡಿಸಿಕೊಳ್ಳುವುದಕ್ಕೆ

---

3. ಸೀಲಿಂಗ್ ಆನ್‌ಲ್ಯಾಂಡ್ ಕುರಿತಂತೆ 15.11.1961 ರಂದು ನಡೆದ ಚರ್ಚೆಯಲ್ಲಿ

ಅವಕಾಶವಿದೆ. ಅದನ್ನು ಬಿಡಿಸಿಕೊಂಡಾಗ 27 ಎಕರೆ ಸಿಕ್ಕುವುದಿಲ್ಲ. ಈ ಒಂದು ಸೆಕ್ಷನ್‌ನಿಂದ ಇದೇ ಮಸೂದೆಯೇ ಅವಲಕ್ಷಣಗಳಿಂದ ಕೂಡಿದೆ. ಅನ್ನ ಚಂದಿದೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿಯುವುದಕ್ಕೆ ಒಂದು ಅಗಳು ಅನ್ನವನ್ನು ನೋಡುತ್ತಾರೆ. ಆಗ ಅದು ಹಳೆ ಅಕ್ಕಿಯೇ ಅಥವಾ ಹೊಸಕ್ಕಿಯೇ ಎಂಬುದು ಗೊತ್ತಾಗುತ್ತದೆ. ಈ ಮಸೂದೆ ಹೇಗಿದೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಈ ಒಂದೇ ಒಂದು ಸೆಕ್ಷನ್ ಸಾಕು. ಇದು ಅಷ್ಟು ವಿಚಿತ್ರವಾಗಿದೆ. ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಇದನ್ನು ಸ್ವಲ್ಪ ಆಲೋಚನೆ ಮಾಡಬೇಕು. ಇದಕ್ಕೆ ನ್ಯಾಸ ಎಂದು ಹೇಳುತ್ತಾರೆ. ಭೂಮಿಯನ್ನು ಅನುಭವ ಸಹಿತ ಆಧಾರ ಮಾಡಿರುತ್ತಾರೆ. ಸೆಕ್ಯೂರಿಟಿಗೋಸ್ಕರ ಇಟ್ಟುಕೊಂಡಿದ್ದೇನೆ. ಒತ್ತೆ ಇಟ್ಟಹಾಗೆ ಆಗುತ್ತದೆ. ನ್ಯಾಸ ಯಾವುದು ಎಂದರೆ ಹಣಕ್ಕೋಸ್ಕರ ಕೊಟ್ಟಿರತಕ್ಕ ಕನ್‌ಸಿಡರೇಷನ್, ಪ್ರತ್ಯಾಮ್ಲಾಯವಾಗಿ, ನಿಧಿ ಇಟ್ಟ ಹಾಗೆ ಇಡುತ್ತಾರೆ. ಬಾಂಡ್ ಒತ್ತೆ ಇಡುತ್ತಾರೆ. ಒಡವೆ, ಸಾಮಾನು, ಜಮೀನು ಇವು ಯಾವುದಾದರೂ ಇಡಬಹುದು. ಇದನ್ನು ಧರ್ಮಶಾಸ್ತ್ರದ ಪ್ರಕಾರ ನ್ಯಾಸ ಎಂದು ಕರೆಯುತ್ತಾರೆ. ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಮನೆಯಲ್ಲಿ ಹುಟ್ಟಿದ ಹೆಣ್ಣು ಮಗಳನ್ನು ನ್ಯಾಸ ಎಂದು ಬರೆಸಿಕೊಂಡಿರುತ್ತಾರೆ. ಇನ್ನೊಬ್ಬರ ಸ್ವತ್ತನ್ನು ಸಂರಕ್ಷಣೆ ಮಾಡಿ ಹಿಂದಿರುಗಿ ಕೊಡಬೇಕಾದದ್ದು ನಮ್ಮ ಧರ್ಮ. ಯಾರು ಯಾರು ಜಮೀನನ್ನು ಭೋಗ್ಯ ಮಾಡಿಸಿಕೊಂಡಿರುತ್ತಾರೋ ಅವರು ಆ ಸ್ವತ್ತನ್ನು ಹಿಂದಕ್ಕೆ ಕೊಡಬೇಕು. ಅದು ಧರ್ಮ ಇದೆ. ಅದು ನ್ಯಾಯವಾದದ್ದು. ಆಧಾರ ಮತ್ತು ಭೋಗ್ಯ ವಸ್ತುಗಳು ಭೂಮಿ. ಅದು ಅವನ ಆಸ್ತಿಗೆ ಸಂಬಂಧಪಟ್ಟದ್ದಲ್ಲ. ಅವನ ಪ್ರಾಪರ್ಟಿಗೆ ಸಂಬಂಧ ಪಟ್ಟದಲ್ಲ. ಯಾವುದು ಅವನ ಪ್ರಾಪರ್ಟಿಗೆ ಸಂಬಂಧಪಡುವುದು ಇರುವುದಿಲ್ಲವೋ ಅಂಥಾ ಭೂಮಿಯನ್ನು ತಂದುಹಾಕಿ. ಟೆನೆಂಟಾಗಲೀ ಲ್ಯಾಂಡ್ ಲಾರ್ಡ್ ಆಗಲೀ, ಒಂದು ಕಾಪಾಸಿಟಿಯಾಗಲೀ ಇನ್ನೊಂದು ಕ್ಯಪಾಸಿಟಿಯಾಗಲೀ ಎರಡನ್ನೂ ಸೇರಿಸಿಕೊಂಡು 27 ಎಕರೆಗಳಿಗಿಂತ ಜಾಸ್ತಿ ಇರಕೂಡದು ಎನ್ನುವ ಪಕ್ಷದಲ್ಲಿ ಈಗ ಒಬ್ಬನಿಗೆ 100 ಎಕರೆ ಇದ್ದರೆ, ನಾನ್ ರೆನ್ಯೂಮಬಲ್ ಲ್ಯಾಂಡ್ ಹೋದಾಗ ಮಾರ್ಟಿಗೇಜ್ ಆಗಿರತಕ್ಕದ್ದು, ಆಧಾರ ಮತ್ತು ಭೋಗ್ಯವಾಗಿರತಕ್ಕ ಸ್ವತ್ತುಗಳು ಯಾರು ಜಮೀನನ್ನು ಕೊಟ್ಟಿರುತ್ತಾರೋ ಅವರು ಹಣವನ್ನು ವಾಪಸ್ಸು ಕೊಟ್ಟ ಪಕ್ಷದಲ್ಲಿ ಕಾನೂನು ಪ್ರಕಾರ ಅದು ಅವರಿಗೆ ಹೋದಾಗ ಅವನಿಗೆ ಕಾನೂನು ಕೃಷ್ಟಿಯಿಂದ ಏನೂ ಉಳಿಯುವುದಿಲ್ಲ. ಅಂಥಾ ಜಮೀನನ್ನು ಪರಮಾವಧಿಯಲ್ಲಿ ತಂದು ಹಾಕಿದರೆ ಅವನಿಗೆ 27 ಎಕರೆ ಉಳಿಯುವುದಕ್ಕೆ ಅವಕಾಶವಾಗುತ್ತದೆಯೇ? 27 ಎಕರೆಯನ್ನು ಉಳಿಸಬೇಕೆಂಬುದು ಮಂತ್ರಿಗಳ ಉದ್ದೇಶವಾಗಿವಾಗಿದ್ದಲ್ಲಿ, 27 ಸ್ಟ್ಯಾಂಡರ್ಡ್ ಎಕರೆಗಳನ್ನು ಅವನ ಉಳಿವಿಗಾಗಿ ಬಿಡುತ್ತೇವೆ ಎಂದರೆ ಆ ಉದ್ದೇಶ ಇದರಿಂದ ಫಲಿತವಾಗುವುದಿಲ್ಲ. ಇದು ಯಾರದೋ ಸ್ವತ್ತನ್ನು ಯಾರಿಗೋ ದಾನ ಮಾಡಿದ ಹಾಗಾಗುತ್ತದೆ. ಶಾಸ್ತ್ರೀಯ ಸ್ವತ್ತನ್ನು ವೆಂಕಟಪ್ಪನವರಿಗೆ, ವೆಂಕಟಪ್ಪನವರ ಸ್ವತ್ತನ್ನು ಮಂಜಪ್ಪನವರಿಗೆ ದಾನ ಮಾಡಿದ ಹಾಗಾಗುತ್ತದೆ. ಈ ಕಾನೂನಿನ ಮೂಲಕ confiscate ಮಾಡಿದಂತಾಗುತ್ತದೆ.

ಮಂತ್ರಿಗಳು ಸ್ವಲ್ಪ ಮನಸಿಟ್ಟು, ಕಿವಿಗೊಟ್ಟು ಕೇಳಿದರೆ ಗೊತ್ತಾಗುತ್ತದೆ. ಹೇಳುತ್ತೇನೆ. ಯಾರು ಆಧಾರ ಮಾಡಿರುತ್ತಾರೋ ಅವರು ಆ ಸ್ವತ್ತನ್ನು ಆಧಾರದಿಂದ ಬಿಡುಗಡೆ ಮಾಡಿಸಿ ಕೊಳ್ಳುವುದಕ್ಕೆ ಅವಕಾಶವಿರುತ್ತದೆ. ಹಾಗೆ ಬಿಡುಗಡೆಯಾದರೆ ಆ ಜಮೀನು ಎಲ್ಲಿರುತ್ತದೆ. ಅವನಿಗೆಲ್ಲ ಉಳಿಯುತ್ತದೆ? ಆದುದರಿಂದ 27 ಸ್ಟ್ಯಾಂಡರ್ಡ್ ಎಕರೆ ಸೀಲಿಂಗ್ ನಷ್ಟು ಅವನಿಗಿರುವುದಿಲ್ಲ. ಆಗ ಇದು discriminatory ಆಗುತ್ತದೆ. ಹೀಗಾದರೆ, ಇದರಿಂದ ನೂರಾರು ಫಲಗಳಿವೆ. ಯಾವುದು ನಿಜವಾಗಿ ಅವನ ಸ್ವತ್ತಲ್ಲವೋ ಅದನ್ನು ಸೀಲಿಂಗ್‌ನಲ್ಲಿ ಸೇರಿಸಿದರೆ ಹೇಗೇ? ಯಾರು ಆಧಾರ ಭೋಗ್ಯ ಮಾಡಿರುತ್ತಾರೋ ಅವರಿಗೆ ವಾಪಸು ಹೋಗುತ್ತದೆ. ಯಾರು ಒತ್ತೆ ಇಟ್ಟುಕೊಂಡು ರಕ್ಷಣೆ ಮಾಡುತ್ತಿರುತ್ತಾನೋ ಅವನಿಗೆ ಸೇರುವುದಿಲ್ಲ.

It should revert back. It will revert back to the man who has mortagages the land.

ಪರಮಾವಧಿ 27 ಎಕರೆ ಲೆಕ್ಕ ಹಾಕುವಾಗ ಅದನ್ನೂ ಸೇರಿಸಿ ಲೆಕ್ಕ ಹಾಕಿದ್ದರೆ, ಆ ಭೂಮಿ mortigagor ಗೆ ಹೋದಮೇಲೆ ಇವನಿಗೆ 27 ಎಕರೆ ಎಲ್ಲಿ ಉಳಿಯುತ್ತದೆ? ಆಧಾರ, ಭೋಗ್ಯ ಮಾಡಿಕೊಂಡಿರುವ ಜಮೀನನ್ನು ಅವರು ಹಣ ಕೊಟ್ಟು ಬಿಡಿಸಿಕೊಂಡರೆ ಇವನಿಗೆ ಉಳಿಯುವುದೇನು? ಆ ಜಮೀನು ಇವನಲ್ಲಿ ನ್ಯಾಸ ಮಾತ್ರವಾಗಿರುತ್ತದೆ. ಹೀಗಿರುವಾಗ ಈ 27 ಎಕರೆ ಎನ್ನುವುದು ಅನ್ವಯವಾಗುವುದಿಲ್ಲವೇ? ಇದು ಅರ್ಥವಾಗುತ್ತದೆಯೇ? ಒಂದು ಕಾನೂನು ಮಾಡಿದರೆ ಅದು ಬಹಳ ಕಾಲ ಇರಬೇಕು. ಅರ್ಥವತ್ತಾಗಿರಬೇಕು. ಹೀಗಾಗಬೇಕಾದರೆ, ಇದರಲ್ಲಿರುವ 'mortigage with possession or otherwise' ಎನ್ನುವುದನ್ನು ತೆಗೆದುಹಾಕಬೇಕು. 27 ಎಕರೆ ಇರಬಹುದೆಂದು ಒಪ್ಪಿದ ಮೇಲೆ ಭೋಗ್ಯ ಆಧಾರದ ಜಮೀನನ್ನೂ ಇದರಲ್ಲಿ ಸೇರಿಸಿದರೆ ಅಷ್ಟೂ ಉಳಿಯುವುದಿಲ್ಲ. ಆದಕಾರಣ ಈ ತಿದ್ದುಪಡಿಯನ್ನು ಸೂಚಿಸಲಾಗಿದೆ ಇದಕ್ಕೆ ಮನಸ್ಸು ಕೊಟ್ಟರೆ ಅರ್ಥವಾಗುತ್ತದೆ. ಈಗಿರುವಂತೆ ಇದು ಧರ್ಮವಿರುದ್ಧವಾಗಿದೆ, ಕಾನೂನು ವಿರುದ್ಧವಾಗಿದೆ. ಇದರ ಅರ್ಥ ಗೊತ್ತಾದರೆ ತಿದ್ದುಪಡಿಯನ್ನು ಒಪ್ಪುತ್ತಾರೆಂದು ನಂಬಿದ್ದೇನೆ.

## 4. ರೈತ ತನ್ನ ಜಮೀನನ್ನು ಮಾರಾಟ ಮಾಡಲು ಅಥವಾ ಆಧಾರ ಮಾಡಲು ಅವಕಾಶ ಕಲ್ಪಿಸುವ ಕುರಿತು

ಶ್ರೀ ಎಂ.ಪಿ.ಎಲ್. ಶಾಸ್ತ್ರಿ:-

ಸ್ವಾಮಿ, ಶ್ರೀಮಾನ್ ವೆಂಕಟಪ್ಪನವರು ತಮ್ಮ ತಿದ್ದುಪಡಿಯ ಉದ್ದೇಶವನ್ನು ವಿವರವಾಗಿ ಪ್ರಸ್ತಾಪ ಮಾಡಿದ್ದಾರೆ. ಈ ತಿದ್ದುಪಡಿಯನ್ನು ಒಪ್ಪಿಕೊಳ್ಳಬೇಕೆಂದು ನಾವು ಕೇಳುತ್ತಿರುವುದು ಹಳ್ಳಿಯ ಜನರ ಸೌಕರ್ಯಕ್ಕಾಗಿ ಈ ಭೂಸುಧಾರಣೆಯಿಂದ ಗ್ರಾಮಾಂತರ ಪ್ರದೇಶಗಳಲ್ಲಿರುವ ಜನರ ಸ್ಥಿತಿಯನ್ನು

4. ರೈತ ತನ್ನ ಜಮೀನನ್ನು ಮಾರಾಟ ಮಾಡಲು ಅಥವಾ ಆಧಾರ ಮಾಡಲು ಅವಕಾಶ ಕಲ್ಪಿಸುವ ಕುರಿತು 16.11.1961 ರಂದು ನಡೆದ ಚರ್ಚೆಯಲ್ಲಿ

ಉತ್ತಮಗೊಳಿಸಬೇಕೆಂದು ಪ್ರಯತ್ನ ಮಾಡಿರುವಂತೆ ಅವರ ಒಳಿತನ್ನು ಸಾಧಿಸುವುದಕ್ಕಾಗಿ ಈ ತಿದ್ದುಪಡಿಯನ್ನು ತರಲಾಗಿದೆ; ಇದು ಅವಶ್ಯಕ ಎಂದು ಸಭೆಗೆ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. ಈಗ ಸರ್ಕಾರಕ್ಕೆ ಮತ್ತು ಕೋ ಆಪರೇಟಿವ್ ಸೊಸೈಟಿಗೆ ಜಮೀನನ್ನು ಮಾರಬಹುದು, ದಾನ ಮಾಡಬಹುದು, ಎಕ್ಸ್‌ಚೇಂಜ್ ಮಾಡಬಹುದು, ದೊಡ್ಡ ದೊಡ್ಡ ಪ್ಲಾಂಟೇಷನ್ನನ್ನೂ ಮಾರಾಟ ಮಾಡಬಹುದು, ದಾನ ಮಾಡಬಹುದು ವಿನಿಮಯ ಮಾಡಿಕೊಳ್ಳಬಹುದು. ನಾವು ತಂದಿರುವ ತಿದ್ದುಪಡಿಯಲ್ಲಿ ಸೂಚಿಸಿರುವುದು ಒಂದು ಕುಟುಂಬ ನಿರ್ವಹಣೆಗಾಗಿ, ಸಂಸಾರದ ಅವಶ್ಯಕತೆಗಳಿಗಾಗಿ ಒಬ್ಬ ತನ್ನ ಜಮೀನನ್ನು ಮಾರಾಟ ಮಾಡಲು ಅಥವಾ ಆಧಾರ ಮಾಡಲು ಅವಕಾಶ ಕಲ್ಪಿಸಿಕೊಡಬೇಕು ಎಂದು.

ಎರಡನೆಯದು ಇದರ ಉದ್ದೇಶವನ್ನಾದರೂ ತಾವು ಗಮನಿಸಬೇಕಾದುದು ಅಗತ್ಯ. ಈ ಕ್ಲೋಸ್ಡ್ ಮೈಂಡ್ ಮಂಜಪ್ಪನವರಿಗೆ ಇರಬಾರದು. ಈಗ ಸಾಮಾನ್ಯವಾಗಿ ಹಳ್ಳಿಗಾಡಿನ ಜನರ ಸ್ಥಿತಿಯನ್ನು ಉತ್ತಮಗೊಳಿಸಬೇಕೆಂಬ ಉದ್ದೇಶ ಯೋಗ್ಯವಾದುದು. ಅವರೂ ಹಳ್ಳಿಗಾಡಿನವರೂ ಎಂಬುದು ಒಪ್ಪಬೇಕಾದ ಮಾತು. ಆದರೆ ಹಳ್ಳಿಗಾಡಿನ ಜನರ ನಿಜವಾದ ಸ್ಥಿತಿ ಏನು ಎನ್ನುವುದಾದರೂ ತಾವು ಸ್ವಲ್ಪ ನೋಡಬೇಕು ಈ ಹೊತ್ತು ಗ್ರಾಮಾಂತರ ಪ್ರದೇಶದೊಳಗೆ ಇಡೀ ಸಮಾಜದ ಪರಿಸ್ಥಿತಿ ಹೇಗಿದೆಯೆಂದರೆ ಈರ್ಷೆ, ಅಸೂಯೆ, ದ್ವೇಷ, ಬಿಟರ್‌ನೆಸ್, ಎಂದು ಏನು ಹೇಳುತ್ತೇವೆಯೋ ಅದರಿಂದ ಕೂಡಿದೆ. ಭೂಸುಧಾರಣೆ ಆದ ಮೇಲಂತು ಸಮಾಜದಲ್ಲಿ ಒಬ್ಬರಿಗೆ ಇನ್ನೊಬ್ಬರ ಸಹಾಯವಾಗುವುದು, ಒಬ್ಬರ ಕಷ್ಟದಲ್ಲಿ ಇನ್ನೊಬ್ಬರು ಭಾಗಿಯಾಗಿ ಸೌಕರ್ಯಗಳನ್ನು ಒದಗಿಸುವುದು ಕಲ್ಪನೆ ಮಾಡತಕ್ಕಂಥ ಕನಸಿನ ಮಾತು. ನಮ್ಮ ಸಮಾಜ ಜೀವನ ಹಿಂದೆ ಇದ್ದ ಹಾಗೆ ಇಲ್ಲ. ಹಿಂದೆ ಮದುವೆ ಮಾಡಬೇಕೆಂದರೆ ದಾನ ಧರ್ಮ ಮಾಡುತ್ತಾ ಇದ್ದರು, ಸಾಲ ಕೊಡುತ್ತಾ ಇದ್ದರು. ಯಾವ ವಿಧವಾದ ಸೆಕ್ಯುರಿಟಿ ತೆಗೆದುಕೊಳ್ಳದೆ, ಮನಿಲೆಂಡರ್ಸ್, ರಕ್ತ ಹೀರುತ್ತಿದ್ದಾರೆಂದು ಹೇಳಿದರು. ಅವರು ಹಾಗಲ್ಲದೆ, ಇಂಡೀಜಿನೆಸ್ ಪೀಪಲ್ ಹಣ ಕೊಟ್ಟು ಲೇವಾದೇವಿ ಮಾಡುತ್ತಾ ಇದ್ದ ಜನ ಇದ್ದರು, ಸಂಸಾರದಲ್ಲಿ ಕುಟುಂಬದಲ್ಲಿ ಮದುವೆ ಮುಂಜಿಗಳಾಗಲಿ, ಸಂಸ್ಕಾರಗಳಾಗಲೀ ಇದ್ದರೆ, ಈ ಸಂಸ್ಕಾರಗಳ ನಿರ್ವಹಣೆಗೋಸ್ಕರ ಜನ ಹಣ ಕೊಡುತ್ತಾ ಇದ್ದರು ಸಾಲ ಕೊಡುತ್ತಾ ಇದ್ದರೂ ಸೆಕ್ಯೂರಿಟಿ ತೆಗೆದುಕೊಳ್ಳುತ್ತಾ ಇರಲಿಲ್ಲ. ಒತ್ತೆ ಇಟ್ಟುಕೊಳ್ಳುತ್ತಾ ಇರಲಿಲ್ಲ. ಈ ಹೊತ್ತು ಆ ಪರಿಸ್ಥಿತಿ ಇರುವುದಿಲ್ಲ ಬೇರೆ ಆಗಿದೆ. ಮಂಜಪ್ಪನವರು ಇದನ್ನು ತಿಳಿದುಕೊಳ್ಳಬೇಕು. ಈಗ 4–8–15 ಎಕರೆ ಜಮೀನು ಇರುತ್ತದೆ, ಜಮೀನು ಇರತಕ್ಕದ್ದು ಒಂದು ಜೀವನ ಸೌಕರ್ಯ ಸಾಧನೆಗೆ ಮಾತ್ರವಲ್ಲ, ಅದು ಒಂದು ಪ್ರಾಪರ್ಟಿ, ಯಾವುದು ಒಂದು ಪ್ರಾಪರ್ಟಿಯಾಗಿರುತ್ತದೆಯೋ ಅದನ್ನು ದಾನ ಮಾಡುವುದಕ್ಕೆ ಅರ್ಹತೆ ಇಲ್ಲ, ಕುಟುಂಬ ನಿರ್ವಹಣೆಗೋಸ್ಕರ, ಹೆಣ್ಣು ಮಕ್ಕಳ ಮದುವೆಗೋಸ್ಕರ ಮಾರಾಟ ಮಾಡುವುದಕ್ಕೆ ನೀವು ಅರ್ಹರಾಗಿರುವುದಿಲ್ಲ ಎಂದರೆ ಇದು ವಿಚಿತ್ರವಾದ ತರ್ಕ, ವಾದವಾಗಿರುತ್ತದೆ, ನಿಜವಾಗಿ ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕಂಥ ಬಡ ಸಂಸಾರಗಳು ಕುಟುಂಬಗಳು ಏನಿವೆ ಅವುಗಳ ಕುಟುಂಬಗಳ ರಕ್ಷಣೆ ಮಾಡುವುದಕ್ಕಾದರೂ ಸಾಧ್ಯವಾಗುತ್ತದೆಯೋ ಎಂದು ಪ್ರಶ್ನೆ ಕೇಳುತ್ತೇನೆ. ವೆಂಕಟಪ್ಪನವರು ಚೆನ್ನಾಗಿ ಹೇಳಿದರು. ನಾವು ಸರ್ವ–ತ್ಯಾಗ ಮಾಡಿ ಮುಂದಿನ ಪೀಳಿಗೆ ಚೆನ್ನಾಗಿರಬೇಕೆಂದು ನಮ್ಮ ಮಕ್ಕಳನ್ನು ಓದಿಸುತ್ತೇವೆ. ಭೂಸುಧಾರಣೆಯಿಂದ ಏನು ಆಗುತ್ತದೆ.

ಯಾರೂ ಈ ಹೊತ್ತು ವ್ಯವಸಾಯವನ್ನು ವೃತ್ತಿಯಾಗಿ ಅವಲಂಬನೆ ಮಾಡಿಕೊಳ್ಳುತ್ತಾರೆ, ಅವರು ಕೂಪದಲ್ಲಿ ಬಿದ್ದು ಅವರು ದಾರಿದ್ರ್ಯದಲ್ಲಿ ಹೂತು, ಒದ್ದಾಡಿ, ಪುನಃ ಮೇಲಕ್ಕೆ ಏಳಬಾರದು ವಂಶ ಪಾರಂಪರ್ಯವಾಗಿ ಏಳಲಿಕ್ಕೆ ಬರಬಾರದು. ಸಾಲ ಹುಟ್ಟುವುದಿಲ್ಲ. ರಿಸರ್ವ್ ಬ್ಯಾಂಕಿನವರು ಲೋನ್ ಕೊಡುವುದಕ್ಕೆ ಅಪ್ಪಣೆ ಕೊಡುತ್ತಾ ಇಲ್ಲ. ಎಲೆಕ್ಷನ್ ಇದೆಯಂತ ಕೊಂಚ ಉದಾರ ಬುದ್ಧಿಯಿಂದ ಕೈ ಚಾಚುತ್ತಾ ಇದ್ದೀರಿ, ಇದು ಆದ ಮೇಲೆ ಯಾವ ಅಗ್ರಿಕಲ್ಚರಿಸ್ಟ್‌ಗೂ ಸಾಲ ಸಿಗುವುದಿಲ್ಲ ಸಾಲ ಸಿಗದೇ ಇರುವಾಗ ಅವನು ಹೇಗೆ ಮಾಡಬೇಕು? ನಮ್ಮ ದೇಶದ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕು. ಪರಂಗಿಯವರು ಚರ್ಚಿನಲ್ಲಿ ರಿಂಗುಗಳನ್ನು ಎಕ್ಸ್‌ಚೇಂಜ್ ಮಾಡಿಕೊಂಡು ಕೈ ಮೇಲೆ ಕೈ ಹಾಕಿಕೊಂಡು ಹೋಗುವವರನ್ನು ಲಕ್ಷದಲ್ಲಿಟ್ಟುಕೊಳ್ಳಬಾರದು. ವಿವಾಹಿತ ಸಂಸಾರಿಕ ಅವನ ಮಗಳನ್ನು ಯೋಗ್ಯವಂತನಿಗೆ ಕೊಟ್ಟು ನ್ಯಾಸ ಇಟ್ಟುಕೊಂಡು ಸ್ವತ್ತು ಮಾಡಿ ಕುಟುಂಬಿಯಾಗಿ ಜೀವನ ನಡೇಕೊಂಡು ವಂಶ ಉದ್ಧಾರ ಮಾಡಬೇಕು. ಬಡತನ ನಮ್ಮ ದೇಶದಲ್ಲಿ ಹಳ್ಳಿಯಲ್ಲಿ 95ಜನರಲ್ಲಿದೆ. ತನ್ನ ಹೆಂಡತಿ ಹೆಂಡತಿಯಾಗಿ ಇರಬೇಕು. ತನ್ನ ಮಗಳು ಅಳಿಯನಿಗೆ ಹೆಂಡತಿಯಾಗಿರಬೇಕು. ವಂಶ ಉದ್ಧಾರ ಮಾಡಿಕೊಂಡು ಕುಲ ಉದ್ಧಾರ ಮಾಡಿಕೊಂಡು ಬಾಳಬೇಕೆಂಬ ಆಸೆ ಇದೆ. ಆ ಆಸೆ ನಮ್ಮಲ್ಲಿ ಪೂರ್ಣವಾಗಿದೆ. ಇಂಥ ಪರಿಸ್ಥಿತಿಯಲ್ಲಿ ಕೇಳಿದ್ದೇನೆ, ನೋಡಿದ್ದೇನೆ. ನಮ್ಮ ದೇಶದಲ್ಲಿ ಹೆಣ್ಣು ಮಕ್ಕಳ ಮದುವೆಯನ್ನು ವಿವಾಹ ಮಾಡದೆ, ಕಷ್ಟಕ್ಕೆ ಸಿಕ್ಕಿ ತಂದೆತಾಯಿಗಳು ಆತ್ಮಹತ್ಯೆ ಪ್ರಯತ್ನಗಳನ್ನು ಮಾಡಿಕೊಂಡಿದ್ದಾರೆ, ನೂರಾರು ಆತ್ಮಹತ್ಯೆಗಳಾಗಿವೆ. ಸಂಸಾರ ಘಾತಕ ಕಾರ್ಯಗಳು ನಡೆದು ಹೋಗಿವೆ. ಹಳ್ಳಿಗಾಡಿನ ಜನರೂ ವಿದ್ಯಾವಂತಾರಾಗಿ, ಮೈಸೂರು ಸಂಸ್ಥಾನದಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ, ಮೈಸೂರು ಯೂನಿವರ್ಸಿಟಿಯಲ್ಲಿ ಓದಿ ಇಂಡಿಯಾದ ಪರಿಕೀಯ ಯೂನಿವರ್ಸಿಟಿಗಳಲ್ಲಿ ಪರದೇಶಗಳಿಗೆ ಹೋಗಿ ಬುದ್ದಿವಂತರಾಗಿ ತಮ್ಮ ರಾಜ್ಯವನ್ನು ಕಟ್ಟತಕ್ಕ ಹುಡುಗರ ಆಸೆ ಆಗಬೇಕೆಂಬುದು ಇದೆ. ನಮ್ಮ ಮಕ್ಕಳು ಮುಂದಕ್ಕೆ ಬರಬೇಕು, ರೆವಿನ್ಯೂ ಮಿನಿಸ್ಟರಿಗೆ ಅವರು ಮಕ್ಕಳೂ ಮುಂದಕ್ಕೆ ಬರಬೇಕೆಂಬ ಆಸೆ ಹೇಗಿದೆಯೋ, ಅದೇ ರೀತಿ ಎಲ್ಲಾ ಬಡ ಕುಟುಂಬಗಳನ್ನು ಅವರ ಮಕ್ಕಳೂ ಮುಂದಕ್ಕೆ ಬರಬೇಕೆಂಬ ಆಸೆ ಇದೆ. ಇದು ತಾಯಿತನದ ಆಸೆ, ಇದು ಪಿತೃತ್ವದ ಆಸೆ. ಜನರಲ್ಲಿ ನೋಬಲ್ ಕ್ವಾಲಿಟಿ ಇದೆ. ಆ ಆಸೆ ಇದೆ. ಈ ಆಸೆ ನಿರ್ವಹಿಸಬೇಕಾದರೆ ಹೇಗೆ ಆಗಬೇಕು? ಎಕ್ಸ್‌ಚೇಂಜ್‌ಮಾಡುವುದಕ್ಕೆ ಕೊಟ್ಟರೆ ಏನಾಗುತ್ತದೆ. 8 ರಷ್ಟು, 6 ರಷ್ಟು, ಎಂದು ಹೇಳುತ್ತೀರಾ. ಹಳ್ಳಿಯಲ್ಲಿ ಶೇಕದಾರ್, ಆಮೇಲ ಅಮಲ್ದಾರ್, ಆಮೇಲೆ ಅಸಿಸ್ಟೆಂಟ್ ಕಮೀಷನರ್ ದಾಟಿಕೊಂಡು ಡೆಪ್ಯುಟಿ ಕಮೀಷನರ್ ಮುಖ ನೋಡುವುದಕ್ಕೆ ಆಗುವುದೇ ಇಲ್ಲ. ರೆವಿನ್ಯೂ ಮಿನಿಷ್ಟರ್ ಮುಖ ನೋಡುವುದಕ್ಕೆ ಆಗುವುದೇ ಇಲ್ಲ. ಶಾಸನಸಭಾ ಸದಸ್ಯರ ಬೆಂಬಲವಿಲ್ಲದೆ ಹೋದರೆ ಇಂಥ ಜನರ ಮಾತುಬೇಡ.

ಈ ಹೊತ್ತು 100 ಜನರನ್ನು ಶಾಸನಸಭಾ ಸದಸ್ಯರ ಬೆಂಬಲವಿಲ್ಲದೆ ನೋಡುತ್ತಾ ಇದ್ದರೆ ಶಾಸನಸಭಾ ಸದಸ್ಯರ ಬೆಂಬಲದಿಂದ 20 ಸಾವಿರ ಜನ ನೋಡುತ್ತೀರಾ ದಾಮಾಶ, ರೇಷ್ಯೂನೋಡಿ, ನಮ್ಮ ಸಮಾಜದ ಜನ, ಶೋಶಿತ ವರ್ಗ ಯಾರು ಇದ್ದರೋ, ಬಡವರಾಗಿರತಕ್ಕ ವರ್ಗ ಯಾರಿದ್ದಾರೆಯೋ, ಬೆಂಬಲವಿಲ್ಲದೆ ಇರತಕ್ಕಂಥ ವರ್ಗ ಯಾವುದಿದೆಯೋ, ಅದಕ್ಕೆ ಹಿಂದೆ ಯೋಗ್ಯತೆ

ಇರತಕ್ಕಂಥ ಪ್ರತಿನಿಧಿಗಳು ಬೆಂಬಲ ಕೊಡುತ್ತಾ ಇದ್ದರು. ಈಗ ಈ ಬೆಂಬಲ ಸಿಗುವುದಿಲ್ಲ. ಬೇರೆ ವಿಧದಿಂದ ಬೆಂಬಲಗಳು ಸಿಗುತ್ತಾ ಇದೆ. ಅನೇಕ ಜನ ಶೋಷಿತರಾಗಿದ್ದಾರೆ. ಇವರು ಇಲ್ಲಿಗೆ ಹೋಗಬೇಕೆಂದು ಕೇಳುತ್ತೇನೆ. ಆರು ಎಕರೆ ಎಂಟು ಎಕರೆ ಜಮೀನಿದ್ದರೆ, ಎರಡು ಎಕರೆ ಭೋಗ್ಯ ಮಾಡುತ್ತಾನೆ; ಎರಡು ಎಕರೆ ಮಾರಿ ಎರಡು ಸಾವಿರ ರೂಪಾಯಿ ಸಾಲ ತೆಗೆದುಕೊಂಡಿರುತ್ತಾನೆ. ಮಗನ ವಿದ್ಯಾಭ್ಯಾಸ ಮಾಡಿರುತ್ತಾನೆ. ಜೀತಮಾಡಿ ಆ ಹಣ ತೀರಿಸುತ್ತಾನೆ. ಆ ಸ್ವತ್ತನ್ನು ತಿರುಗ ಓಂದಕ್ಕೆ ವಶಕ್ಕೆ ತೆಗೆದುಕೊಳ್ಳುತ್ತಾನೆ. ಭೂಮಿಯನ್ನೆ ನಂಬಿಕೊಂಡು ನಿಂತಿರುವವನ ಜಮೀನನ್ನು ಹೊರಗಡೆಯ ಜನಕ್ಕೆ ಬಿಡುವುದಿಲ್ಲವೆಂದು ಹಿಂದಿನ ಪ್ರಕರಣದಲ್ಲಿ ಮಂಜಪ್ಪನವರು ಹೇಳಿದರು. ಯಾರದು ಜಮೀನು ಎಂದು ಕೇಳುತ್ತೇನೆ. ಭಗವಂತ ಆಕಾಶ ಸೃಷ್ಟಿಮಾಡಿದ, ಭೂಮಿಯನ್ನು ಸೃಷ್ಟಿ ಮಾಡಿದ. ಅಂತಹುದರಲ್ಲಿ ಬಿಡುವುದಿಲ್ಲವೆಂದು ಹೇಳುತ್ತಾರೆ, ಈಗ ಹಳ್ಳಿಯಲ್ಲಿರುವವರು ಕಷ್ಟದಲ್ಲಿದ್ದಾರೆ. ಮಿಕ್ಕವರು ಹೋಗಿ ಅವರನ್ನು ಬುದ್ಧಿವಂತರನ್ನಾಗಿ ವಿದ್ಯಾವಂತರನ್ನಾಗಿ ಮಾಡುವುದಕ್ಕೆ ಅವಕಾಶ ಕೊಡುವುದಿಲ್ಲ. ಅಂದರೆ ಯೋಗ್ಯ ಜನರ ಹಳ್ಳಿಯಲ್ಲಿ ವಾಸ ಮಾಡುವುದಕ್ಕೆ ಅವಕಾಶ ಕೊಡುವುದಿಲ್ಲವೆಂದು ಹೇಳಿದ ಹಾಗಾಯಿತು. ಈಗ ಅಲ್ಲಿ ಉಳಿದಿರತಕ್ಕ ಜನ ಅವಿದ್ಯಾವಂತರೂ ಬಡವರು ಆಗಿರತಕ್ಕಂಥ ಜನ; ಸರ್ಕಾರದ ಶೋಷಣೆಗೆ ಸಿಕ್ಕಿದ ಜನ ಅವರಿಗೆ ಮುಂದೆ ಬರಬೇಕೆಂಬ ಆಸೆ ಇರುತ್ತದೆ. ಅದು ಈಡೇರುವುದಕ್ಕೆ ಅವಕಾಶ ಇರುವುದಿಲ್ಲ. ನಿಮಗೆ ಅವರ ಆಸೆಯನ್ನು ಪೂರ್ತಿ ಮಾಡಬೇಕೆಂಬ ಆಸೆ ಇದೆ. ಆದರೆ ತಮ್ಮ ಪ್ರಯತ್ನಗಳಾಗಲಿ, ಸಾಧನೆಗಳಾಗಲಿ ಆ ಮಾರ್ಗದಲ್ಲಿ ಹೋಗುತ್ತಿಲ್ಲ. ಹಾಗೆ ಆಗಬಾರದು. ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕ ಜನಗಳಿಗೆ ತೊಂದರೆ ಮಾಡಿಬಿಟ್ಟರೆ ನೀವು ಸಾಧಿಸಿದ್ದು ಏನಾಯಿತು ಅವರು ಎಲ್ಲಿಗೆ ಹೋಗಬೇಕು? ಹಳ್ಳಿಗಾಡಿನವನ ಮಕ್ಕಳಿಗೂ ಮದುವೆಯಾಗಬೇಕು ಅವರು ಸೀಮೆಗೆ ಹೋಗಬೇಕು. ಅವನ ಮಗ ಕರ್ನಾಟಕ ಯೂನಿವರ್ಸಿಟಿಯಲ್ಲಿ ಫಸ್ಟ್‌ಕ್ಲಾಸಿನಲ್ಲಿ ಪಾಸ್ ಮಾಡಿದ್ದಾನೆ. ಅವನು ಅಗ್ರಿಕಲ್ಚರ್ ಎಂ.ಎಸ್.ಸಿ.ಗೆ ಹೋಗಬೇಕು. ಅವನ ಹತ್ತಿರ ಮೂರು ಸಾವಿರ ರೂಪಾಯಿ ಇದೆ; ಇನ್ನು ಎರಡು ಸಾವಿರ ರೂಪಾಯಿಬೇಕು. ಆ ಎರಡು ಸಾವಿರ ರೂಪಾಯಿ ನೋಡೋಣವೆಂದರೆ ಭೋಗ್ಯ ಮಾಡುವುದಕ್ಕೆ ಅವಕಾಶವಿರುವುದಿಲ್ಲ. ಇಂಥ ಪರಿಸ್ಥಿತಿ ಏನುಂಟೋ ಅದನ್ನು ಉಲ್ಬಣ ಮಾಡಬೇಡಿರಿ. ಗ್ರಾಮಾಂತರ ಪ್ರದೇಶದಲ್ಲಿರತಕ್ಕಂಥ ಜನರಿಗೆ ಯಾವುದಾದರೂ ಒಂದು ಕಡೆ, ಒಂದು ದಿಕ್ಕಿನಲ್ಲಿ ಬೆಳಕು ಇದ್ದರೆ, ಅಲ್ಲಿ ಸಹಕಾರ ದೊರಕುವ ಅವಕಾಶ ಸಿಗುತದೆ, ಸಹಾಯ ದೊರಕುತ್ತದೆ. ಗೃಹಸ್ಥ ಇದ್ದಾನೆ; ಅವನನ್ನು ಅಪ್ರೋಚ್ ಮಾಡಿಯೇ ಬೇಕಾಗುತ್ತದೆ. ಇದರಿಂದ ಹತ್ತಾರುಕಡೆ ಪರಿಣಾಮವಾಗುವುದಿಲ್ಲ. ಲ್ಯಾಂಡ್ ರಿಫಾರಮ್ಸ್ ಬಂದ ಮೇಲೆ ಯಾರೊಬ್ಬರೂ ಭೂಮಿ ಇರುವವರಿಗೆ ಸಹಾಯ ಮಾಡುವುದಕ್ಕೆ ಹೋಗುವುದಿಲ್ಲ. ಆವಾಗ ಭೂಮಿ ಇರುವವನು ಅಸಹಾಯಕ ಅಸಹಾಯಕನಾಗುತ್ತಾನೆ. ಎಲೆಕ್ಷನ್ ಆದಮೆಲೆ ಸರ್ಕಾರ ಸಹಾಯ ಮಾಡುವುದಕ್ಕೆ ಆಗುವುದಿಲ್ಲ. ಮುಂದಿನ ಬಡ್ಜೆಟ್ಟಿನಲ್ಲಿ ಕೊಡುವುದಕ್ಕೆ ಹಣವಿರುವುದಿಲ್ಲ. ಎಲೆಕ್ಷನ್ ಆದಮೇಲೆ ಹಣವಿರುವುದಿಲ್ಲ ಹಣಕೊಡುತ್ತೇನೆ – ಅನ್ನುವವವರಿಗೆ ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ. ಮಂಜಪ್ಪನವರಿಗೆ ಅಗ್ರಿಕಲ್ಚರಿಸ್ಟ್ ಅನ್ನುವವರಿಗೆ ಕೊಡೋಣವೆಂಬ

ಆಸೆ ಇದ್ದರೂ, ಕೊಡುವುದಕ್ಕಾಗುವುದಿಲ್ಲ; ಅವಕಾಶವಿರುವುದಿಲ್ಲ. ಅವರ ಕಡೆಯೇ ಹಿಂದಕ್ಕೆ – ಹಿಂದಕ್ಕೆ ಹೋಗುತ್ತದೆ.

ಅವರು ಸಿಕ್ಕುವುದಿಲ್ಲ. ಆದುದರಿಂದ ಸಮಾಜದಲ್ಲಿ ಏನೇನು ಸಮಸ್ಯೆಗಳಿವೆಯೋ ಅವುಗಳ ಪರಿಹಾರಕ್ಕೆ ಅಲ್ಲಲ್ಲೇ ಏರ್ಪಾಡು ಮಾಡಬೇಕು. ಶ್ರೀಮಾನ್ ಮಂಜಪ್ಪನವರಿಗೆ ಗೊತ್ತಿದೆ. That Government is the best which rules least ಎಂದು ಹೇಳಿರುವುದು. ಯಾವ ಸರ್ಕಾರ ಎಲ್ಲ ಬಾಹುಗಳನ್ನು ಎಲ್ಲ ಕಡೆಯೂ ಚಾಚಿ ಮೂರು ಲೋಕಗಳನ್ನು ಅಳೆಯುವುದಕ್ಕೆ, ಆಳೆವುದಕ್ಕೆ ಪ್ರಯತ್ನ ಮಾಡುತ್ತದೆಯೋ ಅದು ಕೆಟ್ಟ ಸರ್ಕಾರ. ಸಮಾಜದಲ್ಲಿ ಸಮಸ್ಯೆಗಳು ಹುಟ್ಟಿದ್ದರೆ ಜನರು ಅವರವರೇ ಆ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವುದಕ್ಕೆ ಅವಕಾಶ ಕೊಡುವುದು ಒಳ್ಳೆಯ ಸರ್ಕಾರ. ಭೂದಾನಯಜ್ಞದ ವಿಧೇಯಕವಿದೆ. ಸರ್ವೋದಯ ಸಮಾಜವಾದಿ ವಿನೋಬಾ ಭಾವೆಯವರ ತತ್ವಗಳ ಮೇಲೆ ಮಾಡಿರುವುದು, ಗಾಂಧೀಜಿಯವರು ಅಂಥ ಸಮಾಜವಿರಬೇಕೆಂದು ಹೇಳಿ ಸ್ವರ್ಗಸ್ಥರಾದರು. Least interferenece ಇರುವ ಸರ್ಕಾರವಿರಬೇಕೆಂದು ಹೇಳಿ ಕಣ್ಣುಮುಚ್ಚಿ ಕೈಲಾಸ ಸೇರಿದರು. ಆದರೆ ಈ ಸರ್ಕಾರದ interference ಹೆಚ್ಚಾಗುತ್ತಿದೆ. ಜೀವನದ ಪ್ರತಿಯೊಂದು ಕ್ಷೇತ್ರಕ್ಕೂ ಸರ್ಕಾರ ಕೈಹಾಕುತ್ತಿದೆ. ಇದರಿಂದ ಪ್ರಜೆಗಳಿಗೆ ಅನುಕೂಲವಾಗಿಲ್ಲ. ಆಗಿದ್ದರೂ ಅಲ್ಪಸ್ವಲ್ಪ ಅನುಕೂಲವಾಗಿರುವುದು ಶೀಲಭ್ರಷ್ಟ ಅಧಿಕಾರ ವರ್ಗಕ್ಕೆ ಇದರಲ್ಲಿಯೂ ವಿಶೇಷ ಹಾವಳಿಯಾಗಿರುವುದು ಗ್ರಾಮಾಂತರ ಪ್ರದೇಶದಲ್ಲಿ. ಇದು ಅವರಿಗೂ ಗೊತ್ತಿದೆ. ಗ್ರಾಮಜೀವನ ಯಾವ ರೀತಿಯ ನಾಯಕತ್ವದಲ್ಲಿ ಬೆಳೆದುಕೊಂಡು ಹೋಗುತ್ತಿದೆ ಎನ್ನುವುದನ್ನು ಅವರೂ ನೋಡಿದ್ದಾರೆ. ಅವರಿಗೆ ರೇಡಾರ್ ಶಕ್ತಿಯಿದ್ದಿದ್ದರೆ ಅದನ್ನು ಅವರು ನಿರ್ಮೂಲ ಮಾಡುತ್ತಿದ್ದರು. ಆದರೆ ಆ ಶಕ್ತಿ ಅವರಿಗಿಲ್ಲ. ಹಳ್ಳಿಗಾಡಿನವರನ್ನು ಇನ್ನೂ ಅಧಃ ಪಾತಾಳಕ್ಕೆ ತಳ್ಳಬಾರದು. ಯಾವಾಗ ಒಬ್ಬನು ವ್ಯವಸಾಯವನ್ನವಲಂಬಿಸುತ್ತಾನೋ ಆಗ ಆ ಭೂಮಿಯನ್ನು ತನ್ನ ಆಸ್ತಿ ಎಂದು ಪರಿಗಣಿಸಬೇಕು. ಯಾವಾಗ ಹೀಗಾಗುತ್ತದೆಯೋ ಆಗ ಅದಕ್ಕೆ ಪ್ರಾಶಸ್ತ್ಯ ದೊರಕುತ್ತದೆ. ಇದಕ್ಕೊಂದು ಪವಿತ್ರತೆ ಬರುತ್ತದೆ. ನಮ್ಮ ತಂದೆ ತಾಯಿಗಳು, ದೇವರು, ಆತ್ಮ ಇವುಗಳ ಬಗ್ಗೆ ನಮಗೆ ಏನೊಂದು ಗೌರವಾಭಿಮಾನಗಳುಂಟೋ, ಇವಕ್ಕೇನು ಪ್ರಾಶಸ್ತ್ಯವಿರುತ್ತದೆ. ಜೀವನಕ್ಕಾಗಿ ಸಂಪಾದನೆಯ ಸಾಧನಗಳು ಬೇಕಾದಷ್ಟಿರುತ್ತವೆ. ಎಲ್ಲಕ್ಕಿಂತಲೂ ಈ ಭೂಮಿಯ ಆಸ್ತಿ ದೊಡ್ಡದು. ಇದನ್ನು ಸಂಪಾದನೆ ಮಾಡಿಕೊಂಡಿದ್ದರೆ ಇದು ಅವನ ಕಷ್ಟದಲ್ಲಿ ರಕ್ಷಣೆ ಮಾಡುವ ಸಾಧನವಾಗಿ ನಿಲ್ಲಬೇಕು. ಭೂಮಿ ಇಂಥ ರಕ್ಷಣಾ ಸಾಧನವಾಗಬೇಕು. ಕೆಲವರಿಗೆ ಭೂಮಿಯನ್ನು ಹಂಚುವುದಕ್ಕಾಗಿ ಮತ್ತೆ ಕೆಲವರನ್ನು ಬೀದಿಗೆ ತಳ್ಳಬಾರದು.

ಮೂರನೆಯದಾಗಿ ಗ್ರಾಮಾಂತರ ಪ್ರದೇಶಗಳಲ್ಲಿರುವ ಬಡ ಸಂಸಾರಗಳಿಗೆ ತಮ್ಮ ಮಕ್ಕಳ ವಿದ್ಯಾಭ್ಯಾಸ, ಮದುವೆ ಇತ್ಯಾದಿಗಳು ಅವರ ಮುಂದೆ ನಿಂತಿರುವ ದೊಡ್ಡ ಪ್ರಶ್ನೆಗಳು. ಇವುಗಳನ್ನು ಅವರು ಸರಿಯಾಗಿ ನಡೆಸಲು ಚಿಕ್ಕ ಚಿಕ್ಕ ಸೌಕರ್ಯಗಳನ್ನು ಕಲ್ಪಿಸಬೇಕು. ಈ ವಿಚಾರವಾಗಿ, ಈ ತಿದ್ದುಪಡಿಯ ಬಗ್ಗೆ ಸುಪ್ರಸಿದ್ಧ ನ್ಯಾಯವಾದಿಗಳ ಹತ್ತಿರ ನಾನೂ ಶ್ರೀಮಾನ್ ವೆಂಕಟಪ್ಪನವರೂ

ಚರ್ಚೆಮಾಡಿ ಇದರಲ್ಲಿ ಸರಿಯಾದ ಪದ ಪ್ರಯೋಗ ಮಾಡಿದ್ದೇವೆ. "The sale or mortigage of land done out of family necessities" ಯಾವುದು necessity ಎನ್ನುವುದರ ಬಗ್ಗೆ ಹೈಕೋರ್ಟು ಮತ್ತು ಸುಪ್ರೀಮ್ ಕೋರ್ಟುಗಳ ತೀರ್ಮಾನಗಳಿವೆ. ಮುಂದೆ ತೀರ್ಮಾನವಾಗಲಿ. "Done out of family necessities" ಎಂದು ಸೂಚಿಸಿದ್ದೇವೆ. ಚುನಾವಣೆಗೆ ನಿಲ್ಲುವುದು necessity ಅಲ್ಲ, ವಿಧಾನಸೌದದಂಥ ಸೌಧವನ್ನು ಕಟ್ಟುವುದು necessity ಅಲ್ಲ, ಆದಾಯವನ್ನು ಹೆಚ್ಚುಮಾಡಿಕೊಳ್ಳಲು ಮಾಡುವುದು necessity ಅಲ್ಲ, family necessity ಎಂದರೆ, ಮಕ್ಕಳ ವಿದ್ಯಾಭ್ಯಾಸ, ವಿವಾಹ, ಇತ್ಯಾದಿಗಳು, ರೋಗರುಜಿನಾದಿಗಳನ್ನು ಗುಣಪಡಿಸಿಕೊಳ್ಳುವುದು ಇತ್ಯಾದಿಗಳು. ಯಾವ ಗ್ರಾಮಾಂತರಗಳನ್ನು ಉದ್ಧಾರಮಾಡಬೇಕೆಂದು ಪ್ರಯತ್ನ ಮಾಡುತ್ತಿದ್ದಾರೋ ಅದು ಸಾಧ್ಯವಾಗಿ ಹಳ್ಳಿಯ ಪ್ರಜೆಗಳಿಗೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ಸೂಚಿಸಿದ್ದೇವೆಂದು ಅರಿಕೆಮಾಡುತ್ತೇನೆ.

– * –

## VI. ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

### 1. ಸರ್ಕಾರಿ ಶಾಲೆಗಳ ಸಂಬಳ–ಸಾರಿಗೆಗಳನ್ನು ಖಾಸಗಿ ಶಾಲೆಗಳಲ್ಲೂ ನೀಡುವ ಕುರಿತಂತೆ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ:–**

ಚರಿತ್ರೆಯ ಅಂಶ ಅವರಿಗೆ ಸಂಪೂರ್ಣವಾಗಿ ಗೊತ್ತಿರುವುದರಿಂದ ಅವರ ಸಹಾನುಭೂತಿಯ ಜೊತೆಗೆ ವಿಷಯವನ್ನು ಕಡ್ಡಾಯವಾದ ರೀತಿಯಲ್ಲಿ ಅವರು ಒತ್ತಿ ಹೇಳಿ ತಿಳಿಸುತ್ತಾರೆ. ನಮ್ಮ ಮಾತು ಆದಮೇಲೆ ಎನ್ನುವುದೇ ನನ್ನ ಅಭಿಪ್ರಾಯ. ಅದನ್ನೇ ಶ್ರೀಮಾನ್ ರಾಮರಾಯರು ನನ್ನ ಹಾರ್ದಿಕವಾದ ಅಭಿಪ್ರಾಯವೆಂದು ನನ್ನ ಮನಸ್ಸನ್ನು ತಿಳಿದಿರತಕ್ಕ ಆ ಮಿತ್ರರು ತಿಳಿಮಕೊಂಡಿದ್ದಾರೆಂದು ಭಾವಿಸುತ್ತೇನೆ.

ಇನ್ನು ಎರಡು ಮಾತುಗಳನ್ನು ಈ ಸಭೆಯ ಮುಂದೆ ತಮ್ಮ ಅಪ್ಪಣೆ ಪಡೆದು ವಿಜ್ಞಾಪನೆ ಮಾಡಿಕೊಳ್ಳುವುದು ಅಗತ್ಯವೆಂದು ತಿಳಿದುಕೊಂಡಿದ್ದೇನೆ. ನಮ್ಮ ಹಳೆಯ ಮೈಸೂರು ಸಂಸ್ಥಾನದಲ್ಲಿನ ಇಡೀ ಖಾಸಗಿ ಶಾಲೆಗಳು, ಪೌರ ಸಭೆಗಳಿಂದ ನಡೆಸಲ್ಪಡತಕ್ಕ ಶಾಲೆಗಳು, ಜಿಲ್ಲಾ ಬೋರ್ಡುಗಳಿಂದ ನಡೆಸಲ್ಪಡತಕ್ಕ ಶಾಲೆಗಳು ಪ್ರಮಾಣದಲ್ಲಿ ಸಂಖ್ಯೆಯ ದೃಷ್ಟಿಯಿಂದ ಕಾರ್ಯನಿರ್ವಾಹಕ ದೃಷ್ಟಿಯಿಂದ ಸರ್ಕಾರದ ಶಾಲೆಗಳಿಗಿಂತ ವಿಶೇಷವಾದ ರೀತಿಯಲ್ಲಿ ಕೆಲಸ ಮಾಡಿದೆ ಎನ್ನುವುದನ್ನು ಸರ್ಕಾರ ಗಮನಿಸಬೇಕೆಂದು ಈ ಸಭೆಯಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ನಮ್ಮ ಹಳೆಯ ಮೈಸೂರು ಸಂಸ್ಥಾನದಲ್ಲಿ 210 ಹೈಸ್ಕೂಲುಗಳಿವೆ. ಅನೇಕ ಮಿಡಲ್ ಸ್ಕೂಲುಗಳು ಇವೆ; ವಿಶೇಷವಾಗಿ ಪ್ರೈಮರಿ ಶಾಲೆಗಳು ಸರ್ಕಾರದ ನೇರವಾದ ಆಡಳಿತಕ್ಕೆ ಸಂಬಂಧಪಟ್ಟಿದ್ದರೂ ಕೆಲವು ಖಾಸಗಿಯವರು ನಡೆಸತಕ್ಕ ಶಾಲೆಗಳಿವೆ. 240 ಹೈಸ್ಕೂಲುಗಳಲ್ಲಿ ಸುಮಾರು 70 ಸರ್ಕಾರ ಹೈಸ್ಕೂಲುಗಳಿವೆ. ಉಳಿದ 170 ಶಾಲೆಗಳು ಖಾಸಗಿ ಉದ್ಯಮದಲ್ಲಿ ನಡೆಯುತ್ತ ಇರತಕ್ಕ ಶಾಲೆಗಳು. ನಿರ್ಣಯಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡಿರುವುದರಲ್ಲಿ ನಗರ ಪಾಲಿಕೆಯ ಶಾಲೆಗಳು ಎಂದು ಹಾಕಿದ್ದಾರೆ. ತಾವು ನೋಡಿರಬಹುದು ಸಭಾಪತಿಗಳೇ ನಮ್ಮಲ್ಲಿ ಪುರಸಭೆಗಳು ನಡೆಸತಕ್ಕ ಶಾಲೆಗಳಿವೆಯೇ ಹೊರತು ನಗರ ಪಾಲಿಕೆಯು ನಡೆಸತಕ್ಕ ಶಾಲೆಗಳಿಲ್ಲ. ನಗರ ಪಾಲಿಕೆ ಎಂದು ಕಂಡುಬರುವುದು ಲಂಕಾನಗರಕ್ಕೆ ಲಂಕಿಣಿ ಪಾಲಿಕೆಯಾಗಿದ್ದಳು ಎಂದು ಹೇಳಿರುವಾಗ ಮಾತ್ರ. ಅಂಥ ಪಾಲಿಕೆಯು ನಡೆತಕ್ಕ ಶಾಲೆಗಳು ನಮ್ಮಲ್ಲಿಲ್ಲ. ಪುರಸಭೆಗಳವರು ನಡೆಸತಕ್ಕ ಶಾಲೆಗಳು ಸುಮಾರು 60 ಇವೆ; ಜಿಲ್ಲಾ ಬೋರ್ಡುಗಳು ನಡೆಸತಕ್ಕ ಶಾಲೆಗಳು ಸುಮಾರು 58 ಇವೆ. ಉಳಿದವು ಖಾಸಗಿ ಆಡಳಿತ ಎಂದರೆ, ಪ್ರೈವೇಟ್ ಮ್ಯಾನೇಜಿಮೆಂಟಿನವರು ನಡೆಸತಕ್ಕ ಶಾಲೆಗಳು. ಇದರ ಜೊತೆಗೆ ಹೊರಗಿನ ಕನ್ನಡ ರಾಜ್ಯ ಬಂದು ಸೇರಿರತಕ್ಕ ಪ್ರದೇಶಗಳಲ್ಲಿ ಸರ್ಕಾರ ನಡೆಸತಕ್ಕಂಥ ಶಾಲೆಗಳಿಗಿಂತ ಪ್ರಮಾಣದಲ್ಲಿ ಹತ್ತರಷ್ಟು, ಹದಿನೈದರಷ್ಟು ವಿಶೇಷವಾಗಿ ಖಾಸಗಿ ಉದ್ಯಮದಿಂದಲೇ ಶಾಲೆಗಳು ಬೆಳೆದುಕೊಂಡು ಬಂದಿದೆ. ಈ ಶಾಲೆಗಳಲ್ಲಿ ವ್ಯಾಸಂಗ ಮಾಡಿದ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಇಲ್ಲಿ ಪ್ರತಿ ವರ್ಷವೂ ದೊರೆಯುತ್ತಿರುವ ಪರೀಕ್ಷೆ

ಸರ್ಕಾರಿ ಶಾಲೆಗಳ ಸಂಬಳ–ಸಾರಿಗೆಗಳನ್ನು ಖಾಸಗಿ ಶಾಲೆಗಳಲ್ಲೂ ನೀಡುವ 2.8.1957ರಂದು ನಡೆದ ಚರ್ಚೆಯಲ್ಲಿ ಕುರಿತಂತೆ

ಫಲಿತಾಂಶ, ಇಲ್ಲಿ ವಿದ್ಯಾರ್ಥಿಗಳಿಗೆ ದೊರೆಯತಕ್ಕ ದೇಹ, ಮಾನಸಿಕ ಮತ್ತು ಶೀಲದ ಶಿಕ್ಷಣ ಇದನ್ನು ನೋಡಿದ ಪಕ್ಷದಲ್ಲಿ ಸರ್ಕಾರದ ಶಾಲೆಗಳಿಗಿಂತ ಉತ್ತಮವಾಗಿದೆ ಎಂದು ಸರ್ಕಾರದ ಅಧಿಕಾರಿಗಳೇ ಒಪ್ಪಿಕೊಂಡಿದ್ದಾರೆ. ಶಿಕ್ಷಣ ಶಾಖಾಧಿಕಾರಿಗಳೂ ಕೂಡ ಈ ಅಂಶವನ್ನು ಹತ್ತಾರು ಬಾರಿ ಸರ್ಕಾರದ ಗಮನಕ್ಕೆ ತಂದಿದ್ದಾರೆ. ಇಂಥ ಶಾಲೆಗಳಲ್ಲಿ ಮಾಡತಕ್ಕ ಕೆಲಸ, ಅದರ ಸೇವಾದೃಷ್ಟಿ ಅವರ ಮನೋಭಾವ ಇವೆಲ್ಲವನ್ನೂ ಪರಿಗಣಿಸಿ ಒಂದೇ ವಿಧದಲ್ಲಿರತಕ್ಕ ಉಪಾಧ್ಯಾಯರಿಗೆ ಮಿನಿಮಮ್ ವೇಜಸ್ ಎಂದು ಹೇಳುತ್ತಾರಲ್ಲ ಆ ಮಿನಿಮಮ್ ವೇಜಸ್ ಕೊಡಬೇಕು ಎನ್ನುವುದನ್ನು ನಾನೂ ಶ್ರೀಮಾನ್ ರಾಮರಾಯರೂ, ಮಹದೇವಸ್ವಾಮಿಯವರೂ ಹತ್ತಾರು ವೇಳೆ ಸರ್ಕಾರದ ಗಮನಕ್ಕೆ ತಂದಿದ್ದೇವೆ. ಆದರೂ ಕೂಡ ಈ ಮಾತುಗಳು ಅವರ ಕಿವಿಯ ಮೇಲೆ ಬೀಳಲಿಲ್ಲವಲ್ಲ ಎಂದು ವಿಷಾದಪಟ್ಟಿದ್ದೇವೆ. ಇದಕ್ಕೆ ಎರಡು ಕಾರಣಗಳಿವೆ. 1957ನೆಯ ಇಸವಿ ಜನವರಿ 25ನೆಯ ತಾರೀಖಿನ ದಿವಸ ಸರ್ಕಾರ ಹೊರಡಿಸಿದ ಒಂದು ಆಜ್ಞೆಯಲ್ಲಿ ಸರ್ಕಾರದ ಶಾಲೆಗಳಲ್ಲಿರತಕ್ಕ ಅಧ್ಯಾಪಕರಿಗೆ ಕೊಂಚ ಸೌಕರ್ಯ ಸೌಲಭ್ಯಗಳು ದೊರೆಯುತ್ತವೆ ಎಂದು ಹೇಳಿದೆ. ಈ ಸೌಕರ್ಯ ಸೌಲಭ್ಯಗಳನ್ನು ಸರ್ಕಾರಿ ಶಾಲೆಯ ಅಧ್ಯಾಪಕರುಗಳಿಗೆ ಒದಗಿಸತಕ್ಕ ಕಾಲದಲ್ಲಿ ಏಡೆಡ್ ಇನ್‌ಸ್ಟಿಟ್ಯೂಟಷನ್‌ಗಳಿಗೆ ದೊರೆಯತಕ್ಕ ಒಂದು ದಾವಾಷಾ ಸಹಾಯ ದ್ರವ್ಯವೇನಿದೆ ಅದನ್ನು ನಿಖರ ಮಾಡುವಾಗ ಈ ಏಡೆಡ್ ಇನ್‌ಸ್ಟಿಟ್ಯೂಷನ್‌ಗಳವರು ಕೂಡ ಇದೇ ಸ್ಕೇಲ್ಸ್ ಆಫ್ ಪೇ ಅನುಸರಿಸಬೇಕು ಎಂದು ಹೇಳಿದ್ದ ಪಕ್ಷದಲ್ಲಿ ಆ ಕಾರ್ಯನಿರ್ವಾಹಕ ಮಂಡಳಿಯವರು ಸರ್ಕಾರವನ್ನು ಕೇಳುತ್ತಿದ್ದರು. ಜನಗಳನ್ನು ಕೇಳುತ್ತಿದ್ದರು. ಏನಾದರೂ ಕಷ್ಟಪಡುತ್ತಿದ್ದರು. ಅದನ್ನು ಒದಗಿಸಿಕೊಡತಕ್ಕ ಪ್ರಯತ್ನ ಮಾಡುತ್ತಿದ್ದರು. ಆದರೆ ಒಂದೇ ಒಂದು ವಾಕ್ಯದಿಂದ ರಾಮಬಾಣ ಪ್ರಯೋಗದ ಹಾಗೆ, ಅಧ್ಯಾಪಕ ವರ್ಗಕ್ಕೆ ಖತಂಮಾಡುವ ಹಾಗೆ, ಸರ್ಕಾರದವರು ಒಂದು ಅಸ್ತ್ರವನ್ನು ಪ್ರಯೋಗ ಮಾಡಿದರು. ಈ ಸರ್ಕಾರದ ಆರ್ಡರಿನಲ್ಲಿ ಪ್ರೈವೇಟ್ ಇನ್‌ಸ್ಟಿಟ್ಯೂಷನ್‌ಗಳಲ್ಲಿ ಏಡೆಡ್ ಇನ್‌ಸ್ಟಿಟ್ಯೂಷನ್‌ಗಳಲ್ಲಿರತಕ್ಕ ಅಧ್ಯಾಪಕ ವರ್ಗಕ್ಕೆ ಇದಕ್ಕಿಂತ ಕಡಿಮೆ ದರ್ಜೆಯ ಸಂಬಳವನ್ನು ಕೊಡಬಹುದು ಎಂದು ಹೇಳಿದರು. ಇದನ್ನು ಹೇಳಿದ್ದರಿಂದ ಏನಾಯಿತು ಎಂದು ನೋಡೋಣ. ಇದುವರೆಗೂ ಕೈಕಚ್ಚಿಸಿಕೊಂಡಿರತಕ್ಕ ಕಾರ್ಯನಿರ್ವಾಹಕ ವರ್ಗದವರು ಶಾಲೆಗಳನ್ನು ನಡೆಸುತ್ತಿದ್ದಾರೆ. ಲಕ್ಷಾಂತರ ರೂಪಾಯಿಗಳ ದತ್ತಿಯನ್ನು ಪಡೆದುಕೊಂಡು ಕಾರ್ಯನಿರ್ವಾಹಕ ಸಮಿತಿಗಳು, ಅಧ್ಯಾಪಕರಿಗೆ ವೇತನಗಳನ್ನೂ ಸಂಭಾವನೆಗಳನ್ನೂ ಕೊಟ್ಟು ಸಲಕರಣೆಗಳನ್ನು ಒದಗಿಸಿಕೊಟ್ಟು ಪುಸ್ತಕ ಭಂಡಾರಗಳನ್ನು ಒದಗಿಸಿಕೊಟ್ಟು ಸರಿಯಾದ ರೀತಿಯಲ್ಲಿ ಶಿಕ್ಷಣ ಒದಗಿಸಬೇಕಾದರೆ ಬಹಳ ಕಷ್ಟವಾಗಿದೆ. ಆದುದರಿಂದ ಅವರೇನು ಮಾಡಿದರೆಂದರೆ ಈ ಪರಿಷ್ಕೃತವಾಗಿರತಕ್ಕ ವೇತನಗಳನ್ನು ಅನೇಕ ಶಾಲೆಗಳಲ್ಲಿ ಕೊಡುವುದಕ್ಕೆ ಮನಸ್ಸನ್ನೇ ಮಾಡಲಿಲ್ಲ. ಇದರ ಜೊತೆಗೆ ಪೌರಸಭೆಗಳು ಮತ್ತು ಜಿಲ್ಲಾ ಬೋರ್ಡುಗಳಲ್ಲಿರತಕ್ಕ ಜನ, ತಾವು ಪ್ರಭುತ್ವವನ್ನು ಆಗತಾನೇ ಸ್ವೀಕಾರ ಮಾಡಿ ರುಚಿಯನ್ನು ಅನುಭವಿಸತಕ್ಕ ಜನ, ಸೇವಾ ದೃಷ್ಟಿಯಲ್ಲಿ ನಿರತರಾದವರಿಗೆ ಸೌಕರ್ಯ ಒದಗಿಸಿಕೊಡುವುದಿರಲಿ, ಅವರ ಮೇಲೆ ಸವಾರಿ ಮಾಡತಕ್ಕ ಕೆಲಸವನ್ನು ಮಾಡುತ್ತ ಬಂದರು. ಈ ಸಮಯದಲ್ಲಿ ನಮ್ಮ ಶಿಕ್ಷಣ ಶಾಖಾ ಮಂತ್ರಿಗಳು ಇಲ್ಲಿಲ್ಲವೆಂದು ಅಸಂತೋಷವಾದರೂ ಸ್ಥಳೀಯ ಸಂಸ್ಥೆಗಳ ಸಚಿವರಿರುವುದು ಬಹಳ ಸಂತೋಷವಾಗಿದೆ. ಅನೇಕ

ಪೌರ ಸಭೆಗಳಲ್ಲಿ ಆದಾಯವಿಲ್ಲದೆ ಇರತಕ್ಕ ಪೌರಸಭೆಗಳಲ್ಲಿ ಸಂಬಳಗಳನ್ನು ಕೊಡುವುದಕ್ಕೆ ತೊಂದರೆ ಇದ್ದು ಒಂದು ರೀತಿಯ ಕಷ್ಟವಾದರೆ, ಸಂಪೂರ್ಣವಾಗಿ ಪೌರಸಭೆಯ ಆಡಳಿತವನ್ನು ನಡೆಸಿ, ಉಳಿತಾಯ ಮಾಡಿಕೊಂಡಿರತಕ್ಕ ಪೌರಸಭೆಗಳವರೂ ಕೂಡ ಶಾಲಾಧ್ಯಾಪಕರಿಗೆ ಮೂರು ನಾಲ್ಕು ತಿಂಗಳ ಕಾಲ ಸಂಬಳಗಳನ್ನು ಕೊಟ್ಟಿಲ್ಲ. ನನಗೆ ಗೊತ್ತಿದೆ, ತುಮಕೂರು ಜಿಲ್ಲೆಯ ಗುಬ್ಬಿ ಪುರಸಭೆಯ ಶಾಲಾಧ್ಯಾಪಕರಿಗೆ ಸಂಬಳ ದೊರೆಯದೆ ಐದಾರು ಬಾರಿ ತಿರುಗಬೇಕಾಯಿತು. ನಾನೇ ಮೂರುಬಾರಿ ತುಮಕೂರಿಗೆ ಹೋಗಿ ಜಿಲ್ಲಾಧಿಕಾರಿಗಳನ್ನು ಈ ಬಗ್ಗೆ ನೋಡಬೇಕಾಯಿತು. ಇದರ ಜೊತೆಗೆ ಏನು ಮಾಡುತ್ತಾರೆಂದರೆ ಅಲ್ಲಿರತಕ್ಕ ಪೌರಸಭೆಯ ಪ್ರತಿನಿಧಿಗಳಾಗಿರತಕ್ಕವರು, ಅಧಿಕಾರಿ ವರ್ಗದಲ್ಲಿರುವವರು, 'ಸಂತೆ ನಡೆಯುತ್ತದೆ, ಜಾತ್ರೆ ನಡೆಯುತ್ತದೆ, ಇಲ್ಲಿ ಅಕ್ಟ್ರಾಯಿ ವಸೂಲ್ಮಾಡಿ ನಿಮ್ಮ ಸಂಬಳಗಳನ್ನು ತೆಗೆದುಕೊಳ್ಳಿ ಎಂದು ಅಧ್ಯಾಪಕರುಗಳಿಗೆ ಹೇಳಿರುವ ನಿದರ್ಶನಗಳಿವೆ. ಈ ರೀತಿ ಗುರುಸ್ಥಾನೀಯರಾದ ಅಧ್ಯಾಪಕರನ್ನು ನೋಡಿದರೆ ಪಿತೃಸ್ಥಾನದಲ್ಲಿ ನಿಲ್ಲತಕ್ಕ ಈ ಶಿಕ್ಷಕನ ಸ್ಥಿತಿ ಹೀಗಾದರೆ ಗತಿ ಏನು? ಇಂಥವರಿಂದ ಶಿಕ್ಷಣ ಪಡೆಯುವ ಮಕ್ಕಳು ಹೇಗೆ ತಾನೆ ಮುಂದಕ್ಕೆ ಬರುತ್ತಾರೆ. ರಾಜ್ಯದ ಅಡಿಪಾಯದಂತಿರುವ ಮಕ್ಕಳು ರಾಜ್ಯವನ್ನು ಹೇಗೆ ತಾನೇ ಉಳಿಸುತ್ತಾರೆಂದು ನೋಡಬೇಕಾಗಿದೆ. ಕೆಲವು ಜಿಲ್ಲಾಬೋರ್ಡುಗಳಲ್ಲಿ ಚುನಾವಣೆಗಳನ್ನು ನಡೆಸುವುದಕ್ಕೆ ಹಣವಿಲ್ಲವೆಂದು ಹೇಳುತ್ತಾರೆ. ಸ್ಟೇಷನರಿ ಪ್ರಿಂಟ್ ಮಾಡಿಸಬೇಕು. ಮಾಡಿಸದೆ ಇದ್ದರೆ ಮನಸ್ಸಿಗೆ ಸಮಾಧಾನವಿಲ್ಲ, ಸರ್ಕಾರದಿಂದ ಸಾಲ ತೆಗೆದುಕೊಂಡು ಪ್ರಿಂಟ್ ಮಾಡಿಸಬೇಕು. ಇಂಥ ಪರಿಸ್ಥಿತಿ ಬಂದಿದೆ ಎಂದು ಹೇಳುತ್ತಾರೆ. ಇಂಥ ಪರಿಸ್ಥಿತಿ ಬಂದಿರುವಾಗ ಜಿಲ್ಲಾ ಬೋರ್ಡುಗಳು ಶಾಲೆಗಳನ್ನು ನಡೆಸಿಕೊಂಡು ಹೋಗಬೇಕು, ಮುನಿಸಿಪಾಲಿಟಿಗಳು ಶಾಲೆಗಳನ್ನು ನಡೆಸಿಕೊಂಡು ಹೋಗಬೇಕು, ಕಾರ್ಯನಿರ್ವಾಹಕವರ್ಗ ಶಾಲೆಗಳನ್ನು ನಡೆಸಿಕೊಂಡು ಹೋಗಬೇಕು ಎಂದರೆ, ಸರ್ಕಾರ ತನ್ನ ಕರ್ತವ್ಯವನ್ನು ನೆರವೇರಿಸಿದ ಹಾಗಾಗುವುದಿಲ್ಲ.

ಉತ್ತರ ಕರ್ನಾಟಕ ಎಂದರೆ, ಬೊಂಬಾಯಿ ಪ್ರಾಂತದಿಂದ ಬಂದಿರತಕ್ಕ ನನ್ನ ಮಾನ್ಯ ಮಂತ್ರಿಗಳಲ್ಲಿ ಅಲ್ಲಿನ ಪದ್ಧತಿ ಚೆನ್ನಾಗಿ ತಿಳಿದಿರುತ್ತದೆ. ಅಲ್ಲಿನ ಶಾಲೆಗಳಲ್ಲಿ ಬರತಕ್ಕ ಶಿಕ್ಷಣ ಶುಲ್ಕ ಮತ್ತು ಸರ್ಕಾರದವರು ಕೊಡತಕ್ಕ ಸಹಾಯ ದ್ರವ್ಯಇವೆರಡೂ ಸೇರಿ ಶಾಲೆಯನ್ನು ನಿರ್ವಾಹ ಮಾಡಿಕೊಂಡು ಹೋಗುವುದಕ್ಕೆ ಯೋಗ್ಯವಾಗಿದ್ದಿರಬೇಕು ಎಂದು ಹೇಳುತ್ತಾರೆ. ಉತ್ತರ ಕರ್ನಾಟಕ ಜನ ಅನೇಕ ರೀತಿಯ ಕಷ್ಟಗಳನ್ನು ಪಟ್ಟು ಅಲ್ಲಿ ಬೇಕಾದ ಸೌಕರ್ಯಗಳನ್ನು ಕಲ್ಪನೆ ಮಾಡಿ ವಿದ್ಯಾರ್ಥಿಗಳಿಗೆ ಈ ಶಿಕ್ಷಣ ಸೌಲಭ್ಯವನ್ನು ಒದಗಿಸಿಕೊಟ್ಟಿದ್ದಾರೆ. ಈ ಸೌಕರ್ಯಗಳು ಅಲ್ಲಿವೆ. ನಮ್ಮಲ್ಲಿ ಏನು ಮಾಡಿದ್ದಾರೆಂದರೆ, ಒಟ್ಟು ಡಿಫಿಸಿಟ್‌ನಲ್ಲಿ ಶೇಕಡ 75ರಷ್ಟು ಕೊಡಬೇಕೆಂದು ತೀರ್ಮಾನ ಮಾಡಿದ್ದಾರೆ. ಉಳಿದ ಶೇಕಡ 25ರಷ್ಟು ಡಿಫಿಸಿಟ್ಟನ್ನು ಕೂಡ ನಿರ್ವಹಿಸುವುದಕ್ಕೆ ಖಾಸಗಿ ಸಂಸ್ಥೆಗಳವರಿಗೆ ಆಗುತ್ತಿಲ್ಲ. ಇದರ ಜೊತೆಗೆ ಅವರ ಮೇಲೆ ಹೇರಳವಾಗಿ ಬಿದ್ದಿರುವ ಒಂದು ದೊಡ್ಡ ಖೋತಾ ಎಂದರೆ ತುಟ್ಟಿಭತ್ಯದ ಖೋತ. ಈ ತುಟ್ಟಿಭತ್ಯದ ಹೊರೆ ಅಧ್ಯಾಪಕರಿಂದಲೂ ಹೆಚ್ಚಿದ್ದಲ್ಲ. ಏಡೆಡ್ ಇನ್‌ಸ್ಟಿಟ್ಯೂಷನ್‌ಗಳ ಮ್ಯಾನೇಜ್‌ಮೆಂಟಿನವರಿಂದಲೂ ಅಲ್ಲ, ಏನೋ ಒಂದು ವಿಶೇಷ ಪರಿಸ್ಥಿತಿಯಿಂದುಂಟಾದುದು. ಆ ಸಮಯದಲ್ಲಿ ಸರ್ಕಾರ ಸಾರ್ವತ್ರಿಕವಾಗಿ ಎಲ್ಲ ಪ್ರಜಾವರ್ಗಕ್ಕೂ

ಅನ್ವಯಿಸುವ ಹಾಗೆ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕಾಯಿತು. ಸರ್ಕಾರ ಆ ರೀತಿ ಕಾರ್ಯಕ್ರಮವನ್ನು ಕೈಗೊಂಡಿದೆ. ಸರ್ಕಾರದವರು ತಾವು ನಡೆಸತಕ್ಕ ಕೈಗಾರಿಕೋದ್ಯಮಗಳಲ್ಲಿ ಕೆಲಸ ಮಾಡುವವರಿಗೆ ಕೂಡ ಏಕರೀತಿಯಾಗಿ ತುಟ್ಟಿಭತ್ಯವನ್ನು ಕೂಡುತ್ತಾರೆ. ಸರ್ಕಾರಿ ನೌಕರರಿಗೆ ಕೊಡುವ ಹಾಗೆಯೇ ಇವರಿಗೂ ತುಟ್ಟಿಭತ್ಯೆವನ್ನು ಕೊಡುತ್ತಿದ್ದಾರೆ. ಆದರೆ ವಿದ್ಯಾಶಾಲೆಗಳಲ್ಲಿರತಕ್ಕ ಅದ್ಯಾಪಕರಿಗೆ ಏನು ಕೊಡುತ್ತಿದ್ದಾರೆ? ಏನು ಕೊಡುತ್ತಿದ್ದಾರೆಂದರೆ ತಲೆ ಒಂದಕ್ಕೆ ತಿಂಗಳಿಗೆ ಏಳೂವರೆ ರೂಪಾಯಿನಂತೆ ಕೊಡುತ್ತಿದ್ದಾರೆ. ಇದು ಹೇಗೆ ಪ್ರಾರಂಭವಾಯಿತೆಂದರೆ ಹತ್ತು ರೂಪಾಯಿ ತುಟ್ಟಿಭತ್ಯೆವನ್ನು ಕೊಡುತ್ತಿದ್ದಾಗ ಅದರಲ್ಲಿ ಶೇಕಡ 50ರಷ್ಟು ಅಂದರೆ ಐದು ರೂಪಾಯಿ ಸರ್ಕಾರದವರು ಕೊಡುತ್ತಿದ್ದರು. ಉಳಿದ ಐದು ರೂಪಾಯಿಗಳನ್ನು ಮ್ಯಾನೇಜ್‌ಮೆಂಟಿನವರು ಕೊಡಬೇಕೆಂದು ಮಾಡಿದ್ದರು. ಆಮೇಲೆ ತುಟ್ಟಿಭತ್ಯೆಯನ್ನು ಹದಿನೈದು ರೂಪಾಯಿಗಳಿಗೆ ಏರಿಸಿದಾಗ ಸರ್ಕಾರದವರು ಏಳೂವರೆ ರೂಪಾಯಿ ಕೊಡುವುದಕ್ಕೆ ಪ್ರಾರಂಭ ಮಾಡಿದರು. ಈ ತುಟ್ಟಿಭತ್ಯೆವು 15 ರೂಪಾಯಿಗಳಿಂದ 20,25,30,10 ಹೀಗೆ ಬದಲಾದ ಪರಿಸ್ಥಿತಿಯಿಂದ ಹೆಚ್ಚುತ್ತಾ ಹೋಗಿದ್ದರೂ ಸಹ ಉಪಾಧ್ಯಾಯರ ವಿಷಯದಲ್ಲಿ ಮಾತ್ರ ಅವರ ಕಷ್ಟವನ್ನು ಪರಿಹಾರ ಮಾಡತಕ್ಕ ಪ್ರಯತ್ನ ನಡೆದಿಲ್ಲ. ಇದರಿಂದ ಏನಾಗಿದೆಯೆಂದರೆ, ಸಾವಿರಾರು ರೂಪಾಯಿಗಳನ್ನು ಪ್ರತಿವರ್ಷವೂ ಕೂಡ ಕಾರ್ಯನಿರ್ವಾಹಕ ವರ್ಗದವರು ತುಟ್ಟಿಭತ್ಯದ ರೂಪದಲ್ಲಿ ಸಂಭಾವನೆಯನ್ನು ಕೊಡುವುದಕ್ಕೆ ಶೇಖರಣೆ ಮಾಡಬೇಕಾಗಿದೆ. ಇದು ದೊಡ್ಡ ಕಷ್ಟವಾದುದರಿಂದಲೇ ಅನೇಕ ಜನ, ಈ ಹೊತ್ತು ಶಿಕ್ಷಣಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸತಕ್ಕ ಜನ, ಧರ್ಮಬುದ್ಧಿ ಇರತಕ್ಕ ಜನ, ದೇಶಭಕ್ತಿ ಇರತಕ್ಕ ಜನ, ಕಾರ್ಯನಿಷ್ಠೆ ಇರತಕ್ಕ ಜನ, ಈ ಶಾಲೆಗಳನ್ನು ನಡೆಸಿಕೊಂಡು ಹೋಗಬೇಕು ಎಂದು ಹೇಳುತ್ತಿದ್ದರೂ ಕೂಡ ಅವುಗಳನ್ನು ನಡೆಸುವುದಕ್ಕೆ ಅವಕಾಶವಿಲ್ಲದೆ ಹೋಗಿದೆ.

ಆಲೋಚನೆ ಮಾಡಬೇಕಾದ ಒಂದು ವಿಷಯವನ್ನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಈ ಪ್ರಾಂತ್ಯದಲ್ಲಿರುವ ಸುಮಾರು 240 ಶಾಲೆಗಳಲ್ಲಿ 190 ಶಾಲೆಗಳು ಖಾಸಗಿ ಸಂಸ್ಥೆಗಳು, ಜಿಲ್ಲಾ ಬೋರ್ಡುಗಳು, ಮುನಿಸಿಪಾಲಿಟಿಗಳು ಮುಂತಾದವುಗಳಿಂದ ನಡೆಸಲ್ಪಡುತ್ತಿವೆ. ಏನಾದರೂ ವಿಪತ್ತು ಬಂದು ಈ 190 ಶಾಲೆಗಳನ್ನು ಮುಚ್ಚತಕ್ಕ ಪರಿಸ್ಥಿತಿ ಬಂದರೆ ಇವುಗಳನ್ನು ಸರ್ಕಾರವೇ ನಡೆಸಬೇಕಾಗಿ ಬಂದರೆ ಇದಕ್ಕಾಗಿ ಎಷ್ಟು ಹಣ ಎಷ್ಟು ಜನ ಎಷ್ಟು ಕಾಲವನ್ನು ವಿನಿಯೋಗಮಾಡಬೇಕಾಗುತ್ತದೆ ಎಂಬುದನ್ನು ಯೋಚಿಸಬೇಕು. ಜನವರಿ 25ನೆಯ ತಾರೀಖಿನ ಆಜ್ಞೆ ಎಲ್ಲಾ ಶಾಲೆಗಳಿಗೂ ಅನ್ವಯುವಾಗುತ್ತದೆಂದು ಸರ್ಕಾರ ಒಪ್ಪಬೇಕು. ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾದ ಶ್ರೀಮಾನ್ ಚನ್ನಿಗರಾಮಯ್ಯನವರು ಇದಕ್ಕೆ ಮನಸ್ಸು ಮಾಡಬೇಕು. ಅವರು ಮನಸ್ಸು ಮಾಡಿದರೆ ಜಿಲ್ಲಾ ಬೋರ್ಡು, ಪೌರ ಸಭೆಗಳ ಶಾಲೆಗಳ ಸಮಸ್ಯೆ ಬಗೆಹರಿಯುತ್ತದೆ. ಖಾಸಗಿ ಸಹಾಯ ದ್ರವ್ಯ ಪೋಷಿತವಾದ ಏಡೆಡ್ ಎಜುಕೆಷನಲ್ ಇನ್‌ಸ್ಟಿಟ್ಯೂಟ್ ವಿಷಯದಲ್ಲಿ ಗ್ರಾಂಟ್ ಇನ್ ಏಡ್ ಕೋಡ್ ಬದಲಾಯಿಸಬೇಕು. ಒಂದು ವೇಳೆ ಆಯಾ ಕಾರ್ಯನಿರ್ವಾಹಕ ಮಂಡಲಿಗೆ ಶಕ್ತಿಯಿಲ್ಲದೇ ಹೋದರೆ ಸರ್ಕಾರವೇ ಇವುಗಳನ್ನು ನಿರ್ವಹಿಸಬೇಕೆಂದು ಜನರು ಹೇಳುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಮಾಡುವ ಜನರು ಹೇಳುತ್ತಿದ್ದಾರೆ. ಸರ್ಕಾರಕ್ಕೆ ಈ ವಿಷಯದಲ್ಲಿರುವ ಸಹಾನುಭೂತಿಯನ್ನು

ತಿಳಿದುಕೊಂಡಿದ್ದಾರೆ. ಈ 'ಕೋಡ್' ಬದಲಾವಣೆಯಾಗುವವರೆಗೂ ಸರ್ಕಾರ ಪರಿಷ್ಕಾರ ಮಾಡಿರುವ ಸಂಬಳ ಸಾರಿಗೆಗಳನ್ನು ಎಲ್ಲ ಸ್ಕೂಲುಗಳಿಗೂ ಅನ್ವಯಿಸಬೇಕು. ಖಾಸಗಿ ಶಾಲೆಗಳಿಗೂ ಅನ್ವಯಿಸಬೇಕು. ಖಾಸಗಿ ಶಾಲೆಗಳು ಖರ್ಚು ಮಾಡುವುದರಲ್ಲಿ ಶೇಕಡ 75ರಷ್ಟು ಗ್ರಾಂಟ್-ಇನ್-ಏಡ್ ಈಗಾಗಲೇ ಕೊಡುತ್ತಿದ್ದಾರೆ. ಇದಕ್ಕಿಂತ ಹೆಚ್ಚಾಗುವ ಖರ್ಚನ್ನು ಸರ್ಕಾರ ಕೊಡಬೇಕು. ಅನೇಕ ಸಂದರ್ಭಗಳಲ್ಲಿ ತಾತ್ಕಾಲಿಕ ಪರಿಹಾರಕ್ಕಿಂತ ರಿವೈಸ್ಡ್ ಸ್ಕೇಲು ಕಡಿಮೆಯಾಗುತ್ತದೆ.

ಶಿಕ್ಷಣ ಕ್ಷೇತ್ರದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಆಯಾ ಸಂಸ್ಥೆಗಳಿರಬೇಕೆಂದು ಹೇಳುವ ಮನುಷ್ಯ ನಾನು, ಈ ಶಿಕ್ಷಣ ದೇಶದ ಹಿತದೃಷ್ಟಿಯಿಂದ ಸರಿಯಾಗಿ ನಡೆದುಕೊಂಡು ಹೋಗಬೇಕಾದಾಗ ಸರ್ಕಾರಿ ಶಾಲೆಗಳ ಅಧ್ಯಾಪಕರಿಗೆ ಯಾವ ಅರ್ಹತೆಯಿದೆಯೋ ಈ ಶಾಲೆಗಳ ಅಧ್ಯಾಪಕರಿಗೂ ಅದೇ ಅರ್ಹತೆ ಇರಬೇಕು. ಅಂಥವರನ್ನೇ ನೇಮಕಮಾಡಬೇಕೆಂಬುದನ್ನು ಪೂರ್ಣವಾಗಿ ನಾವು ಒಪ್ಪಿಕೊಳ್ಳುವಾಗ ಅವರಿಗೆ ದೊರೆಯತಕ್ಕ ಜೀವನ ಸೌಲಭ್ಯಗಳು, ಅದರಲ್ಲಿಯೂ ಅಗತ್ಯವಾದಷ್ಟಾದರೂ ಇವರಿಗೂ ದೊರೆಯುವಂತೆ ಸರ್ಕಾರ ಕೊಡಬೇಕು. 1947ನೆಯ ಇಸವಿಯಲ್ಲಿ ಸಂಬಳಗಳನ್ನು ಪುನರ್ವಿಮರ್ಶೆ ಮಾಡಿದಾಗ ಡಾ: ಎ. ರಾಮಸ್ವಾಮಿ ಮೊದಲಿಯಾರ್ ಅವರ ಕಾಲದಲ್ಲಿ ಒಂದು ಸರ್ಕ್ಯುಲರ್ ಹೊರಡಿಸಿ ಸರ್ಕಾರಿ ಶಾಲೆಗಳ ಸಂಬಳ ಸಾರಿಗೆಗಳು ಖಾಸಗಿ ಶಾಲೆಗಳಿಗೂ ಅನ್ವಯಿಸಬೇಕೆಂದು ಆಜ್ಞೆ ಮಾಡಿದರು. ಅದನ್ನು ನಡೆಸಿಕೊಂಡು ಬರುತ್ತಿದ್ದಾರೆ. ಆಗ ಶೇಕಡ 75ರಷ್ಟು ಸಹಾಯ ದ್ರವ್ಯ ದೊರೆಯುತ್ತಿರಲಿಲ್ಲ. ಇದು ದೊರೆಯದೇಯಿರುವಾಗ, ಸರ್ಕಾರ ದೇಶದ ಹಿತದೃಷ್ಟಿಯಿಂದ ಸಹಾಯ ಮಾಡಬೇಕಾಗುತ್ತದೆ. ಹಾಗೆ ಮಾಡುವುದಗತ್ಯವೆಂಬುದನ್ನು ಮನಗಂಡರು. ಇತ್ತೀಚೆಗೆ ಶಿಕ್ಷಣ ಸಮ್ಮೇಳನದಲ್ಲಿ ಸಹಾಯದ್ರವ್ಯವನ್ನು ಶೇಕಡ 90ರಷ್ಟು ಕೊಡಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಸರ್ಕಾರ ಶೇಕಡ 75ರಷ್ಟು ಕೊಡಬೇಕೆಂದು ಮಾಡಿದ್ದರೂ ಇದರಲ್ಲಿ ಶಾಲೆಗಳು ಲೈಬ್ರರಿ ಮತ್ತು ಇತರ ಸೌಲಭ್ಯಗಳನ್ನೊದಗಿಸುವುದಕ್ಕಾಗುವುದಿಲ್ಲವೆಂಬ ಅಭಿಪ್ರಾಯ ಬಂದಿದೆ. ಇದೂ ಪರ್ಯಾಲೋಚನೆಯಲ್ಲಿದೆ.

## 2. ಕೇಂದ್ರ ಸರ್ಕಾರದವರು ಟ್ರಿಪಲ್ ಬೆನಿಫಿಟ್ ಸ್ಕೀಮ್‌ನ್ನು ಉಪಾಧ್ಯಾಯರುಗಳಿಗೆ ನೀಡಬೇಕೆಂದಿರುವಾಗ ಆ ಕುರಿತು ಶಿಕ್ಷಣ ಶಿಕ್ಷಣ ಸಚಿವರಾಗಿದ್ದ ಶ್ರೀ ಅಣ್ಣಾರಾವ್ ಗಣಮುಖಿರೊಂದಿಗೆ ನಡೆಸಿದ ಸಂಭಾಷಣೆಯಲ್ಲಿ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ:** ಕೇಂದ್ರ ಸರ್ಕಾರದವರು ಟ್ರಿಪಲ್ ಬೆನಿಫಿಟ್ ಸ್ಕೀಮನ್ನು ಉಪಾಧ್ಯಾಯರುಗಳಿಗೆ ಕೊಡಬೇಕೆಂದು, 1960-61ನೇ ಇಸವಿಯಲ್ಲಿ ಯಾವಾಗಲಾದರೂ ನಮೂದು ಮಾಡಿದ್ದಾರೆಯೇ? ರಾಜ್ಯ ಸರ್ಕಾರದವರೊಂದಿಗೆ ಆ ವಿಷಯದಲ್ಲಿ ಪತ್ರ ವ್ಯವಹಾರವನ್ನು ಮಾಡಿದ್ದಾರೆಯೇ?

**ಶ್ರೀ ಅಣ್ಣಾರಾವ್ ಗಣಮುಖಿ:** ಆ ತರಹ ಆದೇಶವನ್ನು ಕೇಂದ್ರ ಸರ್ಕಾರದವರು ಯಾವುದು ಮಾಡಿಲ್ಲ.

2. 20.3.1961ರಂದು ನಡೆದ ಚರ್ಚೆಯಲ್ಲಿ

ಶ್ರೀ **ಎಂ.ಪಿ.ಎಲ್. ಶಾಸ್ತ್ರಿ:** ಟ್ರೆಫಲ್ ಬೆನಿಫಿಟ್ ಸ್ಕೀಂ ಮಾಡುವುದಕ್ಕೆ ಸಾಧ್ಯವಾಗುತ್ತದೆಯೇ? ಅದರ ಬಗ್ಗೆ ನಿಮ್ಮ ಅಭಿಪ್ರಾಯ ಏನು ಎಂದು ಕೇಂದ್ರ ಸರ್ಕಾರದ ವಿದ್ಯಾಶಾಖಾ ಸಚಿವರು ರಾಜ್ಯ ಸರ್ಕಾರದವರೊಂದಿಗೆ ಪತ್ರ ವ್ಯವಹಾರ ಮಾಡಿದ್ದಾರೆಯೇ?

ಶ್ರೀ **ಅಣ್ಣಾರಾವ್ ಗಣಮುಖಿ:** ಅದರ ಬಗ್ಗೆ ನಮ್ಮ ಅಭಿಪ್ರಾಯ ಏನು ವಿಚಾರ ಮಾಡಿದಿರಿ ಎಂದು ಕೇಳಿದ್ದಾರೆ.

ಶ್ರೀ **ಎಂ.ಪಿ.ಎಲ್. ಶಾಸ್ತ್ರಿ:** ರಾಜ್ಯ ಸರ್ಕಾರದವರು ಏನಾದರೂ ಶಿಫಾರಸ್ಸು ಮಾಡಿದ್ದಾರೆಯೇ? ಅವರ ಅಭಿಪ್ರಾಯವನ್ನು ಸೂಚನೆ ಮಾಡಿದ್ದಾರೆಯೇ?

ಶ್ರೀ **ಅಣ್ಣಾರಾವ್ ಗಣಮುಖಿ:** ಇನ್ನೂ ಮಾಡಿಲ್ಲ.

ಶ್ರೀ **ಎಂ.ಪಿ.ಎಲ್. ಶಾಸ್ತ್ರಿ:** ಟ್ರೆಫಿಲ್ ಬೆನಿಫಿಟ್ ಸ್ಕೀಂ ಎನ್ನತಕ್ಕ ಯೋಜನೆ 1961–62ನೇ ಇಸವಿಯಿಂದ ಮೈಸೂರು ರಾಜ್ಯದಲ್ಲಿ ಜಾರಿಗೆ ಬರುವುದಕ್ಕೆ ಅನುಕೂಲವಾಗುತ್ತದೆಯೇ?

ಶ್ರೀ **ಅಣ್ಣಾರಾವ್ ಗಣಮುಖಿ:** ಉತ್ತರ ಕಳುಹಿಸಿದಾಕ್ಷಣಕ್ಕೇ ಹೇಗೆ ಅನುಕೂಲವಾಗುತ್ತದೆ?

ಶ್ರೀ **ಎಂ.ಪಿ.ಎಲ್. ಶಾಸ್ತ್ರಿ:** ಜಾಗ್ರತೆಯಾಗಿ ಅದಕ್ಕೆ ಉತ್ತರವನ್ನು ಕಳುಹಿಸಿಕೊಟ್ಟು ಅನುಕೂಲವಾಗುವ ಹಾಗೆ ಅದನ್ನು ಪರಿಶೀಲನೆ ಮಾಡುತ್ತೀರಾ?

ಶ್ರೀ **ಅಣ್ಣಾರಾವ್ ಗಣಮುಖಿ:** ಆ ವಿಷಯದಲ್ಲಿ ಇನ್ನೂ ವಿಚಾರ ಮಾಡುತ್ತಿದ್ದೇವೆ.

ಶ್ರೀ **ಎಂ.ಪಿ.ಎಲ್. ಶಾಸ್ತ್ರಿ:** ಎಷ್ಟು ಕಾಲದಲ್ಲಿ ಅಧ್ಯಾಪಕ ವರ್ಗಕ್ಕೆ ಈ ವಿಧವಾದ ಬೆನಿಫಿಟ್ ಕೊಡುವ ಯೋಜನೆಯನ್ನು ಸರ್ಕಾರದವರು ಕೈಗೊಳ್ಳುತ್ತಾರೆ.

ಶ್ರೀ **ಅಣ್ಣಾರಾವ್ ಗಣಮುಖಿ:** ಹಣಕಾಸಿನ ಕಷ್ಟವಿರುವ ಕಾರಣ ಅದನ್ನು ಪರಿಶೀಲನೆ ಮಾಡುತ್ತಿದ್ದೇವೆ.

ಶ್ರೀ **ಬಿ.ವಿ. ಬಸುಮಯ್ಯ:** ಸಂಬಳ ಸಾರಿಗೆಯನ್ನು ಪುನರ್‌ವಿಮರ್ಶೆ ಮಾಡತಕ್ಕ ಸಮಿತಿಯವರು ಈ ಬಗ್ಗೆ ಏನಾದರೂ ಸೂಚನೆಯನ್ನು ಕೊಟ್ಟಿದ್ದಾರೆಯೇ ಫೈನಾನ್ಸಿಯಲ್ ಡಿಫಿಕಲ್ಟಿ ಏನು ಎಂದು ಯೋಚಿಸಿ ಏನಾದರೂ ಸೂಚನೆಯನ್ನು ಕೊಟ್ಟಿದ್ದಾರೆಯೇ?

ಶ್ರೀ **ಅಣ್ಣಾರಾವ್ ಗಣಮುಖಿ:** ಅದು ದುಸ್ತರ ಪ್ರಶ್ನೆ ಇದೆ, ಫೈನಾನ್ಸಿಯಲ್ ಲಯಬಿಲಿಟೀಸ್ ಹೆಚ್ಚಾಗುತ್ತದೆ. ಅದಕ್ಕಾಗಿ ಯಾವ ನಿರ್ಣಯವನ್ನು ಒಪ್ಪಿಕೊಳ್ಳಬಹುದು ಅಥವಾ ಒಪ್ಪಿಕೊಳ್ಳಬಾರದು ಎಂದು ಅವರು ಹೇಳಲಿಲ್ಲ.

ಶ್ರೀ **ಬಿ.ವಿ. ಬಸುಮಯ್ಯ:** ಸಂಬಳ ಸಾರಿಗೆಯನ್ನು ಪುನರ್ ವಿಮರ್ಶೆ ಮಾಡತಕ್ಕ ಸಮಿತಿಯವರು ಕೊಟ್ಟಿರತಕ್ಕ ವರದಿಯ ಮೇಲೆ ಸರ್ಕಾರದವರು ಮಾಡಿರುವ ಆಜ್ಞೆಯಲ್ಲಿ ಟ್ರೆಫಲ್ ಬೆನಿಫಿಟ್ ಸ್ಕೀಂ ವಿಮರ್ಶಿತವಾಗುತ್ತದೆ ಎಂದು ನಮೂದಾಗಿದೆಯೇ?

**ಶ್ರೀ ಅಣ್ಣಾರಾವ್ ಗಣಮುಖಿ:** ಆ ವಿಚಾರದಲ್ಲಿ ಶಿಫಾರಸ್ಸು ಬಂದಾಗ ವಿಚಾರ ಮಾಡಿ ಅದನ್ನು ಪರಿಶೀಲನೆ ಮಾಡೋಣ ಎಂದು ಈ ವಿಚಾರದಲ್ಲಿ ಏನೂ ನಿರ್ಣಯವನ್ನು ತೆಗೆದುಕೊಂಡಿಲ್ಲ.

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ:** ಈ ನಿರ್ಣಯವು ನೆರೆ ರಾಜ್ಯವಾದ ಆಂಧ್ರ ಮತ್ತು ಮದ್ರಾಸ್ಸು ರಾಜ್ಯಗಳಲ್ಲಿ ಅನುಕ್ರಮವಾಗಿ ಬಂದಿದೆ ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ?

**ಶ್ರೀ ಅಣ್ಣಾರಾವ್ ಗಣಮುಖಿ:** ಮದ್ರಾಸಿನಲ್ಲಿ ಮೊದಲಿನಿಂದಲೂ ಇದೆ. ಆಂಧ್ರದಲ್ಲಿ ಜಾರಿಗೆ ಬಂದಿದ್ದು ನನಗೆ ಗೊತ್ತಿಲ್ಲ. ತಮಗೆ ಗೊತ್ತಿದ್ದರೂ ಇರಬಹುದು.

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ:** ಬಹಳ ವರ್ಷಗಳಿಂದ ಉಪಾಧ್ಯಾಯರುಗಳು ಈ ಬಗ್ಗೆ ಮನವಿಗಳನ್ನು ಮಾಡಿರುವುದರಿಂದ ಕೊನೆಯ ಪಕ್ಷ 1961–62ನೇ ಇಸವಿಯೊಳಗಾಗಿ ಇದನ್ನು ಜಾರಿಗೆ ತರುವುದಕ್ಕೆ ಪ್ರಯತ್ನ ಮಾಡುತ್ತೀರಾ?

**ಶ್ರೀ ಅಣ್ಣಾರಾವ್ ಗಣಮುಖಿ:** ಅದು ಇನ್ನೂ ಪರಿಶೀಲನೆಯಲ್ಲಿದೆ. ಆದ್ದರಿಂದ ಅದನ್ನು ಇಷ್ಟೆ ಸಮಯದಲ್ಲಿ ಮಾಡುತ್ತೇವೆ ಎಂದು ನಿರ್ದಿಷ್ಟವಾಗಿ ಹೇಳುವುದಕ್ಕಾಗುವುದಿಲ್ಲ;

– * –

# VII. ಆಹಾರ ಧಾನ್ಯಗಳ ಸಮಸ್ಯೆಗಳ ಸಂಬಂಧವಾಗಿ ಪ್ರೊ: ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

## 1. ಮೈಸೂರು ಸ್ಟೇಟ್ ವೇರ್‌ಹೌಸ್ ಬಿಲ್ 1960 ರ ಕುರಿತಂತೆ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ)** : ಮಾನ್ಯ ಸಭಾಪತಿಯವರೇ,

ಮೈಸೂರು ರಾಜ್ಯದಲ್ಲಿ ಮಳಿಗೆಗಳ ಸಂಬಂಧಪಟ್ಟ 1958ನೆಯ ಇಸವಿಯ ವಿಧೇಯಕವನ್ನು ನಮ್ಮ ರಾಜ್ಯ ಒಟ್ಟಾದ ಮೇಲೆ ಏಕರೂಪವಾಗಿರತಕ್ಕ ಶಾಸನವನ್ನು ಪಡೆಯುವುದಕ್ಕೆ ತರುತ್ತಿದ್ದೇವೆಂದು ಉದ್ದೇಶ ಮತ್ತು ಕಾರಣಗಳ ವಿವರದಲ್ಲಿ ಕೊಟ್ಟಿದ್ದಾರೆ. ಈ ಏಕರೂಪವಾದ ಶಾಸನವನ್ನು ಮಾಡುತ್ತೇವೆಂದು ಹೇಳುವುದು, ಸಾಮಾನ್ಯವಾಗಿ ಸರ್ಕಾರ ಪ್ರತಿಯೊಂದು ಇಂಥಾ ವಿಧೇಯಕ ಅಥವಾ ಮಸೂದೆಯನ್ನು ಮುಂದಿಡುವಾಗಲೆಲ್ಲ ಹೇಳತಕ್ಕ ಪಲ್ಲವಿಯಾಗಿದೆ. ಇದು ನಿಜವಾಗಿಯೂ ಏಕಮುಖಿವಾಗಿರತಕ್ಕ ಶಾಸನಕ್ಕಾಗಿ ಈ ವಿಧೇಯಕವನ್ನು ತರಬೇಕಾದ್ದಿರಲಿಲ್ಲ. ಇದುವರೆವಿಗೂ ನಮ್ಮ ದೇಶದ ನಾನಾ ಭಾಗಗಳಲ್ಲಿರತಕ್ಕ ಮಳಿಗೆಗಳಿಗೆ ಸಂಬಂಧಪಟ್ಟ ಮಸೂದೆಗಳು ಅಥವಾ ಕಾನೂನುಗಳು ಏನಿವೆಯೋ ಅವೇ ಸಾಕು. 1958ರಲ್ಲಿ ಇಂಡಿಯಾ ಸರ್ಕಾರದಿಂದ ಪಾರ್ಲಿಮೆಂಟಿನ ಕಾನೂನು ಪ್ರಕಾರ Central and State Warehouses Corporations ಗೆ ಸಂಬಂಧಪಟ್ಟ ಒಂದು ವಿಧೇಯಕವಾಯಿತು. ಆ ವಿಧೇಯಕದ ಪರಿಸ್ಥಿತಿಗನುಗುಣವಾಗಿ ಕೇಂದ್ರ ಸರ್ಕಾರದಲ್ಲಿ ಒಂದು ಕಾನೂನು ಬಂದಿದೆ: ಹಾಗೆಯೇ ಪ್ರಾಂತ ಸರ್ಕಾರಗಳಲ್ಲಿ ರಾಜ್ಯಗಳಲ್ಲಿ ಈ ವಿಧವಾದ ಕಾನೂನು ಬರಬೇಕಾದ ಅಗತ್ಯವಿದೆ. ಉದ್ದೇಶ ಮತ್ತು ಕಾರಣಗಳ ವಿವರಗಳನ್ನು ಕೊಡುವುದರಲ್ಲಿ ಮಂತ್ರಿಯವರು ನಮ್ಮಲ್ಲಿ ಇದುವರೆಗೂ 1956ನೆಯ ಇಸವಿ ಕಾನೂನಿನ ಪ್ರಕಾರ State Warehousing Corporation ಎಂದು ಮಾಡಿದ್ದೇವೆ. ಹಾಗೆ ಮಾಡಿರುವುದರಿಂದ ಈ ವಿಧೇಯಕದ ಅಗತ್ಯ ಬಂದಿದೆ ಎಂದು ಹೇಳಿದ್ದಾರೆ. ಒಂದು ಕಾನೂನನ್ನು ರಚನೆಮಾಡಿ ಆದಾದಮೇಲೆ ಇಂಥ ಕಾರ್ಪೊರೇಷನನ್ನು ಸ್ಥಾಪನೆ ಮಾಡುವುದರ ಬದಲು "ಗಾಡಿಗೆ ಹಿಂದೆ ಕುದುರೆಯನ್ನು ಕಟ್ಟಿದರು" ಎಂದು ಇಂಗ್ಲೀಷಿನಲ್ಲಿ ಒಂದು ನಾಣ್ಣುಡಿಯನ್ನು ಹೇಳುತ್ತಾರಲ್ಲ – ಆ ತರಹ ಈ ವಿಧೇಯಕ ಬಂದಿದೆ ಮತ್ತು ಕಾರ್ಪೊರೇಷನ್ ಸ್ಥಾಪನೆ ಮೈಸೂರು ರಾಜ್ಯದಲ್ಲಿ ಆಗಿದೆಯೆಂದು ನನಗಾದರೂ ಅನ್ನಿಸುತ್ತದೆ.

ಮೈಸೂರು ರಾಜ್ಯದಲ್ಲಿ ಸ್ಟೇಟ್ ವೇರ್ ಹೌಸಿಂಗ್ ಕಾರ್ಪೊರೇಷನ್ ಪ್ರಾರಂಭವಾಗಿದ್ದ ಪಕ್ಷದಲ್ಲಿ ಅದು ಈ ಎರಡು ವರ್ಷಗಳಲ್ಲಿ ಏನು ಕೆಲಸ ಮಾಡಿದೆ ಎನ್ನುವುದನ್ನು ಮಂತ್ರಿಗಳು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಅಷ್ಟನ್ನೆ ಕೊಡಿಸಿದ್ದರೆ ಬಹಳ ಚೆನ್ನಾಗಿತ್ತು ಎಂದು ನಾನು ಅಂದುಕೊಂಡಿದ್ದೇನೆ. ಏಕೆಂದರೆ 1958ನೆಯ ಇಸವಿಯಲ್ಲಿ ಪಾರ್ಲಿಮೆಂಟಿನಲ್ಲಿ ಅದಂಥ ಕಾನೂನು ಪ್ರಕಾರ ಎರಡು ವಿಧವಾದ Ware housing corporations ಅಸ್ತಿತ್ವಕ್ಕೆ ಬರಬೇಕಾಯಿತು. ಒಂದು, ಇಂಡಿಯಾ

---

1. ಮೈಸೂರು ಸ್ಟೇಟ್ ವೇರ್‌ಹೌಸ್ ಬಿಲ್ 1960ರ ಕುರಿತಂತೆ 1.9.1960ರಂದು ನಡೆದ ಚರ್ಚೆಯಲ್ಲಿ

ಕೇಂದ್ರ ಸರ್ಕಾರಕ್ಕೆ ಅನ್ವಯಿಸತಕ್ಕದ್ದು ಮತ್ತು ಇದಕ್ಕಾಗಿ ಸುಮಾರು ಹತ್ತು ಕೋಟಿ ರೂಪಾಯಿಗಳ ಬಂಡವಾಳವನ್ನು ಇಂಡಿಯಾ ಸರ್ಕಾರದವರು ಮೀಸಲಾಗಿಟ್ಟಿದ್ದಾರೆ. ಇನ್ನು 13 ರಾಜ್ಯಗಳಲ್ಲಿ ಭಾರತ ಸರ್ಕಾರ ನಿರ್ವಾಹ ಮಾಡಬೇಕಾಗಿರುವುದು ಇದುವರೆಗೂ 105 ಮಳಿಗೆಗಳನ್ನು ಕಟ್ಟಿದ್ದಾರೆ ಅಥವಾ ಕಟ್ಟಬೇಕಾಗಿದೆ ಎನ್ನುವುದನ್ನು ಕೂಡ ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಕೇಂದ್ರ ಮಂತ್ರಿಗಳ ಪ್ರಸ್ತಾಪ ಮಾಡಿದ್ದಾರೆ.

ಹೀಗೆ 105 ಮಳಿಗೆಗಳನ್ನು ಕಟ್ಟಬೇಕೆಂದು ಹೇಳಿದ್ದಾರೆ. ಹೀಗೆ ಹೇಳಿರತಕ್ಕ ಈ ವೇರ್ ಹೌಸುಗಳ ಪೈಕಿ ಈಗಾಗಲೇ ಮೈಸೂರು ರಾಜ್ಯದಲ್ಲಿ ಎಷ್ಟು ಇಂಥ ಮಳಿಗೆಗಳನ್ನಾಗಲೀ ಕಟ್ಟಿಸಲಾಗಿದೆ. ಇನ್ನೆಷ್ಟು ಮಳಿಗೆಗಳನ್ನು ಕಟ್ಟಿಸಬೇಕಾಗಿದೆ ಎಂಬ ಯಾವುದೊಂದು ವಿಚಾರವನ್ನೂ ಮಾನ್ಯ ಮಂತ್ರಿಗಳು ತಮ್ಮ ಪ್ರಾರಂಭದ ಭಾಷಣದಲ್ಲಿ ಅಪ್ಪಣೆ ಕೊಡಿಸಿರುವುದಿಲ್ಲ. ಆದರೆ ಈ ಮಸೂದೆಯ ಉದ್ದೇಶ ಬಹಳ ಯೋಗ್ಯವಾಗಿದೆ ಎಂಬುದರಲ್ಲಿ ಸಂದೇಹವೇನೂ ಇಲ್ಲ. ಇಂತ ಮಸೂದೆ ದೇಶದ ಎಲ್ಲ ಭಾಗಗಳಿಗೂ ಒಂದು ಸಮನ್ವಯ ರೀತಿಯಲ್ಲಿರಬೇಕಾದುದೂ ಸಹ ಅತ್ಯಗತ್ಯ. ಆಹಾರ ಧಾನ್ಯಗಳನ್ನೂ ಮತ್ತು ಪಶುಗಳಿಂದ ಪಡೆಯತಕ್ಕ ವಸ್ತುಗಳನ್ನೂ ಮತ್ತು ಇನ್ನೂ ಮಿಕ್ಕ ವಸ್ತುಗಳನ್ನು ಅವುಗಳನ್ನು ಮಾರಾಟ ಮಾಡುವುದಕ್ಕೆ ಮುಂಚಿತವಾಗಿ ಕೆಲವು ದಿನಗಳವರೆಗೆ ಸುಭದ್ರವಾಗಿಡಲು ಈ ವೇರ್‌ಹೌಸುಗಳು ಬಹಳ ಅಗತ್ಯವೆಂಬುದಾಗಿ ಹೇಳಿದ್ದಾರೆ. ಅವರೆ ಈ ಸಂಬಂಧದಲ್ಲಿ ಅನುಸರಿಸಬೇಕೆಂದು ಹೇಳಿರತಕ್ಕ ಕ್ರಮವೇನಿದೆ ಅದು ಕ್ರಮಬದ್ಧವಾಗಿಲ್ಲ. ಅದು ಅಸಂಬದ್ಧವಾಗಿದೆ ಎನ್ನತಕ್ಕ ವಿಚಾರದಲ್ಲಾಗಲೇ ನನ್ನ ಅನೇಕ ಮಿತ್ರರು ಮಾತನಾಡಿದ್ದಾರೆ. ಈ ಮಳಿಗೆಗಳಲ್ಲಿ ದಾಸ್ತಾನಿಡಬಹುದಾದ ಪದಾರ್ಥಗಳಲ್ಲಿ ಉಣ್ಣೆ, ಬೆಣ್ಣೆಗಳೆರಡನ್ನೂ ಸೇರಿಸಿದ್ದಾರೆ. ಹೀಗೆ ಅಸಂಬದ್ಧವಾದುದನ್ನು ಸೇರಿಸಿರುವುದು ಎಷ್ಟು ಅನುಚಿತವಾಗಿದೆ ಎಂಬುದಾಗಿ ಅನೇಕ ಮಾನ್ಯ ಸದಸ್ಯರು ಪ್ರಶ್ನೆ ಮಾಡಿದ್ದಾರೆ. ದೇಶಾದ್ಯಂತವೂ ಒಂದು ಏಕಮುಖವಾದ ಕಾನೂನನ್ನು ಜಾರಿಗೆ ತರಬೇಕೆಂದು ಹೇಳುತ್ತಿರುವ ಕಾಲದಲ್ಲಿ ಮೈಸೂರು ರಾಜ್ಯದಲ್ಲಿ ಜನಜೀವನದಲ್ಲಿ ಒಂದು ಏಕಮುಖವಾದ ಭಾವನೆ, ಆಲೋಚನೆ ಬಾರದೆ ಇರುವಾಗ ಇಂಥ ಏಕಮುಖವಾದ ಕಾನೂನನ್ನು ತರುವುದು ಅಸಂಬದ್ಧವಾಗುತ್ತದೆ ಮತ್ತು ಇಂಥ ಕಾನೂನು ಸಹ ಒಂದು ಅಸಂಬದ್ಧ ಕಾನೂನಾಗುತ್ತದೆ. ಈ ಮಸೂದೆಯಲ್ಲಿ – ಎಂದರೆ ಅನುಸೂಚಿಯಲ್ಲಿ ಈ ಮಳಿಗೆಗಳಲ್ಲಿಡತಕ್ಕ ವಸ್ತುಗಳು ಯಾವುವು ಎಂಬ ಕಡೆ "ಪಶು ಸಂಗೋಪನೆ ಉತ್ಪನ್ನಗಳು" ಎಂದು ತಿಳಿಸಲಾಗಿದೆ. ನನಗೆ ಗೊತ್ತಿರುವ ಮಟ್ಟಿಗೆ "ಪಶು ಸಂಗೋಪನೆ" ಎಂದರೆ ಪಶು ಸಂರಕ್ಷಣೆ ಎಂದು ಅರ್ಥವಾಗುತ್ತದೆ. ಆದರೆ ಅದನ್ನು ಬಿಟ್ಟು "ಪಶು ಸಂಗೋಪನೆ" ಎಂದರೆ ಅದರಿಂದೇನು ಉತ್ಪತ್ತಿ ಆಗುತ್ತದೆಯೋ ಅದು ನನಗಂತೂ ಇಲ್ಲಿಯವರೆಗೂ ಗೊತ್ತಿರುವುದಿಲ್ಲ. ಆಕಳನ್ನು ಸಂಗೋಪನೆ ಮಾಡಿದರೆ ಸ್ವರ್ಗ ಪ್ರಾಪ್ತಿಯಾಗುತ್ತೆ ಎಂದು ಹೇಳಿದ್ದಾರೆ. ಹೀಗೆಲ್ಲ ಹೇಳುತ್ತಿರುವಾಗ ನಮ್ಮ ರಾಜ್ಯದ ಮೈದಾನ ಪ್ರದೇಶದಲ್ಲಿ ಮತ್ತು ಮಲೆನಾಡು ಪ್ರದೇಶದಲ್ಲಿ ಯಾವ ಯಾವ ವಸ್ತುಗಳನ್ನು ಮತ್ತು ಯಾವ ಯಾವ ಆಹಾರ ಪದಾರ್ಥಗಳನ್ನು ಬೆಳೆಯಲಾಗುತ್ತದೆ. ಈ ಪೈಕಿ ಯಾವ ವಸ್ತುಗಳನ್ನು ಈ ಮಳಿಗೆಗಳಲ್ಲಿಡಲು ಲೈಸನ್ಸನ್ನು ಕೊಡಬೇಕು, ಯಾವ ಪದಾರ್ಥಗಳನ್ನಿಡಲು ಅಂಥಾ ಲೈಸನ್ಸನ್ನು ಕೊಡಬಾರದು ಎನ್ನತಕ್ಕ

ವಿಚಾರವನ್ನು ಇಲ್ಲಿ ಅಸ್ಪಷ್ಟವಾಗಿ ತಿಳಿಸಿದ್ದಾರೆ. ಆದುದರಿಂದ ಈ ವಿಚಾರದಲ್ಲಿ ನಮ್ಮ ಸರ್ಕಾರದವರಿಗೇ ಸಾಕಷ್ಟು ಅನುಭವವಿಲ್ಲವೆಂಬುದು ಇದರಿಂದಲೇ ವೇದ್ಯವಾಗುತ್ತದೆ. ನಮ್ಮ ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ಬೆಳ್ಳುಳ್ಳಿ, ಹತ್ತಿ, ಮೆಣಸಿನ ಕಾಯಿ ಇತ್ಯಾದಿ ವಸ್ತುಗಳನ್ನು ಬೆಳೆಯಲಾಗುತ್ತಿದೆ. ದಕ್ಷಿಣಕ್ಕೆ ಬಂದರೆ ಕೋಲಾರ–ತುಮಕೂರು ಇತ್ಯಾದಿ ಜಿಲ್ಲೆಗಳಲ್ಲಿ ವಿಶೇಷವಾಗಿ ಬೆಳೆಯತಕ್ಕ ಪದಾರ್ಥವೆಂದರೆ ಅದು ಆಲೂಗಡ್ಡೆ. ಈ ಬೆಳೆಗಾರರಿಗೆ ಅದನ್ನು ಮಾರಾಟ ಮಾಡುವ ಮುನ್ನ ಈ ವೇರ್ ಹೌಸುಗಳ ಅಗತ್ಯ ಅವಶ್ಯಕವಾಗಿ ಬೇಕಾಗಿದೆ. ಇದೇ ರೀತಿ ಕೋಲಾರ–ಮೈಸೂರು ಜಿಲ್ಲೆಗಳಲ್ಲಿ ರೇಷ್ಮೆ ವ್ಯವಸಾಯ ವಿಶೇಷವಾಗಿ ನಡೆಯುತ್ತಿದೆ. ಈ ಬೆಳೆಗೆ ರೇಷ್ಮೆ ಗೂಡುಗಳು ಬಹಳ ಅತ್ಯಗತ್ಯ. ಇಂಥ ರೇಷ್ಮೆ ಗೂಡುಗಳನ್ನು ರೇಷ್ಮೆ ವ್ಯವಸಾಯಗಾರರಿಗೆ ಮಾರಾಟ ಮಾಡುವ ಪೂರ್ವಭಾವಿಯಾಗಿ 2–3 ದಿವಸಗಳ ತನಕ ಈ ಗೂಡುಗಳನ್ನು ದಾಸ್ತಾನಿಡಲು ವೇರ್‌ಹೌಸ್‌ಗಳು ಬಹಳ ಅತ್ಯವಶ್ಯಕ. ಹೀಗೆ ಆ ಆಲೂಗಡ್ಡೆ ಬೆಳೆಯತಕ್ಕ ರೈತರೂ ಮತ್ತು ರೇಷ್ಮೆ ಬೆಳೆಗಾರರೂ ಇಂಥ ಮಳಿಗೆಗಳ ಅಗತ್ಯವನ್ನು ಬಹಳವಾಗಿ ಆಶಿಸುತ್ತಾರೆ.

ಹೀಗೆ ಇನ್ನೂ ಹೇಳುವುದಾದರೆ – ನಮ್ಮ ರಾಜ್ಯದ ಮಡಿಕೇರಿ ಮತ್ತು ಕೊಡಗು ಈ ಪ್ರದೇಶದಲ್ಲಿ ಜೇನು ತುಪ್ಪದ ಶೇಖರಣೆ ಬಹಳವಾಗಿ ನಡೆಯುತ್ತದೆ. ಅವರಿಗೂ ಸಹ ಈ ಮಳಿಗೆಗಳ ಅಗತ್ಯ ಬಹಳವಾಗಿದೆ. ಆದರೆ ಈ ಮಸೂದೆಯಲ್ಲಿ ಆಲೂಗಡ್ಡೆ, ರೇಷ್ಮೆ ಗೂಡು ಮತ್ತು ಜೇನುತುಪ್ಪ ಇಂಥ ಪದಾರ್ಥಗಳನ್ನಿಡಲು ನಮ್ಮ ಸರ್ಕಾರದವರು ಯಾವ ಆಲೋಚನೆಯನ್ನೂ ಮಾಡಿರುವುದಿಲ್ಲವೆಂಬುದಾಗಿ ಈ ಮಸೂದೆಯೇ ತಿಳಿಸುತ್ತಿದೆ. ಆದರೆ ನಮ್ಮ ಸರ್ಕಾರದವರು ದೇಶಾದ್ಯಂತವೂ ಒಂದು ಏಕಮುಖವಾದ ಕಾನೂನನ್ನು ಜಾರಿಗೆ ತರಬೇಕೆಂದು ಪದೇ ಪದೇ ಉಪದೇಶ ಮಾಡುತ್ತಿರುವ ಕಾಲದಲ್ಲಿಯೇ ಜನರಲ್ಲಿ ಒಂದು ಏಕಮುಖವಾದ ಅಭಿಪ್ರಾಯವಿಲ್ಲದೆ, ಭಿನ್ನಭಿನ್ನಾಭಿಪ್ರಾಯಗಳಿಂದ ಕೂಡಿರುವಾಗ – ಎಂದರೆ ರಾಜ್ಯ ವಿಲೀನೀಕರಣವಾಗಿ ಇಲ್ಲಿಗೆ 3–4 ವರ್ಷಗಳಾಗಿದ್ದಾಗೂ ಜನರನ್ನೂ ಒಂದು ಏಕಮುಖಾಭಿಪ್ರಾಯಕ್ಕೆ ಬಾರದಿರುವಾಗ ಈ ಮಸೂದೆಯೆಂದೇನು ಪ್ರಯೋಜನವಾಗುತ್ತದೆಯೋ ಅದು ನನಗೆ ತಿಳಿಯದು.

ಇನ್ನು ಈ ಪಶು ಸಂಗೋಪನೆ ವಿಷಯಕ್ಕೆ ಬಂದರೆ ಗೋವಿನಿಂದ ಪಡೆಯತಕ್ಕ ವಸ್ತುವಿಗೆ 'ಗೌಪ್ಯ' ಎಂದು ಹೇಳಬಹುದು. ಈ ಪದಾರ್ಥವಾದರೂ ದೇಶದ ಯಾವ ಯಾವ ಭಾಗದಲ್ಲಿ ಎಷ್ಟೆಷ್ಟರ ಮಟ್ಟಿಗೆ ಇದು ಉತ್ಪನ್ನವಾಗುತ್ತದೆಯೆಂಬ ವಿಚಾರ ಸರ್ಕಾರದವರಿಗೇ ಸಂಪೂರ್ಣವಾಗಿ ಗೊತ್ತಿಲ್ಲದೆ ಇರುವಾಗ ಇನ್ನು ಸರ್ಕಾರದವರು ತರಬೇಕೆಂದಿರುವ ಈ ಕಾನೂನಿನಿಂದ ದೇಶದ ಜನರಿಗೇನೂ ಪ್ರಯೋಜನವಾಗಲಾರದೆಂಬುದು ಮೇಲೆಯೇ ಕಾಣುತ್ತಿದೆ. ಇಂಥ ಒಂದು ಕಾನೂನನ್ನು ತರುವ ಮುನ್ನ ಸರ್ಕಾರದವರು ಇದಕ್ಕೆ ಅಗತ್ಯವಾದ ಪೂರ್ವ ಸಿದ್ಧತೆಗಳನ್ನೆಲ್ಲ ಮಾಡಿಕೊಂಡಿರಬೇಕಾಗಿತ್ತು.

ಆದರೆ ಈಗ ಈ ಮಸೂದೆಯ "ಉದ್ದೇಶಗಳ ಮತ್ತು ಕಾರಣಗಳ" ವಿವರದಲ್ಲಿ ಕೇಂದ್ರ ಸರ್ಕಾರದ ಹಾಗೂ ರಾಜ್ಯ ಸರ್ಕಾರದ ನಿಯಂತ್ರಣದಲ್ಲಿರುವ ಮಳಿಗೆಗಳ ಸಂಬಂಧವಾದ ನಿಗಮಗಳ

ಸ್ಥಾಪನೆಯ ಸಲುವಾಗಿ ಉಪಬಂಧವನ್ನು ಕಲ್ಪಿಸುವ 1956ನೇ ಇಸವಿಯ ವ್ಯವಸಾಯೋತ್ಪನ್ನದ ನಿಗಮಗಳ ಸಂಬಂಧವಾದ ಅಧಿನಿಯಮವನ್ನು ಸಂಸತ್ತಿನವರು ತೀರ್ಣಗೊಳಿಸಿರುತ್ತಾರೆ." ಎಂದು ತಿಳಿಸಿರುತ್ತೆ. ನಾನೂ ಸಹ ಹತ್ತಾರು ವರ್ಷ ಕನ್ನಡ ಹಾಗೂ ಸಂಸ್ಕೃತಾಭ್ಯಾಸವನ್ನು ಮಾಡಿದವನಾಗಿದ್ದುಕೊಂಡು, ತಮ್ಮಂಥವರಿಂದ ನಾನು ಈ ಉಭಯ ಭಾಷೆಗಳಲ್ಲಿ ಚೆನ್ನಾಗಿ ಪರಿಶ್ರಮ ಉಳ್ಳವನೆಂಬುದಾಗಿ ಹೇಳಿಸಿಕೊಂಡಿರತಕ್ಕ ನನಗೇ ಈ ಮಸೂದೆಯಲ್ಲಿ ಹೇಳಿರತಕ್ಕ ಕನ್ನಡ ಪದಗಳು ಕಷ್ಟವಾಗಿದ್ದು ಅರ್ಥವಾಗುತ್ತಿಲ್ಲವೆಂದ ಮೇಲೆ ಇನ್ನು ಸಾಮಾನ್ಯ ಜನರ ಪಾಡೇನಾದೀತು. ಆದ ಕಾರಣ ಈ ಮಳಿಗೆಗಳು ಸಂಬಂಧಪಟ್ಟ ಮಸೂದೆಗೆ ಮೊದಲು ಸರ್ಕಾರದವರೊಂದು ಮಳಿಗೆಯನ್ನು ಕಟ್ಟಿಸಿ ಅದರಲ್ಲಿ ಈ ಮಳಿಗೆ ಮಸೂದೆಗಳನ್ನೆಲ್ಲ ಇಟ್ಟು ತನ್ಮೂಲಕ ಕನ್ನಡಿಗರಿಗೆ ಈ ಮಸೂದೆಯ ಭಾಷೆಯಿಂದಾಗತಕ್ಕ ತೊಂದರೆಯನ್ನು ತಪ್ಪಿಸತಕ್ಕದ್ದು ಮೊದಲಾಗಬೇಕು. ಸರ್ಕಾರದವರು ಮೊದಲು ಈ ಕಾರ್ಯವನ್ನು ಮಾಡಿದರೆ ಇದರಿಂದ ಕನ್ನಡ ಜನರಿಗೆ ಆಗ ಏನೂ ತೊಂದರೆಯಾಗುವುದಿಲ್ಲ. ನಮ್ಮ ನಾಡಿನ ಕನ್ನಡ ಜನರ ಮಟ್ಟಿಗೆ ಹೇಳುವುದಾದರೆ "ನಿಗಮ, ಆಗಮ" ಎಂಬ ಎರಡು ಶಬ್ದಗಳಲ್ಲಿ ನಿಗಮ ಎಂಬ ಶಬ್ದಕ್ಕೆ 'ವೇದ' ಎಂದು ಅರ್ಥವಾಗುತ್ತದೆಯೇ ವಿನಾ ಬೇರೆ ಯಾವ ಅರ್ಥವೂ ಆಗುವುದಿಲ್ಲ. ಆದರೆ ಈಗ ಈ ಮಸೂದೆಯಲ್ಲೂ 'ನಿಗಮ' ಎಂಬ ಶಬ್ದವನ್ನು ಬಳಸಲಾಗಿದೆ. ಆದಕಾರಣ ಈಗ ಈ "ವೇದ" ಯಾವುದೋ ಎಲ್ಲಿಂದ ಬಂದಿತೋ ಮತ್ತು ಇದನ್ನು ಎಲ್ಲಿ ಸ್ಥಾಪನೆ ಮಾಡಲು ಹೊರಟ್ಟಿದ್ದಾರೋ ಅದು ಗೊತ್ತಾಗುತ್ತಿಲ್ಲ. ನನಗೆ ಈ ಕನ್ನಡ ಪ್ರತಿಯನ್ನು ಓದಿದಾಗ ಈ ಶಬ್ದ ಮೊದಲು ನನಗೆ ಅರ್ಥವಾಗದೆ ಹೋಯಿತು. ಆಗ ನಾನು ಒಂದು ಇಂಗ್ಲಿಷ್ ಪ್ರತಿಯನ್ನು ಪಕ್ಕದಲ್ಲಿಟ್ಟು ಓದಿದೆನು. ಹೀಗೆ ನಮ್ಮ ಕನ್ನಡ ಮಸೂದೆಗಳನ್ನು ಅರ್ಥಮಾಡಿಕೊಳ್ಳಬೇಕೆಂಬ ಆಶೆಯಿರತಕ್ಕವರು ಇಂಗ್ಲಿಷ್ ಪ್ರತಿಯನ್ನೂ ಕೂಡ ಜೊತೆಯಲ್ಲಿಟ್ಟುಕೊಂಡು ಒದದೆ ಇದ್ದರೆ ಅದು ಯಾರಿಗೂ ಅರ್ಥವಾಗುವುದಿಲ್ಲ. ಹೀಗೆ ಇಲ್ಲಿ Prescribed and appellate authorities ಎಂಬ ಪದಗಳಿಗೆ ಪ್ರಾಧಿಕಾರಿ–ಸ್ವಾಧಿಕಾರಿ ಎಂಬ ಶಬ್ದಗಳನ್ನು ಬಳಸಿದ್ದಾರೆ. ಆದರೆ ಇವರು ಯಾವ ಪ್ರಾಧಿಕಾರಿಯೋ – ಸ್ವಾಧಿಕಾರಿಯೋ ಗೊತ್ತಾಗುತ್ತಿಲ್ಲ. ಏನೇ ಆಗಲೀ ಕನ್ನಡ ನಾಡಿನ ಜನರಿಗೆ ಇಂಥ ಕನ್ನಡ ಭಾಷೆಯಿಂದ ತೊಂದರೆಯಾಗತಕ್ಕದ್ದನ್ನು ತಪ್ಪಿಸಲು ಸರ್ಕಾರದವರು ಕಟ್ಟಿಸಲು ಹೊರಟಿರುವ ಈ ಮಳಿಗೆಗಳಲ್ಲಿ ಮೊದಲು ಈ ಕನ್ನಡ ಬಿಲ್ಲುಗಳನ್ನು ಭದ್ರವಾಗಿಡಿಸಿ ಬೀಗ ಹಾಕಿಸಿದರೆ ಆಗ ಜನರಿಗೆ ಬಹಳ ಅನುಕೂಲವಾಗಬಹುದು.

ನಾನಿನ್ನು ತಮ್ಮಲ್ಲಿ ಒಂದೆರಡು ವಿಷಯಗಳನ್ನು ಮಾತ್ರ ಅರಿಕೆ ಮಾಡಿಕೊಳ್ಳಬೇಕೆಂದಿದ್ದೇನೆ. ಈ ಮಸೂದೆಯಲ್ಲಿ ಅತಿ ವ್ಯಾಪ್ತಿ ಮತ್ತು ಅವ್ಯಾಪ್ತಿ ದೋಷಗಳು ಜಾಸ್ತಿಯಾಗಿವೆ. ಹೀಗೆ ಆತಿವ್ಯಾಪ್ತಿ–ಅವ್ಯಾಪ್ತಿ ದೋಷಗಳಿಂದ ಕೂಡಿರತಕ್ಕ ಕಾನೂನು ಜನ ಬಳಕೆಗೆ ಯೋಗ್ಯವಾದದ್ದಲ್ಲ. ಇಲ್ಲಿ ಎರಡನೇ ಅನುಚ್ಛೇದದಲ್ಲಿ ಮಳಿಗೆಗಳಲ್ಲಿ ಲೈಸನ್ಸ್‌ಗಳನ್ನು ಕೊಡುವುದು ಎಂದರೆ ರಹದಾರಿಗಳನ್ನು ಕೊಡುವುದೆಂದು ಹೇಳಲಾಗಿದೆ. ಇದು ಯಾವ ರಹದಾರಿಯೋ ಅಥವಾ ದಾರಿಯೋ ಸರಿಯಾಗಿ ಅರ್ಥವಾಗುವುದಿಲ್ಲ. ಇಲ್ಲಿ 5ನೇ ಕ್ಲಾಸಿನ (ಡಿ) ಭಾಗದಲ್ಲಿ "ಲೈಸನ್ಸ್‌ನಿನ ಸಂಬಂಧದಲ್ಲಿ ವಿಧಾಯಕ

ಮಾಡಿರತಕ್ಕ ಫೀಜನ್ನು ಅರ್ಜಿದಾರನು ಪಾವತಿ ಮಾಡಿರುವನೇ ಮತ್ತು ವಿಧಾಯಕ ಮಾಡಿರುವ ಯಾವುದಾದರೂ ಜಾಮೀನನ್ನು ಕೊಡಬೇಕಾಗಿದ್ದ ಪಕ್ಷದಲ್ಲಿ ಅದನ್ನು ಸಹ ಕೊಟ್ಟಿರುವನೇ ಎಂಬ ವಿಚಾರ ಇಲ್ಲಿ ಯಾವುದಾದರೂ ಜಾಮೀನು ಎಂದರೇನು ಅರ್ಥ? ಹೀಗೆ (ಬಿ) ನಲ್ಲಿ ಅರ್ಜಿದಾರನಿಗೆ ಶಕ್ತಿಯಿರುವುದೇ ಎಂಬ ವಿಚಾರ" ಎಂದು ಹೇಳಿರುವುದರಲ್ಲಿ ಶಕ್ತಿ ಎಂದರೇನು ಅರ್ಥ? ಶಕ್ತಿ ಎಂದರೆ ಅದೇನು ಅವನ ಯೋಗ್ಯತೆಯಲ್ಲೋ, ದನದಲ್ಲೋ ಬಲದಲ್ಲೋ ಅಥವಾ ರಾಜಕೀಯ ಶಕ್ತಿಯಲ್ಲೋ ಏನು? ಯಾವ ತರಹ ಶಕ್ತಿ? ಇದನ್ನಿನ್ನೂ ತೀರ್ಮಾನ ಮಾಡಬೇಕಾಗಿದೆ. ಸಾಮಾನ್ಯವಾಗಿ ಇಲ್ಲಿ ಮಳಿಗೆಗಳನ್ನಿಡತಕ್ಕ ಮನುಷ್ಯನಿಗೆ ಸಾಲ್ವೆನ್ಸಿ ಮತ್ತು ಪ್ರಾಮಾಣಿಕತೆ ಇವುಗಳೆರಡಿದ್ದರೆ ಸಾಕು. ಅಂಥವನಿಗೆ ಆ Prescribed authority ಲೈಸೆನ್ಸ್‌ನ್ನು ಕೊಡಬಹುದೆಂಬ ಉದ್ದೇಶವಿದರಲ್ಲಿ ಅಡಗಿರುವಂತೆ ಕಂಡುಬರುತ್ತಿದೆ. ಇದೇ ಕ್ಲಾಸಿನಲ್ಲಿ ಮುಂದಕ್ಕೆ ಪರಂತು 1956ನೇ ಇಸವಿಯ ವ್ಯವಸಾಯದ ಉತ್ಪನ್ನದ ಸಾಂಘೀಕ ಸಂಸ್ಥೆಯ ಅಧಿನಿಯಮದ ಮೇರೆಗೆ ಒಂದು ಸಾಂಘೀಕ ಸಂಸ್ಥೆಯಿಂದ ಅರ್ಜಿ ಬಂದಿದ್ದರೆ ಯಾವ ಜಾಮೀನು ಕೊಡಬೇಕಾಗಿರುವುದಿಲ್ಲ. ಎಂದರೆ ಈ ಮಳಿಗೆಗಳು ಸರ್ಕಾರದವರು ಅಧೀನದಲ್ಲಿದ್ದರೂ ಅವುಗಳೇನೂ ಜಾಮೀನನ್ನು ಕೊಡಬೇಕಾಗಿಲ್ಲವೆಂದು ತಿಳಿಸಿರುತ್ತೆ. ಆದರೆ ಖಾಸಗೀ ಜನರಿಗೆ ಮಾತ್ರ ಒಂದು ಸಾಲ್ವೆನ್ಸಿ ಇರಬೇಕೆಂಬುದರ ಅಗತ್ಯವೇನಿದೆ ಇದು ಸಹ ವ್ಯವಸಾಯದ ಉತ್ಪನ್ನಕ್ಕೆ ಸಂಬಂಧಿಸಿದ್ದರೆ ಅನಗತ್ಯವೆಂದೇ ಹೇಳಬೇಕು.

ಇನ್‌ಸಾಲ್ವೆನ್ಸಿ ಇರಬಾರದು ಎಂದು ಹಾಕಿದ್ದಾರೆ. ಅದನ್ನು ಐದನೆಯ ಅನುಚ್ಛೇದದಲ್ಲೂ ತರಬೇಕಾದುದು ಯೋಗ್ಯ. ಈಗ ಪ್ರಿಸ್ಕೈಬ್ ಅಥಾರಿಟಿ ಮತ್ತು ಅಪಲೇಟ್ ಅಥಾರಿಟಿ ಎಂದು ಎರಡು ವಿಧಗಳಿವೆ. ಇನ್ನು ಅಪಲೇಟ್ ಅಥಾರಿಟಿಯಲ್ಲಿ ಎರಡು ವಿಧಾನಗಳಿವೆ. ಒಂದು ಮೊದಲೇ ಲೈಸೆನ್ಸ್ ಗ್ರಾಂಟು ಮಾಡಿದ್ದರೆ ಅದನ್ನು ಕ್ಯಾನ್ಸಲ್ ಮಾಡುವುದು, ಇನ್ನೊಂದು ಲೈಸನ್ಸ್ ಕ್ಯಾನ್ಸಲ್ ಆಗಿದ್ದರೆ ಅದನ್ನು ಮತ್ತೆ ಗ್ರಾಂಟು ಮಾಡುವುದು. ಅದರ ಜೊತೆಗೆ ವೇರ್ ಹೌಸ್‌ಗಳಲ್ಲಿ ಷಾರ್ಟೇಜ್ ಅಥವಾ ಎಕ್ಸೆಸ್ ಬಂದ ಪಕ್ಷದಲ್ಲಿ ಅದರ ತೀರ್ಮಾನ ಮಾಡುವವರು ಅಪಲೇಟ್ ಅಥಾರಿಟಿ ಆಗಿರುತ್ತಾರೆ. ಅವರ ಒಂದು ತೀರ್ಮಾನವೇ ಕೊನೆಯ ತೀರ್ಮಾನವಾಗಿರುತ್ತದೆ. ಆದ್ದರಿಂದ ಎರಡು ವಿಧವಾದ ಅಧಿಕಾರ, ಎಕ್ಸೆಸ್ ಮತ್ತು ಷಾರ್ಟೇಜ್ ತೀರ್ಮಾನ ಮಾಡುವುದು, ಅವರಿಗೆ ಕ್ಯಾನ್ಸಲೇಷನ್ ಆಫ್ ಲೈಸೆನ್ಸ್ ಅಧಿಕಾರ ಕೊಟ್ಟಿರುವುದನ್ನು ಬದಲಾವಣೆ ಮಾಡುವ ಶಕ್ತಿ ಪಡೆದಿರತಕ್ಕ ಅಪ್‌ಲೇಟ್ ಅಥಾರಿಟಿ ಯಾವುದು ಇದೆ ಅದು ಯಾವ ಹುದ್ದೆಗಿಂತ ಕಡಿಮೆಯಾಗಿ ಆಗಿರಬಾರದು ಎಂಬುದನ್ನು ಸ್ಪಷ್ಟಪಡಿಸಬೇಕು. ಶ್ರೀಮಾನ್ ಮಾಲಿ ಮರಿಯಪ್ಪನವರಿಗೆ ಈ ವಿಷಯಗಳೆಲ್ಲಾ ಚೆನ್ನಾಗಿ ಗೊತ್ತು. ಆದ್ದರಿಂದ ಅಪಲೇಟ್ ಅಥಾರಿಟಿ ಆಗಿರುವವರು ಯಾವ ಬ್ಯಾಂಕಿನ ಆಫೀಸರು ಆಗಿರಬೇಕೆಂಬುದನ್ನು ಮೊದಲು ತೀರ್ಮಾನ ಮಾಡಬೇಕೆಂದು ನನ್ನ ಅಭಿಪ್ರಾಯ.

ಇನ್ನು 23ನೆಯ ಅನುಚ್ಛೇದದಲ್ಲಿ ಮಳಿಗೆಗಳಲ್ಲಿ ಕೆಲಸ ಮಾಡುವವರು ಒಂದು ವಿಧವಾದ ಅರ್ಹತೆಯನ್ನು ಪಡೆದಿರಬೇಕೆಂದು ಹೇಳಿದ್ದಾರೆ. ಅಲ್ಲಿರುವವರು ವೇಯರ್ಸ್, ಸ್ಯಾಂಪ್ಲರ್ಸ್ ಮತ್ತು ಗ್ರೇಡರ್ಸ್ ಎಂಬುದಾಗಿ ಹೇಳಿದೆ. ಅದು ಒಂದು ದೃಷ್ಟಿಯಿಂದ ನನಗೆ ಬಹಳ ಸಂತೋಷವಾಯಿತು. ಸಾಮಾನ್ಯವಾಗಿ ಹಿಂದೆ ಈ ವಿಧೇಯಕದ ಪೋರ್ಟ್‌ಫೋಲಿಯೋ ಇಟ್ಟುಕೊಂಡಿದ್ದ ಮಂತ್ರಿಗಳಿಗೆ

ಈ ನಿರುದ್ಯೋಗದ ಹಾವಳಿಯನ್ನು ಪಾರುಮಾಡುವ ಶಕ್ತಿ ಇರಲಿಲ್ಲ. ಆದರೆ ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಮಾಲಿ ಮರಿಯಪ್ಪನವರು ಈಗ ಅಂತಹ ಶಕ್ತಿಯನ್ನು ಪಡೆದಿದ್ದಾರೆಂದು ನನಗನ್ನಿಸಿತು. ಈ ವಿಧೇಯಕದಲ್ಲಿ ಈ ರೀತಿ ಹೇಳಿದೆ. ಇದನ್ನು ತೂಕ ಮಾಡುವವರು, ಅಳತೆ ಮಾಡುವವರು, ಅದರ ರುಚಿ ನೋಡಿರುವವರು ಟೀ ಮತ್ತು ಕಾಫಿ ರುಚಿಯನ್ನು ನೋಡುವ ಹಾಗೆ ನೋಡಬೇಕು. ಈಗ ಅನೇಕ ಜನರನ್ನು ದೊಡ್ಡ ದೊಡ್ಡ ಪಾಶ್ಚಾತ್ಯ ರಾಷ್ಟಗಳಲ್ಲಿ ನೇಮಿಸಿರುತ್ತಾರೆ. ಅದೇ ರೀತಿ ಇಲ್ಲಿ ನಿರುದ್ಯೋಗಿಗಳಿಗೆ ಕೆಲಸ ಕೊಡುವ ಹಾಗೆ ಮಾಡಬೇಕೆಂದು ಇದರಲ್ಲಿ ಹೇಳಿದ್ದಾರೆ. ವಿದ್ಯಾವಂತರ ನಿರುದ್ಯೋಗ ಸಮಸ್ಯೆ ಇದರಿಂದ ಸ್ವಲ್ಪ ಪರಿಹಾರವಾದೀತೇನೋ ಎಂದು ಕೊಂಡಿದ್ದೇನೆ. ಇದರಲ್ಲಿ ನಮೂದಿಸಿರುವ ಹಾಗೆ ವೇಯರ್ಸ್, ಸ್ಯಾಂಪ್ಲರ್ಸ್, ಗ್ರೇಡರ್ಸ್ ಇವರುಗಳಿಗೆ ಒಳ್ಳೆಯ ಟ್ರೈನಿಂಗ್ ದೊರಕುವುದಾದರೆ ಅವರಿಗೆ ಆ ಒಂದು ಅರ್ಹತೆ ಉಂಟು ಮಾಡುವುದಕ್ಕೆ ಸರ್ಕಾರ ಶಕ್ತ ವ್ಯವಸ್ಥೆ ಮಾಡುವುದಾದರೆ, ಆಗ ಅನಕ್ಷರಸ್ಥರಾದ ಆ ಜನರ ಕೈವಾಡ ಬಹಳ ಸೊಗಸಾಗಿರುತ್ತದೆ. ಅವರಷ್ಟು ಚೆನ್ನಾಗಿ ಕೆಲಸ ಮಾಡಬೇಕಾಗಿದ್ದರೆ, ಇಂತಹವರಿಗೆ ಯಾವ ರೀತಿ ಟ್ರೈನಿಂಗ್ ಕೊಡಬೇಕು. ಎಷ್ಟು ಕಾಲ ಟ್ರೈನಿಂಗ್ ಕೊಡಬೇಕೆಂಬುದನ್ನು ಇದರಲ್ಲಿ ಹೇಳಲಿಲ್ಲ. ಅವರಿಗೆ ಇರಬೇಕಾಗಿದ್ದ ಪ್ರಿಸ್ಕ್ರೈಬ್ಡ್ ಕ್ವಾಲಿಫಿಕೇಷನ್ ಅನ್ನೂ ಸಹ ಹೇಳಲಿಲ್ಲ. ವೇಯರ್ಸ್, ಸ್ಯಾಂಪರ್ಸ್ ಮತ್ತು ಗ್ರೇಡರ್ರಿಗೆ ಯಾವ ವಿಧವಾದ ಶಿಕ್ಷಣವನ್ನು ಕೊಡುತ್ತೀರಿ ಎಂಬುದನ್ನು ಸ್ಪಷ್ಟವಾಗಿ ಉತ್ತರ ಹೇಳುವ ಕಾಲದಲ್ಲಿ ವಿಶದಪಡಿಸಿದರೆ ನನಗೆ ಸ್ವಲ್ಪ ಸಮಾಧಾನವಾದೀತು. ಇನ್ನು ಭಾಷೆಯ ದೃಷ್ಟಿಯಿಂದ ಕೆಲವು ನಿಯಮಗಳನ್ನು ಅಲ್ಲಲ್ಲಿ ಸರಿಪಡಿಸಬೇಕಾದ ಅಗತ್ಯವಿದೆ. ಪ್ರಾಯಶಃ ಯಾರಾದರೂ ನಾಲ್ಕೈದು ಜನ ಕಲೆತು ಅವುಗಳನ್ನು ಸರಿಮಾಡಿದರೆ ಮಾನ್ಯ ಸಹಕಾರ ಮಂತ್ರಿಗಳ ಅಧ್ಯಕ್ಷತೆಯಲ್ಲಿಯೇ ಅದು ಯೋಗ್ಯವಾದೀತು. ಅಂತಹ ಕಾನೂನು ಈಗ ಅವಶ್ಯಕವಿದೆ. ಆದರೆ ಅದನ್ನು ಮಾಡತಕ್ಕ ಕಾಲದಲ್ಲಿ ಸರ್ಕಾರ ಒಂದು ವಿಷಯವನ್ನು ತಮ್ಮ ನೆನಪಿನಲ್ಲಿಡಬೇಕಾಗಿದೆ. ಅದು ಏನೆಂದರೆ ಕಾನ್‌ಸ್ಟಿಟ್ಯೂಷನ್ನಿನಲ್ಲಿ ಕೊಟ್ಟಿರತಕ್ಕ ಗ್ಯಾರಂಟಿಗಳಿಗೆ ಆಡಚಣೆ ತರತಕ್ಕ ಕಾನೂನು ಯಾವುದೂ ಬರಬಾರದು. ಆ ತರಹದಲ್ಲಿ ಕಾನೂನಿನ ನಿಯಮಗಳಾವವೂ ಅಡ್ಡಿ ಬರಬಾರದು. ಎಂಬುದಕ್ಕೆ ಈ ವಿಧೇಯಕದಲ್ಲಿ ಸ್ಪಷ್ಟವಾಗಿ ಗಮನ ಕೊಡಬೇಕು. ಏತಕ್ಕೆ ಇದನ್ನು ಹೇಳುತ್ತೇನೆಂದರೆ 19ನೇ ಅನುಚ್ಛೇದದಲ್ಲಿ ಡಿಸ್ಕ್ರಿಮಿನೇಷನ್ ಪ್ರೊಹಿಬಿಟಿಡ್ ಎಂದು ಹೇಳಿದೆ. ಅದು ಬಹಳ ಯೋಗ್ಯವಾಗಿರುವ ಮಾತು. ಇದು ಬಹಳ ಸೊಗಸಾಗಿರತಕ್ಕ ವೇದವಾಕ್ಯ. ಮನುಷ್ಯ ಮನುಷ್ಯನಿಗೆ ವ್ಯಕ್ತಿ ವ್ಯಕ್ತಿಗೆ ಯಾವ ವಿಧವಾದ ಭಿನ್ನ ಭಾವನೆಯನ್ನು ಇದರಲ್ಲಿ ತೋರಿಸಕೂಡದು ಎಂದು ಹೇಳಿದ್ದಾರೆ. ಅದರ ಪ್ರಾವಿಜನ್ಸ್ ಹಾಕಿರುವುದನ್ನು ಸಂಪೂರ್ಣವಾಗಿ ನೋಡಿದರೆ ಅದರಲ್ಲಿ ಒಂದು ಅಂಶವನ್ನು ಹಾಕಿದ್ದಾರೆ. ಅದು ಸಾಧ್ಯವಾದುದಲ್ಲ. ಎರಡು ಪೋರ್ಟ್‌ಫೋಲಿಯಾಗಳನ್ನು ಪಡೆದಿರತಕ್ಕ ಮಂತ್ರಿಗಳು ಕೋ ಆಪರೇಟಿವ್ ಮೂವ್‌ಮೆಂಟನ್ನು ಬೆಳೆಸಬೇಕೆಂಬುದು ಯೋಗ್ಯ. ಆದರೆ ವೇರ್‌ಹೌಸ್ ಆಕ್ಟ್ ಮಾಡುವಾಗ ಡಿಸ್ಕ್ರಿಮಿನೇಷನ್ ಇರಬಾರದು ಎಂದು ಹೇಳಿ ಎರಡನೆಯ ಮಾತಿನಲ್ಲಿ ಕೋ ಆಪರೇಟಿವ್ ಸೊಸೈಟಿಗಳಿಗೆ ಸಂಬಂಧಪಟ್ಟ ಹಾಗೆ ಡಿಸ್ಕ್ರಿಮಿನೇಷನ್ ಇರಬಹುದು ಎಂದು ಹೇಳುವುದು ಅಷ್ಟು ಉಚಿತವಲ್ಲ. ಕೋ ಆಪರೇಟಿವ್ ಮೂವ್‌ಮೆಂಟಿನ ವಿಷಯ ನನ್ನ ಮಾನ್ಯ

ಮಿತ್ರರಾದ ಸಹಕಾರ ಮಂತ್ರಿಗಳಿಗೆ ಸುಮಾರು 16–18 ವರ್ಷಗಳಿಂದಲೂ ಚೆನ್ನಾಗಿ ಗೊತ್ತಿದೆ. ಈ ವಿಧವಾದ ಡಿಸ್ಕ್ರಿಮಿನೇಷನ್‌ಗೆ ಅವಕಾಶ ಕೊಡುವುದು ಯುಕ್ತವಲ್ಲ. ಸಹಕಾರ ತತ್ವ ಸ್ವಪರಿಪೂರ್ಣತೆಯನ್ನೊಳಗೊಂಡಿರಬೇಕು. ಅಲ್ಲಿನ ಜನ ಸ್ವಾವಲಂಬಿಯಾಗಿರಬೇಕು. ತನ್ನ ಕಾಲಿನ ಮೇಲೆ ತಾನು ನಿಲ್ಲುವಂತಿರಬೇಕು. ವಾಲಂಟರಿಯಾಗಿ ಜನ ಸೊಸೈಟಿಗಳಿಗೆ ಸೇರಿ ಅದರ ಬೆಳವಣಿಗೆಗೆ ತಕ್ಕ ಸೌಕರ್ಯಗಳನ್ನು ಗಳಿಸಿಕೊಂಡು ಬರಬೇಕು. ಪರಾವಲಂಬಿಯಾಗಿರುವುದಕ್ಕೆ ಅವಕಾಶ ಕೊಡಕೂಡದು. ಹಾಗೆ ಮಾಡಿದ್ದೇ ಆದರೆ ಕೋ ಆಪರೇಟಿವ್ ಸೊಸೈಟಿಗಳಿಗೆ ಹೆಚ್ಚಿನ ಅನ್ಯಾಯವನ್ನು ಮಾಡಿದ ಹಾಗಾಗುತ್ತದೆ. ಇದಕ್ಕೆ ಮಾತ್ರ ವಿನಾಯಿತಿ ತೋರಿಸಬೇಕು ಎಂದು ಹೇಳುವುದು ಅಷ್ಟು ಉಚಿತವಲ್ಲ. ಇವತ್ತೂ ನಮ್ಮ ದೇಶದಲ್ಲಿ 55 ವರ್ಷಗಳ ಕಾಲದಿಂದಲೂ ಈ ಕೋ ಆಪರೇಟಿವ್ ಮೂವ್‌ಮೆಂಟಿನ ಬಗ್ಗೆ ಜನರ ಸಹಕಾರ ಇದ್ದುದರಿಂದಲೇ ಈ ಕೋ ಆಪರೇಟಿವ್ ಮೂವ್‌ಮೆಂಟ್ ಅನೇಕ ಭಾಗಗಳಲ್ಲಿ ಚೆನ್ನಾಗಿ ಬೆಳೆದುಕೊಂಡು ಬಂದಿದೆ. ಜನರಲ್ಲಿ ಅವುಗಳ ಬಗ್ಗೆ ದೃಡ ನಂಬಿಕೆ ಇದೆ. ಅವರಿಗೆ ಆಶ್ ಇದೆ. ಆದ್ದರಿಂದ ಯಾವ ವಿಧದಲ್ಲಾದರೂ ಈ ಪ್ರಾವಿಜನ್ಸ್‌ವನ್ನು ತೆಗೆದು ಹಾಕಬೇಕು. ಒಟ್ಟಿನಲ್ಲಿ ಸರ್ಕಾರದವರಲ್ಲಿ ನನ್ನ ಒಂದು ವಿನಂತಿ ಏನೆಂದರೆ, ಈ ವಿಧೇಯಕದ ವ್ಯಾಪ್ತಿಗೆ ಸಂಬಂಧ ಪಟ್ಟ ರೂಲ್ಸ್ ಏನಿದೆ, ಕಾನೂನುಗಳೇನಿವೆಂಯೋ ಅವು ಜನಸಾಮಾನ್ಯವಾಗಿರಬೇಕೆಂದೂ ಮತ್ತು ನಾರ್ಮಲ್ ಚಾನಲ್ಸ್ ಆಫ್ ಟ್ರೇಡ್ ಅಂಡ್ ಕಾಮರ್ಸಿಗೆ ಯಾವ ರೀತಿಯಲ್ಲೂ ಧಕ್ಕೆ ಅಥವಾ ಸಂಚಕಾರ ಬಾರದೇ ಇರುವ ಹಾಗೆ ಕಾನೂನುಗಳನ್ನು ಮಾಡಬೇಕೆಂದು ಪ್ರಾರ್ಥನೆ ಮಾಡಿ ಈ ಕೆಲವು ಅಲ್ಪ ಸ್ವಲ್ಪ ಬದಲಾವಣೆಗಳಿಂದ ಈ ವಿಧೇಯಕ ಈ ಸಭೆಯ ಒಪ್ಪಿಗೆಗೆ ಯೋಗ್ಯವಾಗಿದೆ ಎಂದು ಮಾತ್ರ ತಮ್ಮ ಮೂಲಕ ವಿನಂತಿ ಮಾಡಿಕೊಳ್ಳುತ್ತೇನೆ.

## 2. ಆಹಾರ ಧಾನ್ಯಗಳ ಮಾರಾಟ ಸಂಬಂಧವಾಗಿ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ನಾಮನಿರ್ದೇಶನ ಹೊಂದಿದವರು)** – ಮಾನ್ಯ ಸಭಾಪತಿಯವರೇ,

ಶ್ರೀಮಾನ್ ಅಂಜನಪ್ಪನವರು ಮಂಡಿಸಿರುವ "ರಾಜ್ಯದಲ್ಲಿ ಆಹಾರಧಾನ್ಯಗಳ ಮಾರಾಟವನ್ನು ಸರಕಾರದವರೇ ವಹಿಸಿಕೊಳ್ಳಬೇಕೆಂದು ಈ ಪರಿಷತ್ತಿನವರು ಅಭಿಪ್ರಾಯ ಪಡುತ್ತಾರೆ" ಎಂಬ ನಿರ್ಣಯದಲ್ಲಿ ವಿಚಿತ್ರತೆಯೇನೂ ಕಂಡುಬರಲಿಲ್ಲ. ಸಾಮಾನ್ಯವಾಗಿ ದೇಶದ ರಕ್ಷಣೆಯ ಭಾರವನ್ನು ವಹಿಸಿರುವ ಸರಕಾರ ಜನರಿಗೆ ಅತಿ ಮುಖ್ಯವಾದ ಆಹಾರಧಾನ್ಯಗಳ ವಿತರಣೆ ವಿಷಯದಲ್ಲಿ ಹೆಚ್ಚು ನಿಗಾ ಕೊಡಬೇಕಾದ್ದು, ಅದು ತನ್ನ ಭಾರ ಎಂದು ಅದನ್ನು ವಹಿಸಿಕೊಳ್ಳಬೇಕಾದ್ದು, ಅದರ ಆದ್ಯ ಕರ್ತವ್ಯ ಎಂದು ನಾನು ಭಾವಿಸಿದ್ದೇನೆ. ಆದರೆ ಇಂಥ ಕೆಲಸವನ್ನು ಕೇವಲ ವಿಶೇಷ ಸನ್ನಿವೇಶದಲ್ಲಿ ಸರಕಾರ ವಹಿಸಬೇಕೇ ಹೊರತು ಸಾಮಾನ್ಯ ಪರಿಸ್ಥಿತಿಯಲ್ಲಿ ಈ ರೀತಿ ಯಾವ ನಾಗರೀಕ ಜನ ಮಾಡುವ ಕೆಲಸವನ್ನು ವಹಿಸಿಕೊಳ್ಳತಕ್ಕದ್ದು ಉಚಿತವೂ ಅಲ್ಲ, ಧರ್ಮವೂ ಅಲ್ಲ. ಈ ದಿನಸದ

---

2. ಆಹಾರ ಧಾನ್ಯಗಳ ಮಾರಾಟ ಸಂಬಂಧವಾಗಿ 30.3.1966 ರಂದು ನಡೆದ ಚರ್ಚೆಯಲ್ಲಿ

ಪರಿಸ್ಥಿತಿಯನ್ನು ನೋಡುವುದಾದರೆ, ನಮ್ಮ ರಾಜ್ಯದಲ್ಲಿ ಮತ್ತು ರಾಷ್ಟ್ರದಲ್ಲಿ ನಮಗೆ ಸಿಕ್ಕಿರುವ ಅಂಕಿಅಂಶಗಳ ಪ್ರಕಾರ ಪ್ರತಿಯೊಬ್ಬ ಮನುಷ್ಯನಿಗೂ ಸಲ್ಲಬೇಕಾದ ಆಹಾರದ ಪ್ರಮಾಣವೇನಿದೆ ಅಷ್ಟನ್ನು ಉತ್ಪತ್ತಿ ಮಾಡುತ್ತಿದ್ದಾರೆ ಎಂಬುದನ್ನು ನಾನು ಹಿಂದೆ ಒಂದು ಸಲ ಮಾತನಾಡಿದಾಗ ಅಂಕಿಅಂಶಗಳ ಮೂಲಕ ವ್ಯಕ್ತಪಡಿಸಿದೆ. ಪ್ರತಿಯೊಬ್ಬರಿಗೂ ಸಾಕಾಗುವಷ್ಟು ಆಹಾರವನ್ನು ನಮ್ಮ ರಾಜ್ಯದಲ್ಲಿ, ರಾಷ್ಟ್ರದಲ್ಲಿ ಉತ್ಪತ್ತಿ ಮಾಡುತ್ತಿರುವಾಗ ಆಹಾರವಿಲ್ಲದೆ ಅನೇಕರು ಕಷ್ಟ ಪಡುತ್ತಿದ್ದಾರೆ ಎಂದು ಹೇಳಿದರೆ ಕೆಟ್ಟ ಮಾತಾಗುತ್ತದೆ. ಇದು ಯಾವುದರಿಂದ ಉಂಟಾಗಿರಬೇಕೆಂದು ಆಲೋಚನೆ ಮಾಡಿದರೆ ಇಂಥ ನಿರ್ಣಯ ಅಗತ್ಯವೆ ಎಂಬ ಭಾವನೆ ಬರುತ್ತದೆ. ಶ್ರೀಮಾನ್ ಮಲ್ಲಾರಾಧ್ಯರು ಬಹಳ ಉಚಿತ ರೀತಿಯಿಂದ ಮಾತನಾಡಿದರು, ಅವರು ವ್ಯಕ್ತಪಡಿಸಿದ ಅನೇಕ ಅಭಿಪ್ರಾಯಗಳು ಸೂಕ್ತವಾಗಿವೆ. ಸಾಮಾನ್ಯ ಪರಿಸ್ಥಿತಿಯಲ್ಲಿ ಸಮಾಜದಲ್ಲಿ ವ್ಯಾಪಾರ ವೃತ್ತಿಯನ್ನವಲಂಭಿಸಿರುವವರನ್ನು ಪದಚ್ಯುತರನ್ನಾಗಿ ಮಾಡಿ ಅವರ ಕೆಲಸವನ್ನು ಸರಕಾರ ವಹಿಸಿಕೊಳ್ಳುವುದು ಯೋಗ್ಯವಲ್ಲ. ನಮ್ಮಲ್ಲಿ ವ್ಯಾಪಾರಿಗಳಿದ್ದಾರೆ, ಕೆಲವರು ಪ್ರಾರಂಭದಿಂದ ವ್ಯಾಪಾರ ಮಾಡುತ್ತಿದ್ದಾರೆ. ಆಹಾರ ಧಾನ್ಯ ಮನುಷ್ಯನಿಗೆ ಹೇಗೆ ಅಗತ್ಯವಾದ ವಸ್ತುವೋ ಹಾಗೆಯೇ ಅದನ್ನು ಸಂಗ್ರಹಮಾಡುವುದು, ವಿನಿಮಯ ಮಾಡುವುದು, ಜನರಿಗೆ ಹಂಚುವುದು ವರ್ತಕರಿಗೆ ಅಗತ್ಯವಾದ ಕೆಲಸ. ಅವರು ದಳ್ಳಾಳಿ ಮಾಡುವವರಲ್ಲ, ಉತ್ಪತ್ತಿ ಮಾಡುವವರಿಂದ ತಂದು ಅದನ್ನು ಜನರಿಗೆ ಹಂಚುವುದು ಅವರ ಧರ್ಮ. ಈ ದಿವಸ ನಮ್ಮ ದೇಶದಲ್ಲಿ ಸಾವಿರಾರು ಜನರು ಈ ಕೆಲಸದಲ್ಲಿ ನಿರತರಾಗಿದ್ದಾರೆ. ಅವರನ್ನು ಈ ವೃತ್ತಿಯಿಂದ ತಪ್ಪಿಸಿ ನಿರುದ್ಯೋಗಿಗಳಾಗಿ ಮಾಡಬೇಕೆಂದು ಯಾವ ಸರಕಾರವೂ ಮನಸ್ಸು ಮಾಡುವುದಿಲ್ಲ. ಅನೇಕ ವರ್ತಕರು ನ್ಯಾಯದಿಂದಲೇ ವರ್ತಿಸುತ್ತಿದ್ದಾರೆ. ಕೆಲವರು ಸಾಮಾನ್ಯವಾಗಿ ನೂರು ಮೂಟೆಗಳಿಗಿಂತ ಹೆಚ್ಚಾಗಿ ಒಂದು ಸಲಕ್ಕೆ ತೆಗೆದುಕೊಳ್ಳುವುದಿಲ್ಲ. 15 ಸಾವಿರ ರೂಪಾಯಿಗಳಿಗಿಂತ ಹೆಚ್ಚಾಗಿ ವ್ಯಾಪಾರ ಮಾಡುವುದಿಲ್ಲ. ಅವರು ಸಮಾಜದಲ್ಲಿ ಹೊಂದಿಕೊಂಡಿದ್ದಾರೆ. ಗಿರಾಕಿಗಳ ಮಧ್ಯದಲ್ಲಿ ಅವರು ವಾಸ ಮಾಡುತ್ತಿದ್ದಾರೆ. ಇದು ಅವರ ಅಳಿವು ಮತ್ತು ಉಳಿವಿನ ಪ್ರಶ್ನೆ. ಆಹಾರ ಜನರಿಗೆ ಕೊಡಬೇಕು. ಅದರ ಕೆಲಸ ಯಾರು ಮಾಡಬೇಕು? ಇದು ಮೂಲಭೂತವಾದ ಪ್ರಶ್ನೆ. ಸಾಮಾನ್ಯವಾಗಿ ಈ ಕೆಲಸವನ್ನು ಸಮಾಜದಲ್ಲಿ ವರ್ತಕರು ಮಾಡುತ್ತಿದ್ದಾರೆ. ಈ ವರ್ತಕರು ಮಾಡುವ ಕೆಲಸವನ್ನು ಸರಕಾರ ವಹಿಸಿಕೊಳ್ಳಬೇಕೇ, ಅದು ಯೋಗ್ಯವೇ ಎಂಬುದನ್ನು ತೀರ್ಮಾನ ಮಾಡಬೇಕು. ಸರಕಾರ ಮತ್ತು ಜನರು ಉಳಿಯಬೇಕಾದರೆ ಯಾವ ರೀತಿ ನಡೆದುಕೊಳ್ಳಬೇಕು ಎಂಬುದನ್ನು ಪ್ರತಿನಿಧಿಗಳು ಹೇಳಬೇಕು. ಈಗಿರುವ ವರ್ತಕರನ್ನು ನಿರುದ್ಯೋಗಿಗಳನ್ನಾಗಿ ಮಾಡಿ ಅವರ ಕೆಲಸವನ್ನು ಇತರರು ವಹಿಸಿಕೊಳ್ಳಬೇಕಾದರೆ ಅದಕ್ಕೆ ಯಾವ ಅರ್ಹತೆಬೇಕು. ಎಕ್ವಿಪ್‌ಮೆಂಟ್ ಬೇಕು ತಯಾರಿಬೇಕು, ಅದಿಲ್ಲದಿರುವ ಜನರಿಂದ ಈ ಕೆಲಸವನ್ನು ಮಾಡಿಸಿದರೆ ಏನಾಗುತ್ತದೆ ಎಂಬುದನ್ನೆಲ್ಲಾ ಯೋಚನೆ ಮಾಡಬೇಕು. ಅನುಭವವಿಲ್ಲದಿರುವವರಿಗೆ ಇದನ್ನು ವಹಿಸಿದರೆ ಸರಿಯಾಗಿ ನಡೆಯಲಾರದು ಎಂಬ ಭಾವನೆಯಿದೆ. ಈ ದಿವಸದ ಪರಿಸ್ಥಿತಿಯೇನೂ ಎಂಬುದನ್ನೂ ಗಮನಿಸಬೇಕು. ಈ ಹೊತ್ತು ಸಾವಿರಾರು ಜನ ವ್ಯಾಪಾರದಲ್ಲಿ ನಿರತರಾಗಿರುವವರು ಅನೇಕರು ಗೌರವಯುತರು ಒಳ್ಳೆಯ ರೀತಿಯಲ್ಲಿ ನಡೆಯುತ್ತಿದ್ದಾರೆ ಎಂಬುದು ನನ್ನ ಭಾವನೆ. ಶ್ರೀಮಾನ್ ಕೃಷ್ಣಪ್ಪನವರು ಆಹಾರ ಶಾಖೆಯ

ಮಂತ್ರಿಗಳಾಗಿದ್ದಾಗ ಮಲ್ಲೇಶ್ವರದಲ್ಲಿರುವ ಪ್ರತಿಯೊಬ್ಬ ವರ್ತಕರೂ ಆಹಾರ ವಿತರಣೆ ಮಾಡಲು ತಮ್ಮ ಕೈಲಾಗುವುದಿಲ್ಲವೆಂದು ಹೇಳಿದರು. ಈಗ ದೇಶದಲ್ಲಿ ಅಭಾವವಿದೆ, ಆಹಾರದ ಉತ್ಪತ್ತಿಯನ್ನು ಹೆಚ್ಚಿಸುವುದು ನಮ್ಮ ಕರ್ತವ್ಯ. ನಮಗೆ ಹತ್ತು ಸಾವಿರ ಕ್ವಿಂಟಾಲ್ ಬೇಕಾಗಿದ್ದರೆ 20 ಸಾವಿರ ಕ್ವಿಂಟಾಲ್ ರಾಜ್ಯದಲ್ಲಿ ಉತ್ಪತ್ತಿ ಮಾಡಬೇಕು. ಹಾಗೆ ಮಾಡಿದರೆ ಆಗ ಆಹಾರ ಸುಲಭವಾಗಿ ಸಿಕ್ಕುತ್ತದೆ. ಈ ಕೆಲಸವಾಗಬೇಕು. ಈಗ ರಾಜ್ಯ ಸರಕಾರ ಕೊಟ್ಟಿರುವ ಅಂಕಿಅಂಶದ ಪ್ರಕಾರ ನಮಗೆಷ್ಟುಬೇಕೋ ಅಷ್ಟು ಆಹಾರ ಉತ್ಪತ್ತಿಯಾಗುತ್ತಿದೆಯೆಂದು ಕಾಣುತ್ತದೆ. ಇದು ನಿಜವಾಗಿದ್ದರೆ ವಿತರಣೆ ಸರಿಯಾಗಿ ಆಗುತ್ತಿಲ್ಲ. ಹಿರಿಯ ವರ್ತಕರಿಂದ ಇದಕ್ಕೆ ಆತಂಕವಿದೆ ಎಂಬ ಭಾವನೆ ಬರುತ್ತಿದೆ. ಹಿರಿಯ ವರ್ತಕರು ಯಾರು ಕೆಲವು ಭಾಗಗಳಲ್ಲಿರುವ ಅಕ್ಕಿ, ರಾಗಿ ಮುಂತಾದುವನ್ನು ಹಣ ತೆತ್ತು ತಂದು ಸಂಗ್ರಹಮಾಡಿ ಕೆಲವರು ಜನತೆಗೆ ಮಾರಾಟ ಮಾಡುತ್ತಾರೆ. ಜನರು ಅವರ ಆಶ್ರಯದಲ್ಲಿರಬೇಕಾಗುತ್ತದೆ. ಅವರ ಮನಸ್ಸಿನಲ್ಲಿ ಜನರ ಸೇವೆ ಮಾಡಬೇಕೆಂಬುದಿಲ್ಲ. ತಮ್ಮ ವೃತ್ತಿಗೆ ತಕ್ಕ ಸಂಪಾದನೆ ಮಾಡಬೇಕೆಂಬುದಿಲ್ಲ, ಅವರಿಗೆ ಇರುವುದು ಹಣದ ಆಸೆಯೊಂದೇ. ಇದು ನಭೋಮಂಡಲವನ್ನು ಭೇದಿಸಿದೆ. ಒಂದು ದಿನ ಮುಗಿದು ಇನ್ನೊಂದು ದಿನ ಹುಟ್ಟುವುದರಲ್ಲಿ ಲಕ್ಷಾಂತರ ರೂಪಾಯಿ ಸಂಪಾದನೆ ಮಾಡಬೇಕೆಂಬ ಆಸೆ ಅವರಿಗಿದೆ. ಅದೇ ಸಾಮಾನ್ಯ ವ್ಯಾಪಾರಿಗೆ ಅದಿಲ್ಲ. ಕೆಲವು ಹಿರಿಯ ವ್ಯಕ್ತಿಗಳಿಗೆ ಈ ಆಸೆ ಇದೆ. ಹಾಗಿರುವಾಗ ಸರಕಾರ ಇದನ್ನೆಲ್ಲಾ ನೋಡುತ್ತಾ ಧೃತರಾಷ್ಟ್ರನಂತೆ ಕುಳಿತಿರಲು ಸಾಧ್ಯವೆ. ಸರಕಾರ ಜನರ ಕ್ಷೇಮಂತನ ಮಾಡಬೇಕು, ಜನರಿಗೆ ಬೇಕಾದ ಆಹಾರ ಒದಗಿಸಬೇಕಾದ್ದು ಸರಕಾರದ ಕರ್ತವ್ಯ.

ಈ ನಿರ್ಣಯದ ಮೇಲೆ ಮಾತನಾಡುತ್ತಾ ಮಾನ್ಯ ಸದಸ್ಯರಾದ ಶ್ರೀಮಾನ್ ಮಲ್ಲಾರಾಧ್ಯರವರು ಒಂದೆರಡು ವಿಷಯಗಳನ್ನು ಬಹು ಚೆನ್ನಾಗಿ ಪ್ರತಿಪಾದನೆ ಮಾಡಿದರು. ಸಾಮಾನ್ಯವಾದ ಪರಿಸ್ಥಿತಿಯಲ್ಲಿ ಆಹಾರ ಧಾನ್ಯ ಹಂಚುವಿಕೆಯ ಕಾರ್ಯವು ವ್ಯಾಪಾರಿಗಳ ಮೇಲೆ ಅವಲಂಬಿಸಿರುತ್ತದೆ. ಆದರೆ ಇಂದಿನ ವಿಶೇಷ ಪರಿಸ್ಥಿತಿಯಲ್ಲಿ ಅವರು ಆಹಾರ ಧಾನ್ಯ ಹಂಚುವಿಕೆಯ ವಿಚಾರದಲ್ಲಿ ಜನಗಳ ನಂಬಿಕೆಯನ್ನು ಉಳಿಸಿಕೊಂಡು ಬಂದಿಲ್ಲ. ವ್ಯಾಪಾರಸ್ಥರಲ್ಲಿ ಕೂಡ ಎರಡು ಭಾಗ ಮಾಡಿ ವಿಂಗಡಣೆ ಮಾಡಬೇಕಾಗಿದೆ. ಅದು ಯಾವುದು ಅಂದರೆ, ಹಿರಿಯ ವರ್ತಕರು ಒಂದು ಭಾಗ ಇನ್ನೊಂದು ಭಾಗ ಕಿರಿಯ ವರ್ತಕರದು. ಕಿರಿಯ ವರ್ತಕರಲ್ಲಿ ಆಹಾರ ಧಾನ್ಯ ಸಂಗ್ರಹಣೆ ಮಾಡತಕ್ಕ ಶಕ್ತಿ ಅಷ್ಟು ಹೆಚ್ಚಾಗಿ ಇರುವುದಿಲ್ಲ. ಆದರೆ ಕೆಲವು ದೊಡ್ಡ ವರ್ತಕರು ಬಂಡವಾಳಗಾರರು ಇದ್ದಾರೆ. ಅಂಥವರು ಇಂದಿನ ಪರಿಸ್ಥಿತಿಯಲ್ಲಿ ಜನರ ಜೀವನಕ್ಕೆ ಆಧಾರವಾದ ಆಹಾರ ಧಾನ್ಯ ವಿತರಣೆ ಮಾಡುವುದು, ಆಹಾರ ಧಾನ್ಯ ಜನರಿಗೆ ಒದಗಿಸತಕ್ಕಂಥಾ ಜವಾಬ್ದಾರಿಯನ್ನು ಯೋಗ್ಯವಾದ ರೀತಿಯಲ್ಲಿ ನಿರ್ವಹಿಸಬೇಕಾದುದು ಅತ್ಯಗತ್ಯವಾಗಿದೆ. ಆದರೆ ಇವತ್ತಿನ ದಿವಸ ಕೆಲವು ಅಯೋಗ್ಯರ ಮೇಲೆ ಇದು ಅವಲಂಬನವಾಗಿರುವುದರಿಂದ ಈ ಹಿರಿಯ ವರ್ತಕರು ಬಂಡವಾಳಗಾರರು ಆಹಾರಧಾನ್ಯ ಸಂಗ್ರಹಣೆ ಮಾಡಿ ರಾಜ್ಯದಲ್ಲಿ ಇಂದು ಅಭಾವ ಪರಿಸ್ಥಿತಿ ಉಂಟಾಗುವಂತೆ ಮಾಡಿದ್ದಾರೆಂದು ಹೇಳಬಹುದು. ಕೆಳಮಟ್ಟದಲ್ಲಿರತಕ್ಕ ಕಿರಿಯ ವರ್ತಕರಲ್ಲಿ ಆಹಾರಧಾನ್ಯ ಸಂಗ್ರಹಣೆ ಮಾಡತಕ್ಕ ಒಂದು ಶಕ್ತಿ ಇಲ್ಲ ಎಂಬುದು ನಿರ್ವಿವಾದವಾದ ವಿಷಯ. ಪ್ರಜಾಪ್ರಭುತ್ವ ತತ್ವಕ್ಕೆ ಅನುಗುಣವಾಗಿ ನಡೆಸಿಕೊಂಡು

ಹೋಗತಕ್ಕಂಥ ಸರಕಾರ, ಜನ ಬೆಂಬಲ ಪಡೆದಂಥ ಸರಕಾರ, ಇಂಥ ವರ್ತಕರನ್ನು ನಿರ್ಮೂಲನ ಮಾಡುವುದು ಅಗತ್ಯ ಎಂದು ತಿಳಿದುಕೊಂಡಿದೆ. ಇದು ಸರಕಾರಕ್ಕೆ ಸಾಧ್ಯವಾಗಿದೆಯೇ? ಆಹಾರ ಧಾನ್ಯ ಅನ್ಯಾಯವಾಗಿ ಹೋರ್ಡಿಂಗ್ ಮಾಡುವುದು ಸಮಾಜ ಘಾತುಕ ಕಾರ್ಯವಾಗುತ್ತದೆ. ಇಂಥ ವ್ಯಕ್ತಿಗಳಿದ್ದರೆ ಅವರನ್ನು ಸೆರೆಮನೆಯಲ್ಲಿಡಬೇಕು. ಅವರ ಆಸ್ತಿಪಾಸ್ತಿ ಮುಟ್ಟುಗೋಲು ಮಾಡಬೇಕು ಮತ್ತು ಅವರು ಸಂಗ್ರಹಣೆ ಮಾಡಿದ ಆಹಾರ ಧಾನ್ಯ ಸರಕಾರ ತೆಗೆದುಕೊಂಡು ಜನರಿಗೆ ವಿತರಣೆ ಮಾಡತಕ್ಕಂಥ ಶಕ್ತಿ ಸಾಮರ್ಥ್ಯ ಸರಕಾರಕ್ಕೆ ಇದೆಯೇ? ಎಂದು ಕೇಳುತ್ತೇನೆ. ಇಂಥ ಜನ ನಮ್ಮ ರಾಜ್ಯದಲ್ಲಿ ಬಹಳ ಕಡಿಮೆ ಇದ್ದಾರೆ. ಒಬ್ಬಬ್ಬರು ಇರಬಹುದು. ಮೈಸೂರು ರಾಜ್ಯಕ್ಕೆ ಇದು ಅನ್ವಯವಾಗುವ ಹಾಗೆ ಭಾರತದ ಪ್ರತಿಯೊಂದು ರಾಜ್ಯಕ್ಕೂ ಅನ್ವಯವಾಗುತ್ತದೆ. ಇಡೀ ರಾಷ್ಟ್ರಕ್ಕೆ ಅನ್ವಯವಾಗುತ್ತದೆ. ಇಂಥ ವರ್ತಕರಿಗೆ ಹಣ ಬಂಡವಾಳದ ಆಧಾರದ ಜೊತೆಗೆ ಪ್ರಭಾವ ಬೀರುವ ಅನುಕೂಲತೆಯೂ ಇದೆ. ಯಾವ ಸರಕಾರವೇ ಆಗಲಿ, ಯಾವ ಮಂತ್ರಿಮಂಡಲವೇ ಆಗಲಿ, ಯಾವ ಮಂತ್ರಿಯೇ ಆಗಲಿ, ಅಧಿಕಾರ ಸ್ಥಾನದಲ್ಲಿ ಉಳಿಯುವುದಕ್ಕೆ ಇಂಥವನು ಕಾರಣವಾಗಿರುತ್ತಾನೆ. ತನಗೆ ಏನು ಬೇಕೋ ಅದನ್ನು ಪಡೆಯುತ್ತಾನೆ. ಅಂದರೆ, ಅವನು ಎಂಥ ಶಕ್ತಿಯುಳ್ಳವನಾಗಿರಬೇಕು. ಅಂಥವರು ಅದನ್ನು ಪಡೆಯುತ್ತಾನೆ. ಅಂದರೆ, ಅವನು ಎಂಥ ಶಕ್ತಿಯುಳ್ಳವನಾಗಿರಬೇಕು. ಅಂಥವರು ಮಂತ್ರಿ ಮಂಡಲವನ್ನು ಕೂಡ ಹೆದರಿಸುವುದಕ್ಕೆ ಪ್ರಯತ್ನಪಡುತ್ತಾರೆ. ಇವತ್ತಿನ ದಿವಸ ಸರಕಾರದವರು ಕೋ ಆಪರೇಟಿವ್ ಸೊಸೈಟಿ ಮೂಲಕ ಫೇರ್‌ಪ್ರೈಸ್ ಡಿಪೋ ಮೂಲಕ ಒಂದು ಕೆ.ಜಿ. ಅಕ್ಕಿಯನ್ನು 90 ಪೈಸಾಕ್ಕೆ ಕೊಡುತ್ತಿದ್ದಾರೆ. ಅಲ್ಲಿ ಕೊಡುವ ಅಕ್ಕಿಯ ಪ್ರಮಾಣವು ಹತ್ತು ಹನ್ನೆರಡು ದಿವಸಕ್ಕೆ ಸಾಲುವುದಿಲ್ಲ. ಆದರೆ ಇಂದು ಮಾರ್ಕೆಟ್ಟಿನಲ್ಲಿ ಅಕ್ಕಿ ರಾಗಿ, ಜೋಳ ಹೆಚ್ಚು ಬೆಲೆ ಕೊಟ್ಟರೆ ಬೇಕಾದಷ್ಟು ಸಿಕ್ಕುತ್ತದೆ. 150 ರೂಪಾಯಿ ಕೊಟ್ಟರೆ ಒಂದು ಕ್ವಿಂಟಾಲ್ ಅಕ್ಕಿ ಬೆಂಗಳೂರು ನಗರದಲ್ಲಿ ಸಿಕ್ಕುತ್ತದೆ. ಈ ಧಾನ್ಯ ಯಾರಿಂದ ಸಿಕ್ಕುತ್ತವೆ? ಸಾಮಾನ್ಯ ರೈತ ಗ್ರಾಮಾಂತರ ಪ್ರದೇಶದಿಂದ ಬಂದು ಧಾನ್ಯ ಮಾರುತ್ತಿಲ್ಲ. ಸಾಮಾನ್ಯ ರೈತ ಬಂದು ಧಾನ್ಯ ಮಾರಿ ಹೆಚ್ಚು ಬೆಲೆ ತೆಗೆದು ಕೊಂಡಿದ್ದರೆ ಸಂತೋಷವಾಗುತ್ತಿತ್ತು. ಮಧ್ಯವರ್ತಿಯಾಗಿರತಕ್ಕ ವರ್ತಕರಿಗೆ ಈ ಹಣ ಹೋಗುತ್ತಿದೆ. ಸಾಮಾನ್ಯ ರೈತನಿಗೆ ದೊರೆಯುತ್ತಿಲ್ಲ. ಧಾನ್ಯ ಸಂಗ್ರಹ ಮಾಡಿರತಕ್ಕ ಹೋರ್ಡಿಂಗ್ ಮಾಡಿರತಕ್ಕ ಈ ಜನ ತಮ್ಮ ಮನಸ್ಸಿಗೆ ಬಂದ ಬೆಲೆ ಕೇಳುತ್ತಾರೆ. ಮನಸ್ಸಿಗೆ ಬಂದ ಹಾಗೆ ಸಂಪಾದಿಸುತ್ತಾರೆ. ಮೈಸೂರು ರಾಜ್ಯದಲ್ಲಿ, ಸಾರ್ವತ್ರಿಕವಾಗಿ ಇಂಡಿಯಾ ದೇಶದಲ್ಲಿ ಈ ಕಳ್ಳರ ಗುಂಪು ಒಂದು ಇದೆ. ಇವರನ್ನು ಸದೆಬಡಿಯದೇ ಹೋದ ಪಕ್ಷದಲ್ಲಿ ದೇಶ ಉಳಿಯುವುದಿಲ್ಲ. ಇನ್ನು ಎರಡನೆಯದಾಗಿ ಹೋರ್ಡಿಂಗ್ ಆಕ್ಟ್ ಪ್ರಯೋಗ ಮಾಡಿ ಅವರು ಸಂಗ್ರಹಿಸಿಟ್ಟುಕೊಂಡ ಧಾನ್ಯ ತೆಗೆದುಕೊಂಡು ಅವರನ್ನು ಸೆರೆಮನೆಯಲ್ಲಿ ಇಟ್ಟು, ಸಮಾಜ ಘಾತುಕ ವ್ಯಕ್ತಿಗಳು ಹೊರಗಡೆ ಉಳಿಯದಂತೆ ಮಾಡುವ ಸಾಮರ್ಥ್ಯ ಸರಕಾರಕ್ಕೆ ಇರಬೇಕು.

ಶ್ರೀ ಡಿ. ರಾಜಗೋಪಾಲ್ (ವಿಧಾನಸಭಾ ಕ್ಷೇತ್ರ) – ಹೋರ್ಡಿಂಗ್ ಮಾಡುವ ಜನ ಎಷ್ಟು ಇದ್ದಾರೆ? ಅವರ ಹತ್ತಿರ ಸ್ಟಾಕ್ ಎಷ್ಟು ಇದೆ? ಎಷ್ಟು ಹಣ ಇದರಲ್ಲಿ ಹಾಕಿದ್ದಾರೆ ಎಂಬುದಕ್ಕೆ ಅವರ ಹೆಸರುಗಳ ಲಿಸ್ಟು ಮತ್ತು ಅಂಕಿ ಅಂಶಗಳು ಇವೆಯೇ?

ಶ್ರೀ ಎಂ.ಪಿ.ಎಲ್. ಶಾಸ್ತ್ರಿ – ಇದಕ್ಕೆ ಅಂಕಿ ಅಂಶಗಳು ಇರುವುದಿಲ್ಲ. ಇದು ಕಳ್ಳ ಹಣ. ಬೆಳ್ಳಗಿನ ಹಣ ಅಲ್ಲ.

ಒಂದು ಕೆ.ಜಿ. ಅಕ್ಕಿಯನ್ನು 87ನೇಯೇ ಪೈಸೆಗೆ ಸಿಕ್ಕುವಂತೆ ವ್ಯವಸ್ಥೆ ಮಾಡುವುದಕ್ಕೆ ಸರಕಾರ ಸರ್ವಶಕ್ತಿಯಿಂದ ಪ್ರಯತ್ನ ಮಾಡುತ್ತಿದೆ. ಆಹಾರ ಪದಾರ್ಥಗಳ ಮಾರುಕಟ್ಟೆಯಲ್ಲಿ ವಿಶೇಷವಾಗಿ ಸಿಕ್ಕಬೇಕಾದರೆ ಅಂಥ ವರ್ತಕರನ್ನು ಎಷ್ಟು ಧಾನ್ಯ ಸಂಗ್ರಹ ಮಾಡಿರಬೇಕು. ಬಂಡವಾಳ ಎಷ್ಟು ಹಾಕಿರಬಹುದು ಎಂಬುದನ್ನು ಬರೀ ಊಹೆ ಮಾಡಬೇಕಾಗುತ್ತದೆ. ಸರಕಾರದ ಹತೋಟಿ ಇದ್ದರೂ ಕೂಡ ಕಳ್ಳ ವ್ಯಾಪಾರ ಮಾರುಕಟ್ಟೆಯಲ್ಲಿ ಮಾಡುತ್ತಾರೆ. ಒಂದು ವೇಳೆ ಹತೋಟಿ ಇಲ್ಲದೇ ಇದ್ದರೆ ಏನಾಗುತ್ತಿತ್ತು? ಇಂಥ ವರ್ತಕರು ಬಂಡವಾಳಗಾರರು ಎಷ್ಟು ಜನ ಇದ್ದಾರೆ ಎಂದು ಒಂದು ದೊಡ್ಡ ಪ್ರಶ್ನೆಯನ್ನು ಶ್ರೀಮಾನ್ ರಾಜಗೋಪಾಲ್ ಅವರು ಕೇಳಿದರು. ಇಂಥ ಜನ ಇಷ್ಟು ಸಣ್ಣ ಸಂಖ್ಯೆಯಲ್ಲಿ ಇದ್ದರೂ ಕೂಡ ರಾಷ್ಟದಲ್ಲಿ ಎಷ್ಟು ಅನಾಹುತವಾಗುತ್ತಿದೆ, ಇವರು ಹೆಚ್ಚು ಪ್ರಮಾಣದಲ್ಲಿ ಇದ್ದರೆ ಏನಾಗಬಹುದಾಗಿತ್ತು? ಇಂಥ ಜನ ನಮ್ಮ ದೃಷ್ಟಿಯಿಂದ ಅಲ್ಪ ಸಂಖ್ಯೆಯಲ್ಲಿದ್ದಾರೆ. ಸಮಾಜ ಘಾತುಕ ಪ್ರವೃತ್ತಿಯುಳ್ಳವರನ್ನು ಈಗಲೇ ನಿರ್ನಾಮ ಮಾಡಬೇಕು. ಇದನ್ನು ಸಮಾಜದ ಪ್ರತಿ ನಿಧಿಗಳು ಸ್ಥಳೀಯ ಸಂಸ್ಥೆಗಳ ಸದಸ್ಯರು ತಿಳಿಯಬೇಕು. ಈ ಕೆಲಸ ಸರಕಾರ ಮಾಡಬೇಕಾಗುತ್ತದೆ. ಯಾವುದೇ ವಿಶೇಷವಾದ ಪರಿಸ್ಥಿತಿಯಲ್ಲಿ ಸಾಮಾನ್ಯ ಜನರು ಜೀವನ ಸಾಗಿಸುವುದನ್ನು ಸುಗಮವಾಗಿ ಮಾಡುವುದಕ್ಕಾಗಿ ಸರಕಾರ ಇಂಥ ಕೆಲಸ ಮಾಡದೇ ಕೈ ಹಿಂತೆಗೆದುಕೊಳ್ಳಬಾರದು. ಈ ಕಳ್ಳ ಹಣ ಕೆಲವರಿಗೆ ಮಾತ್ರ ಹೋಗುತ್ತದೆ. ಇದನ್ನು ತಪ್ಪಿಸಬೇಕಾದುದು ಅಗತ್ಯ. ಇನ್ನೊಂದು ಮಾರ್ಗ ಯಾವುದು ಅಂದರೆ, ನಾರ್ಮಲ್ ಟ್ರೇಡ್ ಚಾನಲ್ಸ್ ಬದಲಾವಣೆ ಮಾಡುವುದರಿಂದ ಇದು ಸಾಧ್ಯವಿದೆ. ಈ ಬದಲಾವಣೆ ಮಾಡುವುದಕ್ಕೆ ಸರಕಾರ ಕ್ರಮ ಕೈಕೊಳ್ಳುತ್ತಿದೆ. ಇಂದು ಸರಕಾರದ ನೀತಿ ಏನು ಇದೆ ಅಂದರೆ ಕೋ ಆಪರೇಟಿವ್ ಸೊಸೈಟಿ ಮೂಲಕ ಸಹಕಾರ ಸಂಘಗಳ ಮೂಲಕ ಅದರ ಪ್ರತಿನಿಧಿಗಳು ಸಂಪೂರ್ಣವಾಗಿ ಅಧಿಕಾರವನ್ನು ಸ್ವಾಯತ್ತ ಅಧಿಕಾರವನ್ನು ವಹಿಸಿಕೊಂಡು ಧಾನ್ಯ ವಿತರಣೆ ಮಾಡುವುದು ಸಾಧ್ಯವಿದೆ. ಕೋ ಆಪರೇಟಿವ್ ಸೊಸೈಟಿಗಳ ಬಗ್ಗೆ ವಾಸ್ತವಾಂಶ ಹೇಳಬೇಕು. ಸುಳ್ಳು ಹೇಳಿದರೆ ಹಿತವಾಗಿರುತ್ತದೆ. ನಿಜ ಹೇಳಿದರೆ ಅಪ್ಯಾಯಮಾನವಾಗಿರುವುದಿಲ್ಲ. ಹಿರಿಯ ವರ್ತಕರು ಯಾರು ಯಾರು ಇದ್ದರು, ಅವರು ದಳ್ಳಾಳಿ ಕೆಲಸ ಮಾಡುತ್ತಿದ್ದಾರೆ. ಅವರ ಹಿತದೃಷ್ಟಿಯಿಂದ ವೈವಾಟಿ ಮಾಡುತ್ತಿದ್ದಾರೆ. ದೊಡ್ಡ ದೊಡ್ಡ ಕೋ ಆಪರೇಟಿವ್ ಸಂಸ್ಥೆಗಳಲ್ಲಿ ಅಧಿಕಾರಿಗಳಾಗಿ ಬಿಟ್ಟಿದ್ದಾರೆ. ಅದು ಶ್ರೀಮಾನ್ ಜತ್ತಿಯವರಿಗೆ ಗೊತ್ತಿದೆ.

ಇದು ಕೇವಲ ಮೈಸೂರು ರಾಜ್ಯಕ್ಕೆ ಸೇರಿದ್ದು ಅಲ್ಲ. ಪಂಜಾಬಿನಲ್ಲೂ ಸಹ ಕೆಲವು ವರ್ತಕರು ನಮ್ಮ ಸರ್ಕಾರ ಆಹಾರಧಾನ್ಯ ಮಾರುವುದಕ್ಕೆ ಬಿಡುವುದಿಲ್ಲ ಎಂದು ಹೇಳಿದರು. ಇಲ್ಲಿ ಏನು ಮಾಡಬೇಕೆಂದರೆ, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರ ಬಲಾತ್ಕಾರವಾಗಿ ಕುಳಿತುಕೊಂಡು ಸರಿಯಾದ ಕಾನೂನು ಮಾಡಿ ಆಹಾರವನ್ನು ಎಲ್ಲಾ ರಾಜ್ಯಗಳಿಗೂ ಸರಿಯಾಗಿ ಹಂಚಬೇಕು. ಈ ಪ್ರಸ್ತಾಪವನ್ನು ಈ ಸಮಯದಲ್ಲಿ ಮಾಡುವುದಕ್ಕೆ ಬಯಸುವುದಿಲ್ಲ. ಇದನ್ನು ಆಹಾರ ಇಲಾಖೆಯ

ಜನರಲ್ ಡಿಸ್‌ಕಷನ್ ಸಮಯದಲ್ಲಿ ಹೇಳಿದ್ದೇನೆ. ಕೋ ಆಪರೇಟಿವ್ ಸೊಸೈಟಿಗಳ ಮೂಲಕ, ಸಹಕಾರ ಸಂಸ್ಥೆಗಳ ಮೂಲಕ ಆಹಾರವನ್ನು ಹಂಚುವುದು ಒಳ್ಳೆಯದು, ಆದರೆ ಇಲ್ಲಿ ಬಹಳ ಬುದ್ಧಿವಂತರಾಗಿರುವವರು, ಚಾಣಾಕ್ಷರು, ಅಗ್ನಿದಕ್ಷಕರು ಸೇರಿಕೊಂಡುಬಿಟ್ಟಿದ್ದಾರೆ. ಹೋಲ್‌ಸೇಲ್ ಕೋ ಆಪರೇಟಿವ್ ಸೊಸೈಟಿ ಇದೆ. ಇದರಲ್ಲಿ ಕೋಟ್ಯಾಂತರ ರೂಪಾಯಿಗಳ ಪ್ರೈವಾಟ್ ಮಾಡುತ್ತಿದ್ದಾರೆ. ದಳ್ಳಾಳಿ ವ್ಯಾಪಾರ ಮಾಡುತ್ತಿದ್ದಾರೆ. ಒಂದು ಕಡೆಯಿಂದ ಸುಲಿಗೆ ಮಾಡಿ ಇನ್ನೊಂದು ಕಡೆಗೆ ತುಂಬುತ್ತಿದ್ದಾರೆ. ಇದು ಈ ಪ್ರಜಾಪ್ರಭುತ್ವದಲ್ಲಿ ನಡೆಯುತ್ತಿದೆ. ಡಿ.ಐ.ಆರ್ ಮೇಲೆ ಕ್ರಮ ತೆಗೆದುಕೊಳ್ಳಿ ಎಂದು ಹೇಳುತ್ತಾರೆ. ಕನ್ಯಾಕುಮಾರಿಯಿಂದ ಹಿಡಿದು ಕಾಶ್ಮೀರದವರೆಗೆ, ಇಂಡಿಯಾ ದೇಶಕ್ಕೆ ವಿಪತ್ತು ಬಾರದು ರೀತಿ ಇಂತಹ ಜನರನ್ನು ಸೆರೆಮನೆಯಲ್ಲಿಟ್ಟಿರಿ. ಅಂತಹ ಒಂದು ಕಾನೂನು ಮಾಡಿರುವಾಗ ಅದರ ಮೇಲೆ ಇವರನ್ನು ಬಿಟ್ಟುಬಿಡಿ ಎಂದು ಪ್ರಶ್ನೆ ಹಾಕುತ್ತಾರೆ. ಈ ಪ್ರಜಾಪ್ರಭುತ್ವದಲ್ಲಿ, ಕೋ ಆಪರೇಟಿವ್ ಸೊಸೈಟಿಗಳಲ್ಲಿ ನಾನು ಮೇಲೆ ಹೇಳಿದಂತಹ ಜನ ಸೇರಿಕೊಂಡಿದ್ದಾರೆ. ಇಂತಹ ಜನರನ್ನು ಅಲ್ಲಿಂದ ತೆಗೆಯುವುದು ಸಾಧ್ಯವೇ ಎಂದರೆ, ಸಾಧ್ಯವಿಲ್ಲ. ಈ ವಿಚಾರದಲ್ಲಿ ಎರಡು ಕೆಲಸಗಳನ್ನು ಮಾಡಬೇಕಾದ್ದು ಅತ್ಯಗತ್ಯ. ಈ ಮನಾಪಲಿ ಪ್ರೊಕ್ಯೂರ್ ಮೆಂಟ್ ಹೇಗೆ ಮಾಡುತ್ತೀರೋ ಹಾಗೆ ಆಹಾರಧಾನ್ಯಗಳ ವಿತರಣೆಯನ್ನು ಕೂಡ ಸರ್ಕಾರವೇ ವಹಿಸಿಕೊಳ್ಳಬೇಕು. ಈ ನಿರ್ಣಯದಲ್ಲಿ ಅರ್ಧಭಾಗ ಮಾತ್ರ ಇದೆ. ನಾನು ಹೇಳಿದ ಭಾಗ ಇಲ್ಲ. ಈ ರಾಜ್ಯದಲ್ಲಿ ಆಹಾರಧಾನ್ಯಗಳ ಮಾರಾಟವನ್ನು ಸರ್ಕಾರದವರೇ ವಹಿಸಿಕೊಳ್ಳಬೇಕು ಎಂದು, ಅಭಿಪ್ರಾಯ ಪಡುತ್ತೇನೆ. ಸಾರ್ವಜನಿಕ ಪ್ರತಿನಿಧಿಗಳು ಸಹಾಯ ಮಾಡಿದರೆ ಪ್ರೊಕ್ಯೂರ್‌ಮೆಂಟ್ ತಪ್ಪಿಸಬಹುದು. ನಮ್ಮಲ್ಲಿ ಯಾವ ಯಾವ ಅಪಚಾರಗಳು ನಡೆಯುತ್ತಿವೆಯೋ ಅದನ್ನು ಸರ್ಕಾರ ಒಂದು ಕಾನೂನಿನಿಂದ ತೊಡೆದು ಹಾಕುತ್ತಾರೆಂದು ಯಾರಾದರೂ ಅಂದುಕೊಂಡಿದ್ದರೆ ಅದು ಒಪ್ಪತಕ್ಕ ಮಾತಲ್ಲ. ನಮ್ಮಲ್ಲಿ ಹೆಂಡಕುಡಿಯುವುದು ಅಯೋಗ್ಯತನ, ಅದು ನೀಚರು ಮಾಡುವ ಕೆಲಸ, ಅದು ಗೃಹಸ್ಥರು, ಮಾಡುವ ಕೆಲಸವಲ್ಲವೆಂದು ತಿಳಿದುಕೊಂಡಿದ್ದೇವೆ. ಈ ಕಾನೂನು ಮಾಡಿದ್ದರಿಂದ, ಈ ಪ್ರಾಹಿಬಿಷನ್ ತಂದಿದ್ದರಿಂದ ಅಲ್ಲಲ್ಲಿ ಕಳ್ಳಬಟ್ಟಿ ಸಾಗಾಣಿಕೆ ಬಂದಿದೆ. ಹೆಂಡ ಕುಡಿಯುವುದು ನಿಲ್ಲಲಿಲ್ಲ. ಸಮಾಜ ಹೇಳಬೇಕಾಗಿದೆ, ಹೆಂಡ ಕುಡಿಯುವುದು ತಪ್ಪು ಎಂದು. ಇದನ್ನು ಮಾಡಲು ಸರ್ಕಾರದ ಕೈಯಿಂದಲೂ ಆಗುವುದಿಲ್ಲ. ಪ್ರಾಹಿಬಿಷನ್ ಇಟ್ಟಿರಬೇಕು, ವ್ಯಭಿಚಾರ ವೃತ್ತಿ ಮಾಡಬಾರದು, ಹೆಂಡತಿ ಜೊತೆಯಲ್ಲಿ ಜೀವನ ಮಾಡಬೇಕು, ಸಂಸಾರಿಗಳಾಗಿರಬೇಕು, ಇದು ಯೋಗ್ಯ. ಶ್ರೀಮಾನ್ ಜತ್ತಿಯವರಾಗಲಿ ಶ್ರೀಮಾನ್ ಕೃಷ್ಣಪ್ಪನವರಾಗಲಿ, ಶ್ರೀಮಾನ್ ರಾಮರಾಯರಾಗಲಿ, ರೂಲ್ಸ್ ಮಾಡಿ ಕಾನೂನು ಮಾಡಿ, ಗೆಜೆಟ್‌ನಲ್ಲಿ ಪ್ರಕಟ ಮಾಡಿದರೆ ಆಗುವುದಿಲ್ಲ. ಮೂಲವನ್ನು ಕಡಿದು ಹಾಕುತ್ತೇವೆಂದು ಮೂಲ ತತ್ವಕ್ಕೆ ಸಂಚಕಾರ ಮಾಡುವುದು ಒಳ್ಳೆಯದಲ್ಲ. ಇದು ನಮ್ಮ ಧರ್ಮವಲ್ಲ. ಆಪರೇಟಿವ್ ಸೊಸೈಟಿಗಳು ಒಂದು ಕಡೆ, ಕನ್‌ಸ್ಯೂಮರ್ಸ್ ಕೋ ಆಪರೇಟಿವ್ ಸೊಸೈಟಿಗಳು ಇನ್ನೊಂದು ಕಡೆ ಇವರೆಡೂ ಯೋಗ್ಯ ರೀತಿಯಲ್ಲಿ ಕೆಲಸ ಮಾಡುವ ಪಕ್ಷದಲ್ಲಿ ಆಹಾರಧಾನ್ಯಗಳ ವಿತರಣೆ ಯಶಸ್ವಿಯಾಗಿ ನಡೆಯಬಹುದು. ಸಧ್ಯಕ್ಕೆ ಯಾವ ಒಂದು ಸಂಸ್ಥೆಯಾಗಲಿ, ಸರ್ಕಾರವಾಗಲಿ, ಈ ಮಾರಾಟವನ್ನು ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ಆಹಾರ ಧಾನ್ಯವನ್ನು ಒದಗಿಸುವುದು ಸರ್ಕಾರದ ಮೊದಲನೆ ಕೆಲಸ.

ಪ್ರೈಮರಿ ಡ್ಯೂಟಿ. ಆದ್ಯ ಕರ್ತವ್ಯ. ಅಂತಹ ಪರಿಸ್ಥಿತಿ ನಮ್ಮ ದೇಶದಲ್ಲಿ ಬಂದಿದೆಯೆನ್ನುವುದನ್ನು ಸರ್ಕಾರ ಪರ್ಯಾಲೋಚನೆ ಮಾಡಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

ಇನ್ನೊಂದು ಕಷ್ಟವಿರುವುದು, ಸಾಮಾನ್ಯವಾಗಿ ಮನಾಪಲಿ ಪ್ರೊಕ್ಯೂರ್‌ಮೆಂಟ್, ಈ ಆಹಾರ ಧಾನ್ಯಗಳ ವಿತರಣೆ ಮತ್ತು ಇತರ ಮಾರಾಟವನ್ನೆಲ್ಲಾ ಸರ್ಕಾರ ವಹಿಸಿಕೊಳ್ಳಬೇಕಾದರೆ ನೂರು ಕೋಟಿ ರೂಪಾಯಿಗಳೂ ಸಹ ಸಾಕಾಗುವುದಿಲ್ಲವೆಂದು ಹೇಳಿದ್ದಾರೆ. ಇವತ್ತು ರಾಜ್ಯ ಸರ್ಕಾರವಾಗಲಿ, ಕೇಂದ್ರ ಸರ್ಕಾರವಾಗಲಿ, ಈ ಹೆಚ್ಚಿನ ಹೊರೆಯನ್ನು ತೆಗೆದುಕೊಂಡು, ನೂರು ಕೋಟಿ ರೂಪಾಯಿಗಳನ್ನು ಅದರ ಮೇಲೆ ವೆಚ್ಚ ಮಾಡುವುದಕ್ಕೆ ಸಾಧ್ಯತೆ ಇದೆಯೇ ಎನ್ನುವುದನ್ನು ನೋಡಬೇಕು. 100 ಕೋಟಿ ರೂಪಾಯಿಗಳನ್ನು ಅದರ ಮೇಲೆ ವಿನಿಯೋಗ ಮಾಡಬೇಕಾದರೆ ಸರ್ಕಾರಕ್ಕೆ ಸಾಲದ ರೂಪದಿಂದ ತೆರಿಗೆ ರೂಪದಿಂದ ಬಂದಿರುವ ಹಣವನ್ನು ಈ ಕೆಲಸಕ್ಕೆ ತೆಗೆದುಕೊಳ್ಳಬೇಕು. ನಂತರ ವಿನಿಯೋಗ ಮಾಡಬೇಕು. ಈ ಹೊರೆಯನ್ನು ಸರ್ಕಾರ ವಹಿಸಿಕೊಳ್ಳದೆ ಇರುವ ಪಕ್ಷದಲ್ಲಿ ದೇಶಾಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಹಣ ದೊರೆಯುವುದಕ್ಕೆ ಅವಕಾಶವಾಗುತ್ತದೆ. ಈ ಸರ್ಕಾರ ನಾರ್ಮಲ್ ಚಾನಲ್‌ಗಳಲ್ಲಿ ನಡೆಸುವುದಕ್ಕೆ ಅವಕಾಶ ಮಾಡಿಕೊಟ್ಟರೆ ಅವರು 100 ಕೋಟಿ ಅಲ್ಲ, ಸಾವಿರ ಕೋಟಿ ಖರ್ಚು ಮಾಡುವುದಕ್ಕೆ ಸಿದ್ಧವಾಗಿದ್ದಾರೆ ಹಣವನ್ನು ವೆಚ್ಚ ಮಾಡುವುದನ್ನು ಬಿಟ್ಟು ಅವರಿಂದಲೇ ವಿತರಣೆಯಾಗುವುದನ್ನು ನಿಲ್ಲಿಸಿ, ಈ ಸರ್ಕಾರವೇ ಮಾಡುತ್ತದೆಯೆಂದರೆ ಹಣದ ಮುಗ್ಗಟ್ಟು, ಹಣದ ಅಭಾವದ ಕಾಲದಲ್ಲಿ ಸರ್ಕಾರಕ್ಕೆ ಹೆಚ್ಚು ಕೊರತೆಯಾಗಬಹುದೆಂದು ತಿಳಿದುಕೊಂಡಿದ್ದೇನೆ. ಮೂರನೆಯದು ಇದು ನನಗಾದರೂ ಅನಿಸುತ್ತದೆ ಏನೆಂದರೆ ಮೈಸೂರು ರಾಜ್ಯಕ್ಕೆ ಮಾತ್ರ ಅನ್ವಯಿಸತಕ್ಕದ್ದು. ಇದು ಇಡೀ ರಾಷ್ಟ್ರಕ್ಕೆ ಇಡೀ ಭರತಖಂಡಕ್ಕೆ ಅನ್ವಯಿಸತಕ್ಕ ಒಂದು ರೀತಿಯಲ್ಲಿ ಮಾಡಬೇಕು. ಪ್ರೈಸ್ ಕಂಟ್ರೋಲ್ ಮಾಡುವುದರಲ್ಲಾಗಲೀ, ವಿತರಣೆಯ ವಿಷಯದಲ್ಲಾಗಲೀ, ಅಥವಾ ಇನ್ನೂ ಮಿಕ್ಕ ಆಹಾರ ಧಾನ್ಯಗಳ ವಿಷಯದಲ್ಲಾಗಲೀ ಕೇಂದ್ರ ಸರ್ಕಾರ ಆಸಕ್ತಿ ವಹಿಸಿದರೆ ಇಡೀ ದೇಶಕ್ಕೆ ಅನ್ವಯಿಸತಕ್ಕ ಒಂದು ನೀತಿಯನ್ನು ಅನುಸರಿಸಬಹುದು, ಮತ್ತು ಅದರಿಂದ ಪ್ರಯೋಜನವಾಗುತ್ತದೆ ಇಲ್ಲವಾದರೆ ಆಗುವುದಿಲ್ಲ ಎಂದು ನಮ್ಮ ಆಹಾರ ಮಂತ್ರಿಗಳು ಹೇಳಿದ್ದಾರೆ. ಕೇಂದ್ರದ ಆಹಾರ ಮಂತ್ರಿಗಳೂ ಹೇಳಿದ್ದಾರೆ. ಆದರೆ ಇದು ಮೈಸೂರು ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ. ಇದಕ್ಕೆ ಕೇಂದ್ರ ಸರ್ಕಾರದವರು ಯಾವ ರೀತಿಯ ಸಹಾಯ ನೀಡುವುದಕ್ಕೆ ಸಿದ್ಧವಾಗಿದ್ದಾರೆ. ಮೈಸೂರು ರಾಜ್ಯ ಆಹಾರ ಧಾನ್ಯ ವಿತರಣೆಯ ಭಾರವನ್ನು ವಹಿಸಿಕೊಂಡ ಪಕ್ಷದಲ್ಲಿ ಇದಕ್ಕೆ ತಗಲತಕ್ಕ ಸರ್ಕಾರಿ ವೆಚ್ಚದಲ್ಲಿ ಎಷ್ಟು ಭಾಗವನ್ನು ಸಹಾಯ ರೂಪವಾಗಿ ಕೇಂದ್ರ ಸರ್ಕಾರದವರು ಕೊಡುತ್ತಾರೆ ಎನ್ನುವ ವಿಷಯವನ್ನು ಮಾನ್ಯ ಮಂತ್ರಿಗಳು ದಯವಿಟ್ಟು ತಿಳಿಸಬೇಕು. ನನಗಾದರೂ ಅನಿಸುತ್ತದೆ, ಈ ಒಂದು ಕಮ್ಯೂನಿಕೇಷನ್ ಡೆವಲಪ್‌ಮೆಂಟ್ ಆಗಿರುವಾಗ, ಇಡೀ ರಾಷ್ಟ್ರಕ್ಕೇ ಒಂದು ಏಕಮುಖವಾದ ನೀತಿ ಇರಬೇಕಾದುದು ಅತ್ಯಗತ್ಯವೆಂದು ನಾನು ಹೇಳುತ್ತೇನೆ. ಇದನ್ನು ಕೇಂದ್ರ ಸರ್ಕಾರದವರು ನಡೆಸುವಂತೆ ರಾಜ್ಯ ಸರ್ಕಾರದವರು ಒತ್ತಾಯ ಮಾಡಬೇಕೆಂದು ನಾನು ಹೇಳುತ್ತೇನೆ. ಒಂದು ಕಡೆ ಮೊನಾಪಲಿ ಪ್ರೊಕ್ಯೂರ್‌ಮೆಂಟ್ ಇದ್ದು ಇನ್ನೊಂದು ಅಕ್ಕಪಕ್ಕದ ರಾಜ್ಯಗಳಲ್ಲಿ ಮೊನೋಪಲಿ

ಪ್ರೊಕ್ಯೂರ್‌ಮೆಂಟ್ ಇಲ್ಲದ ಹೋದರೆ, ಜೀವನ ಯಾತ್ರೆಯು ಸುಗಮವಾಗಿ ನಡೆಯಲಾರದು. ಶ್ರೀ ಅಂಜನಪ್ಪನವರು ಹೇಳತಕ್ಕದ್ದು ಎಮರ್ಜೆನ್ಸಿಗೆ ಅನ್ವಯಿಸುತ್ತದೆ ಎಂದು ಕಾಣುತ್ತದೆ.

ನಿಮ್ಮಂತಹ ನಾಯಕರು ಇರುವಾಗ ಎಮರ್ಜೆನ್ಸಿಯನ್ನು ಉಳಿಸಿಕೊಂಡು ಬರಬಹುದು. ಎಲ್ಲಾ ಇರುತ್ತದೆ. ರಾಜ್ಯಗಳಲ್ಲಿ ಎಮರ್ಜೆನ್ಸಿ ಇರುತ್ತದೆ. ಡಿ.ಐ.ಆರ್ ಇರುತ್ತದೆ. ಆಹಾರ ಧಾನ್ಯವನ್ನು ಸರ್ಕಾರ ವಹಿಸಿಕೊಳ್ಳಲೇಬೇಕು ಎನ್ನುವ ಮಾತೂ ಇರುತ್ತದೆ.

ಇನ್ನು ಸರ್ಕಾರದವರು ಯಾವುದಾದರೂ ಒಂದು ಹೊಸ ಶಾಖೆಯನ್ನು ಆರಂಭಮಾಡುವಾಗ ಎಲ್ಲೆಲ್ಲಿ ಆ ಶಾಖೆ ಪ್ರಾರಂಭವಾಗುತ್ತದೆ, ಅಲ್ಲೆಲ್ಲಾ ಜನರು ಕೈಚಾಚುವುದು ಪ್ರಾರಂಭವಾಗುತ್ತದೆ. ಈ ರೀತಿಯ ಒಂದು ಅನ್ಯಾಯವನ್ನು ತೊಡೆದು ಹಾಕುವುದಕ್ಕೆ ಸರ್ಕಾರ ಏನೇನು ಕ್ರಮಗಳನ್ನು ತೆಗೆದುಕೊಳ್ಳಬೇಕೋ ಅದನ್ನು ಮಾಡಬೇಕೆಂದು ಈ ಸಮಯದಲ್ಲಿ ಸೂಚಿಸುತ್ತೇನೆ. ದೇಶದಲ್ಲಿ ಈ ಒಂದು ಲಂಚರುಷುವತ್ತುಗಳು ಹೆಚ್ಚಾಗಿ ನಡೆಯಬಾರದು, ಎಂದು ನನ್ನ ಉದ್ದೇಶ. ಈ ದೃಷ್ಟಿಯಿಂದ ಮೋನೋಪಲಿ ಪ್ರೊಕ್ಯೂರ್‌ಮೆಂಟನ್ನು ಸರ್ಕಾರ ವಹಿಸಿಕೊಳ್ಳಬೇಕೆನ್ನುವ ಸೂಚನೆಯನ್ನು ಅಂಗೀಕಾರ ಮಾಡುವ ಮೊದಲು ಸಾಮಾನ್ಯ ಪರಿಸ್ಥಿತಿಯನ್ನು ದೇಶದಲ್ಲಿ ತಂದು ಅಳವಡಿಸುವುದಕ್ಕೆ ಸಾಧ್ಯವೇ ಎಂಬುದನ್ನು ಪುನರ್‌ವಿಮರ್ಶೆಮಾಡಿ. ಅದು ಸಾಧ್ಯವಿಲ್ಲ ಎನ್ನುವ ಸಮಯದಲ್ಲಿ ಇದನ್ನು ಯೋಚನೆ ಮಾಡಬೇಕು. ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಬೇಕು. ಯಾರು ಯಾರು ಕೆಲಸ ಮಾಡುವುದಕ್ಕೆ ಸಮರ್ಥರು ಇರುತ್ತಾರೋ, ಯೋಗ್ಯರು ಇರುತ್ತಾರೋ, ಅವರ ಸೇವೆಯನ್ನು ಕೂಡ ಉಪಯೋಗ ಮಾಡಬೇಕು ಎನ್ನುವ ಸೂಚನೆಯನ್ನು ನಾನು ಮಾಡುತ್ತೇನೆ. ಇದರಲ್ಲಿರುವಂತಹ ತತ್ವ ಬಹಳ ಉಚಿತವಾದುದು, ಆದರೆ ಪ್ರಯೋಗಿಕವಾಗಿ ಮಾಡುವುದು ಬಹಳ ಕಷ್ಟ. ಇದನ್ನು ಮಾಡದೆ ಬೇರೆ ಗತ್ಯಂತರವಿಲ್ಲವೆನ್ನುವಾಗ ಮಾತ್ರ ಇದನ್ನು ಕೂಲಂಕುಷವಾಗಿ ಪರಿಶೀಲನೆ ಮಾಡಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

— * —

# VIII. ಕಾರ್ಮಿಕರ ಸಮಸ್ಯೆಗಳ ಕುರಿತಂತೆ ಪ್ರೊ. ಎಂ.ಪಿ.ಎಲ್ ಶಾಸ್ತ್ರಿಯವರ ಭಾಷಣಗಳು

## 1. ಸಮಾಜ ಕಲ್ಯಾಣ ಇಲಾಖೆಯ ಕುರಿತು ಕೃಷಿ ಮತ್ತು ಸಮಾಜ ಕಲ್ಯಾಣ ಸಚಿವರಾಗಿದ್ದ ಎನ್. ರಾಚಯ್ಯ ನವರೊಂದಿಗೆ ನಡೆದ ಸಂಭಾಷಣೆಯಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಯಾವ ಯಾವ ಬಾಬುಗಳಿಗೆ ಸಮಾಜ ಕಲ್ಯಾಣ ಮಂಡಲಿಯು 80 ಲಕ್ಷ ರೂಪಾಯಿಗಳನ್ನು ಕೇಳಿದೆ?

ಶ್ರೀ ಎನ್. ರಾಚಯ್ಯ : For the maintainance of State board. office, amounts released for the welfare extension projects, amounts released from the state funds. ಅದಕ್ಕೋಸ್ಕರ ಪ್ರಾಜೆಕ್ಸ್ ಮೈನ್‌ಟೆನನ್ಸ್ ಕೇಳುತ್ತಿದ್ದಾರೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಪ್ರಾಜೆಕ್ಟ್‌ಗಳನ್ನು ಮೈನ್‌ಟೈನ್ ಮಾಡುವುದಕ್ಕೆ ಸರ್ಕಾರದಿಂದ ಸಹಾಯ ದ್ರವ್ಯ ಬಾರದೆ ಹೋದರೆ ಪ್ರಾರಂಭ ಮಾಡಿರತಕ್ಕ ಪ್ರಾಜೆಕ್ಟುಗಳನ್ನು ನಿಲ್ಲಿಸಬೇಕಾಗುತ್ತದೆ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಶ್ರೀ ಎನ್. ರಾಚಯ್ಯ : ಸರ್ಕಾರದ ಗಮನಕ್ಕೆ ಬಂದಿದೆ. ಆದರೆ ಕೇಂದ್ರ ಸರ್ಕಾರದವರ ನೀತಿಗನುಗುಣವಾಗಿ ಕಾರ್ಯಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಈ ಹಣ ಕೊಡದಿದ್ದರೆ 5 ವರ್ಷ ಕಾಲದಲ್ಲಿ ಮಕ್ಕಳಿಗಾಗಿ ಮತ್ತು ಮಹಿಳೆಯರಿಗಾಗಿ ಮಾಡಿರತಕ್ಕ ವೆಲ್‌ಫೇರ್ ಪ್ರಾಜೆಕ್ಟುಗಳನ್ನು ಮುಂದುವರಿಸುವುದಕ್ಕೆ ಯಾವ ಕಾರ್ಯಕ್ರಮವನ್ನು ಸರ್ಕಾರದವರು ಕೈಗೊಳ್ಳುತ್ತಾರೆ?

ಶ್ರೀ ಎನ್. ರಾಚಯ್ಯ : ವಾಲಂಟರಿ ಏಜೆನ್ಸಿಗೆ ಎಂಟ್ರಸ್ಟ್ ಮಾಡುವುದನ್ನು ಸರ್ಕಾರ ಯೋಚನೆ ಮಾಡುತ್ತದೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಮೈಸೂರು ದೇಶದಲ್ಲಿ 5 ಕಡೆ ಸಾರ್ವಜನಿಕರ ಕ್ಷೇತ್ರಗಳಲ್ಲಾಗಲೀ ಅಥವಾ ತಾಲ್ಲೂಕು ಬೋರ್ಡು ಅಥವಾ ಪಂಚಾಯಿತಿಗಳಾಗಲೀ ಅದನ್ನು ತೆಗೆದುಕೊಳ್ಳುವುದಕ್ಕೆ ಒಪ್ಪಿಲ್ಲ, ಎಂಬುದು ಸರ್ಕಾರದ ಗಮನಕ್ಕೆ ಬಂದಿದೆಯೆ?

ಶ್ರೀ ಎನ್. ರಾಚಯ್ಯ : ಎಲ್ಲಿ ಮುಂದೆ ಬಂದು ತೆಗೆದುಕೊಳ್ಳುತ್ತಾರೋ ಅಂಥಾ ಕಡೆ ಕೊಡುತ್ತೇವೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಎಂಬತ್ತು ಲಕ್ಷ ರೂಪಾಯಿಗಳಲ್ಲಿ ಎಷ್ಟು ಲಕ್ಷ ರೂಪಾಯಿಗಳನ್ನು ಕೊಡುವುದಕ್ಕೆ ಸರ್ಕಾರ ಒಪ್ಪಿಕೊಂಡಿದೆ?

---

1. ಸಮಾಜ ಕಲ್ಯಾಣ ಇಲಾಖೆಯ ಕುರಿತು 3.4.1961 ರಂದು ನಡೆಸಿದ ಸಂಭಾಷಣೆಯಲ್ಲಿ ಕೃಷಿ ಮತ್ತು ಸಮಾಜ ಕಲ್ಯಾಣ ಸಚಿವರಾಗಿದ್ದ ಎನ್. ರಾಚಯ್ಯ ನವರೊಂದಿಗೆ

ಶ್ರೀ ಎನ್. ರಾಚಯ್ಯ : 1961–62ನೇ ಸಾಲಿನಲ್ಲಿ 3 ಲಕ್ಷ 17 ಸಾವಿರ ರೂಪಾಯಿಗಳನ್ನು ಮಾತ್ರ ಕೊಡಬೇಕೆಂದು ಸರ್ಕಾರ ಯೋಜನೆ ಮಾಡಿದೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : 3 ಲಕ್ಷ 17 ಸಾವಿರ ರೂಪಾಯಿಗಳನ್ನು 5 ವರ್ಷಗಳಿಗೆ ಸಮಾಜ ಕಲ್ಯಾಣ ಕೇಂದ್ರಕ್ಕೆ ಕೊಡುತ್ತೀರಿ. ಆ ಹಣಕ್ಕೂ ಹಿಂದೆ ಕೊಟ್ಟದ್ದಕ್ಕೂ ದಾಮಾಷಾ ಎಷ್ಟಾಗುತ್ತದೆ?

ಶ್ರೀ ಎನ್. ರಾಚಯ್ಯ : ದಾಮಾಷಾದ ಪ್ರಶ್ನೆಯಲ್ಲಿ ಕೇಂದ್ರ ಸರ್ಕಾರ ಯೋಚನೆ ಮಾಡುತ್ತಿದೆ. ನಮ್ಮ ಸ್ಟೇಟ್ ವರ್ಕಿಂಗ್ ಗ್ರೂಪ್, ಕೇಂದ್ರ ಸರ್ಕಾರದ ವರ್ಕಿಂಗ್ ಗ್ರೂಪ್, ಬಹಳ ಪ್ರಯತ್ನ ಮಾಡುತ್ತಿದ್ದಾರೆ. ಅವರು ಒಂದು ತೀರ್ಮಾನಕ್ಕೆ ಬಂದನಂತರ ಸೂಕ್ತ ಕಾರ್ಯಕ್ರಮವನ್ನು ತೆಗೆದುಕೊಳ್ಳುತ್ತೇವೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ಸಮಾಜ ಕಲ್ಯಾಣ ಬೋರ್ಡಿನವರು ಮಹಿಳೆಯರಿಗೆ ಮತ್ತು ಮಕ್ಕಳಿಗೆ ಮಾಡತಕ್ಕ ಕೆಲಸ ನಿಯಮಬದ್ಧವಾದ ರೀತಿಯಲ್ಲಿ ನಡೆಯಲಿಕ್ಕೆ ಸೂಪ್ರವಿಜನ್ ಮತ್ತು ಪ್ರಾಜೆಕ್ಟ್ ಸ್ಕ್ರೂಟನಿ ಮಾಡುವುದಕ್ಕೆ ಏರ್ಪಾಡು ಮಾಡಿದ್ದೀರಾ?

ಶ್ರೀ ಎನ್. ರಾಚಯ್ಯ : ಅವರೇ ಸ್ವಂತ ಜವಾಬ್ದಾರಿಯಿಂದ ಮಾಡುತ್ತಾ ಇರುವುದರಿಂದ ಸರ್ಕಾರ ಈ ಕೆಲಸದಲ್ಲಿ ಈ ತನಕ ಕೈಹಾಕಿಲ್ಲ. ಸರ್ಕಾರದ ನೀತಿಗನುಗುಣವಾಗಿ ಅವರು ಕೆಲಸ ಮಾಡುತ್ತೇವೆಂದು ಒಪ್ಪಿಕೊಂಡ ಮೇಲೆ ಯಾವ ತೊಂದರೆಯೂ ಇಲ್ಲದ ರೀತಿಯಲ್ಲ ನಡೆದುಕೊಂಡು ಬರುತ್ತಿದೆ. ಸರ್ಕಾರದ ನೀತಿ ಬದಲಾವಣೆಯಾಗಿ ವಾಲಿಂಟರಿ ಏಜೆನ್ಸಿಗೆ ಒಪ್ಪಿಸತಕ್ಕ ಪ್ರಶ್ನೆ ಬಂದಾಗ ಸೂಕ್ತವಾದ ಕ್ರಮ ತೆಗೆದುಕೊಳ್ಳುವುದಕ್ಕೆ ಯೋಜನೆ ಮಾಡುತ್ತೇವೆ.

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : ತಾವು ಬಾಲವಾಡಗಳ ಮತ್ತು ಡಿಪಾರ್ಟ್‌ಮೆಂಟ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್ ಕೆಳಗೆ ಮಹಿಳಾ ಸಮಾಜ ಏನು ಇದೆ ಅದನ್ನು ಡೈರಕ್ಟರಿ ಆಫ್ ಇಂಡಸ್ಟ್ರೀಸ್ ಅಂಡ್ ಕಾಮರ್ಸ್, ಮಹಿಳಾ ಸಮಾಜದ ಸೂಪರ್‌ವಿಜನ್ ಮತ್ತು ಪರಿಶೀಲನೆಗೆ ವರ್ಗಾಯಿಸುವುದಕ್ಕೆ ಆಲೋಚನೆ ಮಾಡಿದ್ದೀರಾ?

ಶ್ರೀ ಎನ್. ರಾಚಯ್ಯ : ಕೇಂದ್ರ ಸರ್ಕಾರದವರ ಜೊತೆಯಲ್ಲಿ ಈ ವಿಚಾರವನ್ನು ಪ್ರಸ್ತಾಪ ಮಾಡುತ್ತೇವೆ.

## 2. ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 60ಕ್ಕೆ ಹೆಚ್ಚಿಸುವ ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ನಾಮನಿರ್ದೇಶನ ಹೊಂದಿದವರು) : ಮಾನ್ಯ ಸಭಾಪತಿಗಳೇ, ಮಾನ್ಯ ಸದಸ್ಯರಾದ ಶ್ರೀಮಾನ್ ಮುಕುಂದರಾಯರು ಯಾವ ರೂಪದಲ್ಲಿ ಈ ನಿರ್ಣಯವನ್ನು ಮಂಡಿಸಿದ್ದಾರೋ ಆ ರೂಪದಲ್ಲಿ ಇದನ್ನು ಒಪ್ಪಿಕೊಳ್ಳುವುದಕ್ಕೆ ಅವಕಾಶವಿಲ್ಲವೆಂದು ಹೇಳುತ್ತಿದ್ದೇನೆ. ಸರ್ಕಾರಿ ನೌಕರರ ನಿವೃತ್ತಿಯ ವಯಸ್ಸನ್ನು 60 ವರ್ಷಕ್ಕೆ ಹೆಚ್ಚಿಸಬೇಕೆಂದು ಹೇಳುವಾಗ ಯಾವ

2. ಸರ್ಕಾರಿ ನೌಕರರ ನಿವೃತ್ತಿ ವಯಸ್ಸನ್ನು 60ಕ್ಕೆ ಹೆಚ್ಚಿಸುವ ಕುರಿತಂತೆ 20.9.1963ರಂದು ನಡೆದ ಚರ್ಚೆಯಲ್ಲಿ

ಯಾವ ಪ್ರಕರಣದಲ್ಲಿ ಹೆಚ್ಚಿಸಬೇಕು, ಯಾವ ನೌಕರರ ವಯೋಮಿತಿಯನ್ನು 60ಕ್ಕೆ ಹೆಚ್ಚಿಸಬೇಕು ಎಂಬುದನ್ನು ಹೇಳಿಲ್ಲ. ಎಲ್ಲ ಸರ್ಕಾರಿ ನೌಕರರ ವಯೋಮಿತಿಯನ್ನು 60ಕ್ಕೆ ಹೆಚ್ಚಿಸಬೇಕೆಂದು ಅವರು ಹೇಳುವಾಗ ಇದಕ್ಕೆ ಅವರು ಕೊಟ್ಟಿರುವ ಕಾರಣ, ವಿದ್ಯಾವಂತ ಯುವಕರು ಯುದ್ಧಕ್ಕೆ ಸೇರಲು ಪ್ರೇರೇಪಿಸುವ ದೃಷ್ಟಿಯಿಂದ ಎಂದು ಇದು ಸ್ವಲ್ಪ ಹಾಸ್ಯಾಸ್ಪದವಾಗಿದೆ. ವಾನಪ್ರಸ್ಥಾಶ್ರಮಕ್ಕೆ ಹೋಗುವ ಕಾಲದಲ್ಲಿ ಎಂದರೆ 56–58ನೆಯ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಅಂಟಿಕೊಂಡಿರುತ್ತೇನೆಂದು ಹೇಳಿ ಮಕ್ಕಳು ಯುದ್ಧಕ್ಕೆ ಹೋಗಬೇಕೆಂದರೆ, ಅವರು ಏನು ಯೋಚನೆ ಮಾಡುತ್ತಾರೆಂದು ಹೇಳಬೇಕು. ಸರ್ಕಾರ ನಿವೃತ್ತಿಯ ವಯಸ್ಸನ್ನು 60ಕ್ಕೆ ಹೆಚ್ಚಿಸಿದ ಮಾತ್ರಕ್ಕೇ ನಮ್ಮ ಸೈನ್ಯಕ್ಕೆ ಯುವಕರು ಬರುತ್ತಾರೆಯೇ? ಈ ಕೆಲಸವನ್ನು ಮಾಡದಿದ್ದರೆ ದೇಶಭಕ್ತಿಯಿಂದ ದೇಶಾಭಿಮಾನದಿಂದ ಯುದ್ಧಕ್ಕೆ ಸೇರುವುದಿಲ್ಲವೆ ಎನ್ನುವುದನ್ನು ಯೋಚನೆ ಮಾಡುವುದು ಅಗತ್ಯ. ಈ ಹೊತ್ತು ಸರ್ಕಾರಿ ನೌಕರರ ನಿವೃತ್ತಿಯ ವಯೋಮಿತಿ 55 ವರ್ಷವೆಂದಿದೆ, ಇದನ್ನು 60ಕ್ಕೆ ಏರಿಸಬೇಕೆಂಬುದಲ್ಲಿರುವುದು ಒಂದೇ ಯೋಚನೆ, ಅದು ಉದ್ಯೋಗದ ದೃಷ್ಟಿ.

ಈಗ 55 ರಿಂದ 60 ವರ್ಷದ ವಯಸ್ಸಿನವರೆಗೆ ಬರಬಹುದಾಂಥ ಅನುಭವವನ್ನು ತೆಗೆದು ಕೊಳ್ಳಬಾರದು ಎಂಬುದಾಗಿ ಶ್ರೀಮಾನ್ ಶ್ರೀನಿವಾಸ ಶೆಟ್ಟರು ಅಭಿಪ್ರಾಯಪಟ್ಟಿದ್ದಾರೆ. ನಾನು ಅದನ್ನು ಒಪ್ಪುತ್ತೇನೆ. ಯಾವ ಒಂದು ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಾಗಲೀ ಅಥವಾ ಶಿಕ್ಷಣ ಕ್ಷೇತ್ರವಲ್ಲಾಗಲೀ ಅಥವಾ ಇನ್ನೊವುದೇ ಇಲಾಖೆಯಲ್ಲಾಗಲೀ ಅನುಭವವಿರತಕ್ಕ ಮೇಧಾವಿಗಳ ಮತ್ತು ದೇಶಭಕ್ತರ ಸೇವೆಯನ್ನು ತೆಗೆದುಕೊಳ್ಳಬಾರದು ಎಂಬುದು ನಿಜ. ಆ ಪ್ರಕರಣದ ವ್ಯವಸ್ಥೆ ಏನೆಂಬುದನ್ನು ಈ ನಿರ್ಣಯದಲ್ಲಿ ಸೂಚನೆ ಮಾಡಿಲ್ಲ. ಈ ರೀತಿಯಾದ ಎರಡು ಪ್ರಬಲ ವಿರೋಧ ಅಭಿಪ್ರಾಯ ನಮ್ಮ ದೇಶದಲ್ಲಿ ಇತ್ತೀಚೆಗೆ ಬರುತ್ತಾ ಇರುವುದರಿಂದಲೇ ಇವತ್ತು ಸಾಮಾನ್ಯವಾದಂಥ ಶಿಕ್ಷಣ ಬೆಳೆಯುತ್ತಾ ಇದೆ. ಇಂತಹ ಶಿಕ್ಷಣ ಬೆಳೆಯುತ್ತಿರುವ ಕಾಲದಲ್ಲಿ ಎಲ್ಲರೂ ಸುಲಭವಾಗಿರತಕ್ಕ ಸರ್ಕಾರೀ ನೌಕರಿಯನ್ನೇ ಮಾತ್ರ ಪಡೆಯಬೇಕು ಎಂಬ ಆಶಯನ್ನು ಇಟ್ಟುಕೊಂಡಿದ್ದಾರೆ. ಇದು ನಮ್ಮ ದೇಶ ಸೌಭಾಗ್ಯವೆಂದು ಹೇಳುವ ಹಾಗಿಲ್ಲ. ಇತ್ತೀಚೆಗೆ ವಿದ್ಯಾವಂತರ ನಿರುದ್ಯೋಗ ಸಂಖ್ಯೆ ಏರುತ್ತಿರುವ ಕಾಲದಲ್ಲಿ ವಯೋಮಿತಿಯನ್ನು 58 ರಿಂದ 60ರವರೆಗೆ ಹೆಚ್ಚು ಮಾಡುವುದು ನಿಜವಾಗಿ ದೇಶದ ಶಾಂತದೃಷ್ಟಿಯಿಂದ ಹಿತದೃಷ್ಟಿಯಿಂದ ಸರ್ಕಾರಕ್ಕೆ ಇದು ಸಮ್ಮತಿಯಾಗಿರುವುದೇ ಎಂಬುದನ್ನು ಯೋಚನೆ ಮಾಡಬೇಕು. ಮೊದಲನೆಯದಾಗಿ ಇಂಡಿಯಾ ದೇಶದ ಉಚ್ಚ ಶ್ರೇಷ್ಠ ನ್ಯಾಯಾಲಯದಲ್ಲಿ ಜಡ್ಜ್‌ಗಳಿಗೆ 65ನೇ ವರ್ಷದ ವಯಸ್ಸಿನವರಿಗೆ ವಯಸ್ಸು ಮಿತಿ ಮಾಡಿದ್ದಾರೆ. ಇತ್ತೀಚಿನ ಸಂವಿಧಾನದ ಬದಲಾವಣೆಗಳ ಪ್ರಕಾರ ರಾಜ್ಯಗಳ ನ್ಯಾಯಸ್ಥಾನಗಳ ನ್ಯಾಯಧೀಶರ ವಯಸ್ಸನ್ನು 80ಕ್ಕೆ ಹೆಚ್ಚಿಸಿದ್ದಾರೆ. ಐ.ಎ.ಎಸ್. ಅಧಿಕಾರಿಗಳ ವಯಸ್ಸನ್ನು 58ಕ್ಕೆ ಕೇಂದ್ರ ಸರ್ಕಾರ ಏರಿಸಿದೆ. ಆಗ ಈ ಸರ್ಕಾರವನ್ನು ಏತಕ್ಕೆ ಆ ರೀತಿ ಏರಿಸಬಾರದು ಎಂಬುದಾಗಿ ಸಾಮಾನ್ಯವಾಗಿ ನೌಕರವರ್ಗದವರು ಕೇಳುವುದೇನೋ ಸಹಜ. ಸಾಮಾನ್ಯವಾಗಿ ನೌಕರವರ್ಗದವರ ವಯಸ್ಸನ್ನು 60ಕ್ಕೆ ಏರಿಸುವುದಕ್ಕೆ ಸಂಕುಚಿತ ಕ್ಷೇತ್ರಗಳ ಅನುಭವವೇ ಪ್ರಮುಖವಾಗಿರತಕ್ಕದ್ದು. ಇಲ್ಲಿ ಒಳ್ಳೆಯ ಶಕ್ತಿ ಅನುಭವವಿರತಕ್ಕ ಯೋಗ್ಯರು ಅಧಿಕ ಸಂಖ್ಯೆಯಲ್ಲಿ ಸಿಕ್ಕುವುದಿಲ್ಲ ಎಂಬ ಒಂದು ಕ್ಷೇತ್ರಕ್ಕೆ ಇದನ್ನು ಇಳಿಸುವುದು ಸರಿಯಲ್ಲವೆಂದು ನಾನು

ಅಭಿಪ್ರಾಯಪಟ್ಟಿದ್ದೇನೆ. ಶ್ರೀಮಾನ್ ಶ್ರೀನಿವಾಸ ಶೆಟ್ಟರು ಹೇಳಿದ ಹಾಗೆ ಎಷ್ಟೋ ಜನ ನ್ಯಾಯಾಧೀಶರು ಕೋರ್ಟಿನಲ್ಲಿ ಬೆಂಚಿನ ಮೇಲೆ ಕುಳಿತುಕೊಂಡೇ ಪ್ರಾಣ ಬಿಟ್ಟಿರುವ ನಿರ್ದೇಶನಗಳು ಬೇಕಾದಷ್ಟಿವೆ. ಮನೆಯಲ್ಲಿಯೇ ಮರಣವಾಗಬೇಕು. ಹೊರಗಡೆ ಬೀದಿಯಲ್ಲೋ ಅಥವಾ ಇನ್ನಾವ ಸ್ಥಳದಲ್ಲೋ, ಬೆಂಚಿನ ಮೇಲೋ ಹೀಗೆ ಪ್ರಾಣ ಹೋದರೆ ಅದು ದುರ್ಮರಣವೆಂಬುದಾಗಿ ಹಿಂದೂಸಂಪ್ರದಾಯವಿದೆ. ಆದರೆ ಇವರನ್ನು ತಪ್ಪಿಸಿ ಇವರಿಂದ ಆ ಸೇವಾವೃತ್ತಿಯನ್ನು ಕಿತ್ತುಕೊಳ್ಳಬೇಕೆಂದಲ್ಲ. ಉದ್ಯೋಗದಲ್ಲಿ ಯಾವುದೇ ಆಗಲೀ ಅವನು 60ನೇ ವರ್ಷದ ವಯಸ್ಸಿನವರೆಗೂ ಇರಬೇಕೆಂದು ಹೇಳುವುದು ಅವನ ದೃಷ್ಟಿಯಲ್ಲಿ ವೇತನ ಮತ್ತು ಸಂಪಾದನೆ ಮಾಡಬೇಕು ಎನ್ನುವುದಕ್ಕೆ ಮಾತ್ರ ಇಷ್ಟೇ ಅಲ್ಲಾ; ವೇತನ ಮತ್ತು ಸಂಭಾವನೆ ಅವನಿಗೆ ಕೊಟ್ಟು ಆ ಸ್ಥಾನಕ್ಕೆ ರಾಜಕೀಯದಲ್ಲಿರತಕ್ಕ ಜನಗಳನ್ನು ತೆಗೆದುಕೊಳ್ಳದೇ ಹೋದರೆ ಯುವಕರಿಗೆ ಎಷ್ಟರ ಮಟ್ಟಿಗೆ ಬುದ್ಧಿಶಕ್ತಿ, ಮೇಧಾವಿತನ ಬರುತ್ತದೆ. ಇದು ಮದುವೆ ಮಾಡಿಕೊಂಡವರಿಗೆ ಇರತಕ್ಕ ಅನುಭವ ಮದುವೆ ಮಾಡಿಕೊಳ್ಳದವನಿಗೆ ಬರಬೇಕು ಎನ್ನುವ ಹಾಗಾಗುತ್ತದೆ. ವಿದ್ಯಾವಂತನಾಗಿ ಉದ್ಯೋಗವಿಲ್ಲದೇ ಇರತಕ್ಕವನಿಗೆ ಸಾಕಷ್ಟು ಅನುಭವಬರಬೇಕಾದರೆ ನೌಕರಿಯಲ್ಲಿ ಸೇರಿ ಜನಸೇವೆ ಮಾಡತಕ್ಕ ಕೆಲಸ ಅದರಲ್ಲೂ ಪ್ರಜಾಪ್ರಭುತ್ವದಲ್ಲಿರುವಾಗ ರಾಜಕೀಯ ಪಕ್ಷದ ಸೂತ್ರಗಳನ್ನು ರೀತಿ ನೀತಿಗಳನ್ನು ಅನುಸರಿಸತಕ್ಕ ದೇಶಭಕ್ತಿಯನ್ನು ಮೊದಲು ಕಲಿಯಬೇಕು. ಅಂಥಾದ್ದನ್ನು ಕಲಿಯದಿದ್ದರೆ ದೇಶದಲ್ಲಿ ಅಭಿವೃದ್ಧಿ ಕಾರ್ಯಗಳು ಉಂಟಾಗುವುದರಲ್ಲಿ ಸ್ವಲ್ಪ ಮಟ್ಟಿಗೆ ಕಷ್ಟವಾಗುತ್ತದೆಂದು ನಾನು ಭಾವನೆ ಮಾಡಿಕೊಂಡಿದ್ದೇನೆ. ನಮ್ಮ ದೇಶದಲ್ಲಿ ಇದು ಕೇವಲ ಆರ್ಥಿಕ ದೃಷ್ಟಿಯಿಂದ ಮಾತ್ರವೆಂಬುದಾಗಿ ನಾನು ಚೆನ್ನಾಗಿ ತಿಳಿದಿದ್ದೇನೆ. ನಾಲ್ಕಾರು ಕಡೆ ನಾನು ಕಣ್ಣಾರೆ ನೋಡಿದ್ದೇನೆ. ಶಿಕ್ಷಕರ ವೃತ್ತಿಗೆ ಮತ್ತು ಗುಮಾಸ್ತನ ವೃತ್ತಿಗೆ ತಂದೆ ಮತ್ತು ಮಗ ಇಬ್ಬರೂ ಅರ್ಜಿಗಳನ್ನು ಹಾಕಿಕೊಂಡಿರುವುದನ್ನು ನಾನು ನೋಡಿದ್ದೇನೆ. ಇದು ಬಹಳ ದುಃಖಕರವಾದ ವಿಷಯ. ಮಗನನ್ನು ಯಾವುದಾದರೂ ಒಂದು ರೀತಿಯಲ್ಲಿ ಮುಂದುವರೆಸಬೇಕು ಎನ್ನತಕ್ಕ ತಂದೆ ಮಗ ಯಾವ ಸ್ಥಾನವನ್ನು ಅವಲಂಬನೆ ಮಾಡುತ್ತಾನೋ ನೋಡೋಣವೆಂಬುದಾಗಿ ಆಶೆಪಡುತ್ತಾನೆ. ಮತ್ತು ಒಂದೊಂದು ವೇಳೆ ಆ ಸ್ಥಾನಕ್ಕೆ ಕಾಂಪಿಟಿಟರ್‌ನಾಗಿ ನಿಂತು ತನ್ನ ಮಗನ ಮೇಲೆಯೇ ಆ ಸ್ಥಾನಕ್ಕೆ ಹೋರಾಟ ನಡೆಸಿ ಆ ಸ್ಥಾನವನ್ನು ಗಳಿಸುತ್ತಾನೆ. ಆದ್ದರಿಂದ ಮುದುಕರಾದವರು ಹೆಚ್ಚು ವಯಸ್ಸಾದ ಮೇಲೆ ಸರ್ಕಾರೀ ಕೆಲಸದಲ್ಲಿ ಮುಂದುವರೆಯುವುದು ಸರಿಯಲ್ಲ. ವಾನಪ್ರಸ್ಥದಲ್ಲಿರುವ ಜನಗಳಿಗೆ ಇದು ಯೋಗ್ಯವಲ್ಲ.

ತರುಣನಾಗಿರತಕ್ಕವನು ನೌಕರಿಗೋಸ್ಕರ ಏತಕ್ಕೆ ಅರ್ಜಿ ಹಾಕುತ್ತಾನೆಂದರೆ ಅವನಿಗೆ ಜೀವನ ನಡೆಯುವುದಿಲ್ಲ. ಬಹಳ ಕಷ್ಟ ಜೀವನದಲ್ಲಿರುತ್ತಾನೆ. ತಾನು ಮುಖ್ಯವಾಗಿ ದುಡಿಯಬೇಕೆಂದು ಆಶೆಯೇ ಇಲ್ಲ. ಹಣ ಗಳಿಸಬೇಕೆಂಬ ಆಶೆಯೇ ಇರುತ್ತದೆ. ಹಣ ಗಳಿಸಬೇಕಾದರೆ ಚೆನ್ನಾಗಿ ದುಡಿಯುವುದು ಅಗತ್ಯ. ನಿರುದ್ಯೋಗ ಸಮಸ್ಯೆಯನ್ನು ತಪ್ಪಿಸುವುದಕ್ಕೆ ಪ್ರಜಾಪ್ರಭುತ್ವ ಸರ್ಕಾರ ಯಾವ್ಯಾವ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೋ ಹಾಗೆಯೇ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸುವುದಕ್ಕೂ, ಕೈಗೊಳ್ಳಬೇಕು. ವಿಶ್ರಾಂತಿ ವೇತನ ಪಡೆಯುವ ಜನಗಳಿಗೆ ನಿರುದ್ಯೋಗಿ ಜನಗಳಿಗೆ ಎಷ್ಟು ಕಷ್ಟವಿದೆಯೋ ಅಷ್ಟು ಕಷ್ಟವಿರುವುದಿಲ್ಲ. ಶ್ರೀಮಾನ್ ಮುಕುಂದರಾಯರು ಸರ್ಕಾರದ

ಹಣಕಾಸಿನ ದೃಷ್ಟಿ ಯೋಗ್ಯವಾದೀತೆಂಬ ಭರವಸೆಯಿಂದ ಕೆಲವರು ಸಲಹೆಗಳನ್ನು ಮುಂದೆ ನಿರ್ಣಯದ ಮೂಲಕ ಇಟ್ಟಿದ್ದಾರೆ. ಅವರು ಈ ವಿಶ್ರಾಂತಿ ವೇತನವೆನ್ನುವುದು ಏನಿದೆ ಇದನ್ನು ಡೆಫರ್ಡ್‌ವೇಮೆಂಟಾಗಿ ಹಾಕಿಕೊಂಡು ಬಂದಿದ್ದಾರೆ. ಕೆಲಸ ಮಾಡುವ ಕಾಲದಲ್ಲಿ ಹೆಚ್ಚು ಸಂಬಳ ಕೊಡುತ್ತಾರೆ. ಆದರೆ ವಯಸ್ಸಾದಮೇಲೆ ಕೆಲಸ ಮಾಡುವುದಕ್ಕೆ ಅಷ್ಟೊಂದು ದೈಹಿಕ ಶಕ್ತಿ ಇಲ್ಲದೇ ಇರುವಾಗ ಮಾನಸಿಕ ಶಕ್ತಿಯೆಲ್ಲಾ ಮುಗಿದಿರುವಾಗ ಆ ಸಮಯದಲ್ಲಿ ಅವರಿಗೆ ಸರ್ಕಾರಿ ನೌಕರಿ ಕೊಡುತ್ತೇವೆಂದು ಹೇಳುವುದು ಸಾಧುವಾದುದಲ್ಲ. ಆರ್ಥಿಕ ದೃಷ್ಟಿಯಿಂದ 60 ವರ್ಷಗಳ ವಯಸ್ಸಿನವರೆಗೂ ಅವರನ್ನು ಮುಂದುವರೆಸಿಕೊಂಡು ಹೋಗಬೇಕೆಂದು ನನ್ನ ಮಾನ್ಯ ಸ್ನೇಹಿತರು ತಂದಿರುವ ನಿರ್ಣಯದಲ್ಲಿ ಅರ್ಥವಿಲ್ಲ. ಇದರಿಂದ ನಿರುದ್ಯೋಗ ಸಮಸ್ಯೆ ಬಗೆಹರಿದಂತಾಗುವುದಿಲ್ಲ. ಇದನ್ನು ಇನ್ನೂ ಹೆಚ್ಚು ಮಾಡಿಕೊಂಡು ಹೋಗಬೇಕೆಂಬ ಅಭಿಪ್ರಾಯವೇನಿದೆಯೋ ಅದು ಅಷ್ಟು ಯೋಗ್ಯವಾದುದು ಎಂದು ನಾನು ಭಾವಿಸುವುದಿಲ್ಲ. ಯುವಕರ ದೃಷ್ಟಿಯಲ್ಲಿಯೂ ಇದು ಸಾಧ್ಯವಾದುದಲ್ಲವೆಂದು ನಾನು ಹೇಳುತ್ತೇನೆ. ಇದು ಒಂದು ಒಳ್ಳೆಯವಾದವಾದರೂ ಕೆಲವು ಪ್ರಕರಣಗಳಲ್ಲಿ ಮಾತ್ರ ಅನುಭವಸ್ಥರ ಅವಶ್ಯವಾದೀತು ಎಂದು ನಾನು ತಿಳಿದುಕೊಂಡಿದ್ದೇನೆ. ಇವತ್ತು ನಮ್ಮ ದೇಶದ ರಕ್ಷಣಾ ಸೈನ್ಯಕ್ಕೆ ಅನುಭವಸ್ಥರಾದ ಎಂಜಿನಿಯರುಗಳು, ವೈದ್ಯರುಗಳು ಬೇಕಾಗುವ ಸಂದರ್ಭಗಳಿರುತ್ತವೆ. ಅಂತಹ ಸಂದರ್ಭಗಳಲ್ಲಿ ಅಂತಹವರಿಗೆ ವಯಸ್ಸಿನ ಮಿತಿಯನ್ನು ಹೆಚ್ಚು ಮಾಡುವುದು ನಿಜವಾಗಿಯೂ ಯೋಗ್ಯ. ಅನುಭವ ಮತ್ತು ತರಬೇತು ಪಟ್ಟಂಥ ಜನಗಳು ಸಿಕ್ಕುವುದು ಸಹ ಕಷ್ಟ ಅನೇಕ ಹಿರಿಯ ಶಿಕ್ಷಕರನ್ನು ವಿದ್ಯಾಶಾಲೆಗಳು ಹೆಚ್ಚು ಹೆಚ್ಚಾಗಿ ಇತ್ತೀಚೆಗೆ ಸೆಳೆಯುವ ಪ್ರಕರಣದಲ್ಲಿ ಜನಸೇವೆಗಾಗಿ ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ಇದ್ದಿರಬಹುದೆಂದು ನನಗೆ ಕಾಣುತ್ತದೆ. ತಾಂತ್ರಿಕ ಕ್ಷೇತ್ರದಲ್ಲಿಯೇ ಆಗಲೇ, ಶಿಕ್ಷಣ ಕ್ಷೇತ್ರದಲ್ಲಿಯೇ ಆಗಲೀ ಒಳ್ಳೆಯ ಅನುಭವಸ್ಥರ ಮತ್ತು ತರಪೇತು ಹೊಂದಿದವರು ದೊರೆಯದೇ ಹೋದಾಗ ಅವರ ಸೇವೆಯನ್ನು ಉಪಯೋಗ ಮಾಡಿಕೊಳ್ಳುವುದರಲ್ಲಿ ಯಾವ ವಿಧವಾದ ತೊಂದರೆಯೂ ಇಲ್ಲ. ಅಂತಹ ಸಂದರ್ಭದಲ್ಲಿ ಅವರಿಗೆ extension of service ಕೊಡುವುದು ಯೋಗ್ಯ. ಶ್ರೀಮಾನ್ ಮುಕುಂದ ರಾಯರು ಇತ್ತ ಶ್ರೀಮಾನ್ ಶ್ರೀನಿವಾಸ ಶೆಟ್ಟರು, ಐ.ಎ.ಎಸ್. ಅಧಿಕಾರಿಗಳಿಗೆ 58ನೇ ವಯಸ್ಸಿನವರಿಗೂ ಏರಿಸಿರುವಾಗ ಸಾಮಾನ್ಯವಾಗಿ ಇವರಿಗೂ ಏತಕ್ಕೋಸ್ಕರ ಏರಿಸಬಾರದು ಎಂಬುದಾಗಿ ಕೇಳಿದರು. ಇಂಡಿಯಾ ದೇಶ ಸ್ವಾತಂತ್ರ್ಯ ಪಡೆದ ಮೇಲೆ ಹಿಂದೆ ಬ್ರಿಟಿಷರ ಆಳ್ವಿಕೆ ಕಾಲದಲ್ಲಿ ಐ.ಸಿ.ಎಸ್. ಆಫೀಸರು ಯಾರು ಇದ್ದಾರೋ ಅಂತಹವರನ್ನು ಕಾನ್‌ಸ್ಟಿಟ್ಯೂಷನ್ ಮೂಲಕ ಬಹುಸಂಖ್ಯಾತವಾಗಿ ನಾಮಿನೇಷನ್ ಮಾಡಿ ತೆಗೆದುಕೊಂಡರು. ಬಹುಜನ ಅಧಿಕಾರಿಗಳು ಈ ರೀತಿಯೂ ನೇಮಿಸಲ್ಪಟ್ಟಿರು. ಅದು ಕೆಲವು ಕಾಲ ನಮ್ಮಲ್ಲಿ ತಪ್ಪಿ ಹೋಯಿತು. ಆಮೇಲೆ ಆಲ್ ಇಂಡಿಯಾ ಎಗ್ಸಾಮಿನೇಷನನ್ನು ನಡೆಸಿದರು. ಎಮರ್ಜೆನ್ಸಿ ಕಾಲದಲ್ಲಿ ಐ.ಎ.ಎಸ್. ಕೇಡರಿಗೆ ಇತರ ಶಾಖೆಯಲ್ಲಿದ್ದಂತಹ ಜನರನ್ನು ಅವರ ಪ್ರಾಜ್ಞಶಕ್ತಿ, ಅನುಭವ, ಸಾಮರ್ಥ್ಯವನ್ನು ನೋಡಿ ತೆಗೆದುಕೊಂಡರು. ಅಂತಹವರ ಸಂಖ್ಯೆಗೆ ನಮ್ಮಲ್ಲಿ ಹೆಚ್ಚಾಗಿ ಸರ್ಕಾರದಲ್ಲಿ ಕೆಲಸ ಮಾಡತಕ್ಕವರ ವ್ಯಾಪ್ತಿ ವಿಶೇಷವಾಗಿ ಬೆಳೆಯುತ್ತಾ ಬಂದಿದೆ. ಆದ್ದರಿಂದ 10–20 ವರ್ಷಗಳಿಂದಲೂ ಐ.ಎ.ಎಸ್. ಅಧಿಕಾರಿಗಳಾಗಿರುವವರು ಹೆಚ್ಚು ಮಂದಿ ನಮ್ಮಲ್ಲಿದ್ದಾರೆ. ಇನ್ನು

ಮುಂದಿನ ಹತ್ತಾರು ವರ್ಷಗಳಲ್ಲಿ ಇವರೆಲ್ಲರೂ 20–30 ವರ್ಷಗಳ ವಯಸ್ಸಿನ ಐ.ಎ.ಎಸ್ ಅಧಿಕಾರಿಗಳಾಗಿರುತ್ತಾರೆ. ಒಂದು ಜಿಲ್ಲೆಗೆ ಒಬ್ಬ ಅಧಿಕಾರಿಯನ್ನು ನೀಡಬೇಕಾಗಿದ್ದರೆ ನಮ್ಮ ಮೈಸೂರು ರಾಜ್ಯದಲ್ಲಿ ಹಿಂದೆ ಸುಮಾರು 40 ವರ್ಷಗಳ ವಯಸ್ಸಿಗಿಂತ ಕಡಿಮೆ ಇದ್ದಂಥ ಅಧಿಕಾರಿಗಳನ್ನು ಅಲ್ಲಿ ಹಾಕುತ್ತಿರಲಿಲ್ಲ. ಈಗ ಆಡಳಿತದ ಅನುಭವವಿಲ್ಲದೆ ಇದ್ದರೂ ಮೊದಲನೆ ಶ್ರೇಣಿಯಲ್ಲಿ ಪರೀಕ್ಷೆಯೊಳಗೆ ಉತ್ತೀರ್ಣನಾಗಿದ್ದನೆಂದರೆ ಸಾಕು ಎಲ್ಲೋ ಒಂದು ಕಡೆ ಹಾಕಿಬಿಡುತ್ತಾರೆ. ರಾಜಕೀಯ ಅನುಭವ ಸ್ವಲ್ಪ ಮಟ್ಟಿಗಾದರೂ ಇರಬೇಕು. ಈಗ ನಾನಾ ಶಾಖೆಗಳಲ್ಲಿ ಇವರನ್ನು ನೇಮಿಸಬೇಕೆಂಬ ಗುರಿಯನ್ನು ಸಹ ಸರ್ಕಾರದವರು ಇಟ್ಟುಕೊಂಡಿದ್ದಾರೆ. ಈ ದೃಷ್ಟಿಯಿಂದ ನೋಡುವುದಾದರೆ ಐ.ಎ.ಎಸ್. ಅಧಿಕಾರಿಗಳ ಸಂಖ್ಯೆ ಇಡೀ ಭರತಖಂಡ ಎಷ್ಟುಬೇಕೋ ಅಷ್ಟನ್ನು ಇಟ್ಟುಕೊಳ್ಳುವುದಕ್ಕೋಸ್ಕರ, ಅನುಭವಸ್ಥರಾಗಿರತಕ್ಕ ಐ.ಎ.ಎಸ್. ಅಧಿಕಾರಿಗಳನ್ನು ಇಟ್ಟುಕೊಳ್ಳುವುದಕ್ಕೋಸ್ಕರ 58 ವರ್ಷದವರೆಗಿನ ವ್ಯಾಪ್ತಿಯನ್ನು ಹೆಚ್ಚಿಸಿರಬಹುದು. ಆ ವ್ಯಾಪ್ತಿಯನ್ನು ಸಾಮಾನ್ಯ ವರ್ಗದ ಸರ್ಕಾರಿ ನೌಕರರಿಗೆಲ್ಲಾ ಅನ್ವಯಿಸಬೇಕು. ಎನ್ನುವುದರಲ್ಲಿ ವಿಶೇಷವಾದ ಫೋರ್ಸ್ ಇಲ್ಲ ಎಂದು ನಾನು ಭಾವಿಸುತ್ತೇನೆ. ಆದರೆ ಕೆಲವು ಸಮಯದಲ್ಲಿ ಕೆಲವು ಕ್ಷೇತ್ರಗಳಲ್ಲಿ ತಜ್ಞರು, ಎಕ್ಸ್‌ಪರ್ಟ್‌ಗಳು ಎಂದು ಏನು ಕರೆಯುತ್ತಾರೆಯೋ ಆ ಎಕ್ಸ್‌ಪರ್ಟುಗಳ ಸೇವೆ ಅವಶ್ಯಕವಾದದ್ದು. ಅದಕ್ಕೋಸ್ಕರ ಸರ್ಕಾರ ಅದನ್ನು ಗಮನದಲ್ಲಿಟ್ಟುಕೊಂಡು ಬದಲಾವಣೆ ಮಾಡಬೇಕೆಂದು ಹೋಗುವುದು ಯೋಗ್ಯವೇ ಹೊರತು ಒಂದೇ ಬಾರಿಗೆ ನಿವೃತ್ತಿ ವಯಸ್ಸನ್ನು 60 ವರ್ಷಕ್ಕೆ ಹೆಚ್ಚಿಸಬೇಕು ಎನ್ನತಕ್ಕಂಥಾದ್ದು ಸರ್ಕಾರಕ್ಕೆ ಯೋಗ್ಯವಾಗಬಾರದು ಎಂದುಕೊಂಡಿದ್ದೇನೆ.

ಇನ್ನೊಂದು ವಿಷಯ. ಒಬ್ಬ ನೌಕರ 30 ವರ್ಷಗಳ ಕಾಲ ಸರ್ಕಾರಿ ನೌಕರಿಯನ್ನು ಮಾಡಿರುತ್ತಾನೆ. ಸಾಮಾನ್ಯವಾಗಿ ರೆಕ್ರೂಟ್‌ಮೆಂಟ್ ಮಾಡಿಕೊಳ್ಳುವುದಕ್ಕೆ 25 ವರ್ಷ ಎಂದು ಹಾಕಿಕೊಂಡಿದ್ದಾರೆ. ಕೆಲವು ಸಂದರ್ಭದಲ್ಲಿ 28 ವರ್ಷಗಳನ್ನು ಹಾಕಿಕೊಂಡಿದ್ದಾರೆ. ಈಗ ಯಾರಾದರೂ ನೌಕರ 25ನೇ ವರ್ಷಕ್ಕೆ ಸರ್ಕಾರಿ ನೌಕರಿಗೆ ಸೇರಿದರೆ ಅವನು 30 ವರ್ಷಗಳ ಕಾಲ ಸೇವೆಯನ್ನು ಮಾಡಿರುತ್ತಾರೆ. ಎಂದರೆ ಅವನ ವಯಸ್ಸಿನಲ್ಲಿ ಅರ್ಧಕಾಲವನ್ನು ಗುಲಾಮಗಿರಿಯಲ್ಲಿಯೇ ಕಳೆಯುತ್ತಾನೆ. ಅದಕ್ಕೋಸ್ಕರ ಅವರಿಗೆ ವಿಶ್ರಾಂತಿ ಬೇಕು. ವಿಶ್ರಾಂತಿಯನ್ನು ಪಡೆದಾಗ, ಸ್ವತಂತ್ರವಾಗಿ ಜನರ ಸೇವೆಯನ್ನು ಮಾಡುವುದಕ್ಕೆ ಕೊಂಚಶಕ್ತಿಯನ್ನು ಪಡೆದಿರಬೇಕು. ಸ್ವತಂತ್ರ ಭಾರತದಲ್ಲಿ ಶಕ್ತಿ, ಮಾನಸಿಕ ಶಕ್ತಿಯನ್ನು ವ್ಯಾಪಾರಮಾಡಿ ಮಾರಾಟ ಮಾಡಿ ಸೇವೆಯನ್ನು ಸಲ್ಲಿಸುವ ಬದಲು ಸಂತೋಷಕ್ಕೋಸ್ಕರ ಸೇವೆಯನ್ನು ಸಲ್ಲಿಸುವುದಕ್ಕೋಸ್ಕರ ಒಂದು ಅವಕಾಶವನ್ನು ಕಲ್ಪನೆ ಕೊಡುವ ಉದ್ದೇಶದಿಂದ ಆ ರೀತಿ ಮಾಡಿದ್ದಾರೆಂದು ಅನಿಸುತ್ತದೆ. 10 ವರ್ಷಗಳ ಕಾಲವನ್ನು ಅವರು ತಮ್ಮ ಅನುಭವದಿಂದ ಜನಸೇವೆಯನ್ನು ಮಾಡಲು ಉಪಯೋಗಿಸಿದರೆ ಅದರಿಂದ ನಮ್ಮ ದೇಶಕ್ಕೆ ಕ್ಷೇಮ ಆದೀತು ಎಂದು ನಾನು ಭಾವಿಸಿಕೊಂಡಿದ್ದೇನೆ. ಆದರೆ ಕೆಲವು ಕ್ಷೇತ್ರಗಳಲ್ಲಿ ನಿವೃತ್ತಿ ವಯಸ್ಸಿನ ಮಿತಿಯನ್ನು ಏರಿಸುವುದು ಅವಶ್ಯಕ. ಸರ್ಕಾರ ಅದನ್ನು ಗಮನದಲ್ಲಿಟ್ಟುಕೊಳ್ಳಬೇಕು ಎಂಬುದನ್ನು ಸೂಚಿಸಿ ಶ್ರೀಮಾನ್ ಮುಕುಂದರಾಯರು ಯಾವ ಕಾರಣಗಳಿನ್ನೋ ಹೇಳಿ ನಮ್ಮ ರಾಜ್ಯದಲ್ಲಿ ಅನುಭವಸ್ಥರಾದ ಸಿಬ್ಬಂದಿಯ ಕೊರತೆಯನ್ನು ತಪ್ಪಿಸುವ ದೃಷ್ಟಿಯಿಂದ ಎಂದು ಉಪಯೋಗ

ಮಾಡಿದ್ದಾರೆ. ಇವೊತ್ತು ಪಾಲಿಟೆಕ್ನಿಕ್‌ಗಳಿಂದ 3 ಸಾವಿರ ವಿದ್ಯಾರ್ಥಿಗಳು ಹೊರಗೆ ಬಂದಿದ್ದಾರೆ. ಸಿವಿಲ್ ಇಂಜಿನಿಯರಿಂಗ್ ಪಾಸುಮಾಡಿಕೊಂಡು ಬಂದಿದ್ದಾರೆ. ಅನೇಕ ಪ್ರಾಜೆಕ್ಟ್‌ಗಳ ಕೆಲಸ ಮಾಡುತ್ತಿದ್ದರೂ ಸಹ ಕೆಲಸ ಮಾಡುತ್ತಿದ್ದ ಜನ ಕೆಲಸ ಇಲ್ಲದೆ ನಿರುದ್ಯೋಗಿಗಳಾಗಿದ್ದಾರೆ. ಆಂಧ್ರಸರ್ಕಾರದಲ್ಲಿ ಎಂಜಿನಿಯರಿಂಗ್ ಡಿಗ್ರಿಕೋರ್ಸ್, ಡಿಪ್ಲೋಮ ಕೋರ್ಸ್ ಏನಿತ್ತು ಅದನ್ನು ಮೊಟಕು ಮಾಡಬೇಕು. ತಾಂತ್ರಿಕ ಶಿಕ್ಷಣವನ್ನು ಪಡೆದವರ ಸಂಖ್ಯೆಯನ್ನು ಹೆಚ್ಚುಮಾಡಬಾರದು; ತಾಂತ್ರಿಕ ಕ್ಷೇತ್ರದಲ್ಲಿ ನಿರುದ್ಯೋಗಿಗಳ ಸಂಖ್ಯೆ ಬೆಳೆದು ಹೋದೀತು ಎನ್ನುವ ದೃಷ್ಟಿಯಿಂದ ಆ ಬಗ್ಗೆ ಒಂದು ಸಮಿತಿಯನ್ನು ಕೂಡ ಆಂಧ್ರ ಸರ್ಕಾರದವರು ಇತ್ತೀಚೆಗೆ ನೇಮಕ ಮಾಡಿದ್ದಾರೆ. ಹೀಗೆ ಶಿಕ್ಷಣ ಬಹುಮುಖವಾಗಿ ಬೆಳೆಯುತ್ತಾ ಇರುವ ಕಾಲದಲ್ಲಿ ನಮ್ಮ ದೇಶ ನಮ್ಮ ರಾಜ್ಯದ ಯುವಕರಿಗೆ ಹೆಚ್ಚು ಹೆಚ್ಚು ಅವಕಾಶವನ್ನು ಕಲ್ಪನೆ ಮಾಡುವ ಬದಲು ಅದನ್ನು ಮೊಟಕು ಮಾಡತಕ್ಕದ್ದು ಸೂಕ್ತವಲ್ಲ ಎಂದು ನಾನು ಭಾವನೆ ಮಾಡಿಕೊಂಡಿದ್ದೇನೆ. ಕೆಲವು ಪ್ರಕರಣಗಳಲ್ಲಿ ಹಿಂದಿನ ಮೈಸೂರು ರಾಜ್ಯದಲ್ಲಿ ಶಿಕ್ಷಕರಿಗೆ 58 ವರ್ಷಗಳವರೆಗೆ ನೌಕರಿಯಲ್ಲಿರುವುದಕ್ಕೆ ಅವಕಾಶವನ್ನು ಕೊಟ್ಟರು. ಇವೊತ್ತು ಕೂಡ ಮೆಡಿಕಲ್ ಡಿಪಾರ್ಟ್‌ಮೆಂಟ್, ಇಂಜಿನಿಯರ್ ಡಿಪಾರ್ಟ್‌ಮೆಂಟುಗಳಲ್ಲಿ 55 ರಿಂದ 58ವರ್ಷಗಳವರೆಗೆ ಜೀವದಾನ ಕೊಡುತ್ತಾ ಇದ್ದಾರೆ. ಅನುಭವವನ್ನು ಉಪಯೋಗ ಮಾಡುವುದಕ್ಕೋಸ್ಕರ ದೇಶದ ಹಿತದೃಷ್ಟಿಯಿಂದ ಮಾಡಿಕೊಳ್ಳಬೇಕೇ ಹೊರತು ಸಾರ್ವತ್ರಿಕವಾಗಿ ಎಲ್ಲಾ ಇಲಾಖೆಗಳಿಗೂ ಎಲ್ಲಾ ನೌಕರರಿಗೂ ಎಲ್ಲಾ ಕಾಲದಲ್ಲೂ ಕೂಡ ಇದನ್ನು ಕೊಡತಕ್ಕದ್ದನ್ನು ಒಪ್ಪಿಕೊಳ್ಳುವುದು ಸೂಕ್ತವಲ್ಲ ಎಂದು ನಾನು ಭಾವನೆ ಮಾಡಿಕೊಂಡಿದ್ದೇನೆ.

## 3. ಕಾರ್ಮಿಕರ ಕಲ್ಯಾಣ ಮಸೂದೆ 1965, ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ನಾಮ ನಿರ್ದೇಶನ ಹೊಂದಿದವರು) : ಮಾನ್ಯ ಸಭಾಪತಿಗಳೇ, ಕಾರ್ಮಿಕರ ಕಲ್ಯಾಣ ಸಾಧನೆಗಾಗಿ ಇರತಕ್ಕ ಈ ಮಸೂದೆ ಸ್ವಾಗತಾರ್ಹವಾದುದು. ಈ ಮೊದಲು ಇಬ್ಬರು ಮಾನ್ಯ ಸದಸ್ಯರು ಮಾತನಾಡಿ ತಮ್ಮ ಸಲಹೆಗಳನ್ನು ಕೊಟ್ಟಿದ್ದಾರೆ. ಅವರಲ್ಲಿ ಒಬ್ಬರು ಹೇಳಿದುದು ಏನೆಂದರೆ, ಕಾರ್ಮಿಕರ ಕಲ್ಯಾಣ ಸಾಧನೆಗಾಗಿ ಈಗ ಇರತಕ್ಕ ಕಾನೂನಿನ ಮೂಲಕ ಅದರ ಕಾರ್ಯವ್ಯಾಪ್ತಿಯಲ್ಲಿ ಈ ಕಾರ್ಯವನ್ನು ನಿರ್ವಹಿಸಲು ಅವಕಾಶವಿತ್ತು. ಈ ದೃಷ್ಟಿಯಿಂದ ಮತ್ತೊಂದು ಮಸೂದೆ ಕಾನೂನು ಮಾಡಬೇಕಾದುದು ಅನಗತ್ಯ ಎಂದು ಈಗ ತಾನೆ ಭಾಷಣ ಮುಗಿಸಿದ ಶ್ರೀ ಮಲ್ಲಾರಾಧ್ಯರು ಈ ಮಸೂದೆಯ ಕಾರ್ಯವ್ಯಾಪ್ತಿ ಮಹತ್ತರವಾಗಿದೆ. ಆದರೆ ಹಣಕಾಸಿನ ಅಭಾವ ಇರುವುದರಿಂದ ಈ ಉದ್ದೇಶಸಾರ್ಥಕವಾಗಲಾರದು ಎಂದು ಹೇಳಿದರು. ನನಗೆ ಅನಿಸುತ್ತದೆ. ಈ ಇಬ್ಬರು ಮಾನ್ಯ ಸದಸ್ಯರು ಈ ಮಸೂದೆಯಲ್ಲಿ ದೋಷಾರೋಪಣೆ ರಂಧ್ರಾನ್ವೇಷಣ ತತ್ಪರರಾಗಿದ್ದರು. ಒಂದು ದೃಷ್ಟಿಯಿಂದ ಇದು ಸಮಯೋಚಿತವಾದ ಮಸೂದೆಯಾಗಿದೆ.

---

3. ಕಾರ್ಮಿಕರ ಕಲ್ಯಾಣ ಮಸೂದೆ 1965, ಕುರಿತಂತೆ (3.3.1965) ರಂದು ನಡೆದ ಚರ್ಚೆಯಲ್ಲಿ

ಈ ಮಸೂದೆ ಚಿಕ್ಕದಾಗಿದ್ದರೂ ಕೂಡ ಮುಂದಿನ ವರ್ಷಗಳಲ್ಲಿ ಕಾರ್ಮಿಕರ ಕಲ್ಯಾಣ ಸಾಧನೆಯಾಗುತ್ತದೆ ಎಂಬುದು ಕಂಡು ಬರುತ್ತದೆ. ಈಗ ಸರಕಾರದ ಹತ್ತಿರ ಹಣವಿಲ್ಲ. ಬರತಕ್ಕ ಹಣ ಇದುವರೆಗೆ ಬಂದಿಲ್ಲ. ಬಾಕಿ ನಿಂತುಹೋದ ಹಣ ರೂ. 1,74,000 ಎಂದು ಹೇಳಿದ್ದಾರೆ. ಇದರಲ್ಲಿ ಜುಲ್ಮಾನ್ ಹಣ ಸೇರಿಸಿದೆ. ಇದಕ್ಕೆ ದಾನ ದತ್ತಿ ಹಣ ಸೇರಿಸಬಹುದು. ಸಕಾಲದಲ್ಲಿ ಯೋಗ್ಯ ರೀತಿಯಲ್ಲಿ ಹಣ ಒದಗಿಸಲು ಸರಕಾರಕ್ಕೆ ಒಂದು ಅವಕಾಶ ಇದೆ ಎಂದು ನಾನು ಭಾವಿಸುತ್ತೇನೆ. ಈ ದೃಷ್ಟಿಯಿಂದ ಈ ಬೋರ್ಡು ಕೆಲಸ ಮಾಡಲು ಅವಕಾಶ ಇದೆ ಎಂದು ನಾನು ಭಾವಿಸುತ್ತೇನೆ. ಒಂದು ಮಾತನ್ನು ನಾವು ಚರ್ಚೆ ಮಾಡುವಾಗ ನೆನಪಿನಲ್ಲಿ ಇಡಬೇಕಾಗಿದೆ. ಇದುವರೆಗೆ ಕಾರ್ಮಿಕರ ಹಿತರಕ್ಷಣೆಗಾಗಿ ಮೂರು–ನಾಲ್ಕು ವಿಧವಾದ ಕಾನೂನುಗಳಿವೆ, ವೇತನ, ಸಂಭಾವನೆ, ರಜ, ವೈದ್ಯಕೀಯ ಸಹಾಯ, ವಸತಿ ಇವುಗಳ ಬಗ್ಗೆ ಕಡ್ಡಾಯವಾಗಿ ಫ್ಯಾಕ್ಟರಿಯೇ ಆಗಲಿ, ಸರಕಾರವೇ ಆಗಲಿ ನಿರ್ವಹಿಸಬೇಕಾದಂಥ ಕಾರ್ಯಗಳಿವೆ. ಕಾರ್ಮಿಕರ ಜೀವನವನ್ನು ಮನೋಹರವಾಗಿ ಮಾಡಲು ಸಾಧ್ಯವಾಗುತ್ತದೆ. ಆದರೆ ಕಾರ್ಮಿಕರಿಗೆ ಉದ್ಯೋಗ ಒದಗಿಸಿ ಹಿತ ಸಾಧನೆ ಮಾಡಲು ಈ ಮಸೂದೆ ಬಂದಿಲ್ಲ. ಕಾರ್ಮಿಕರಿಗೆ ರಾತ್ರಿ ಕಾಲದಲ್ಲಿ ವಿದ್ಯಾಭ್ಯಾಸ ಮಾಡಿಸುವುದು, ವಾಚನಾಲಯ ಇಡುವುದು ಯೋಗ್ಯ ಚಿತ್ರಪಟ ಪ್ರದರ್ಶನ ಮಾಡಿ ತೋರಿಸುವುದು, ವಿಶ್ರಾಂತಿಗೃಹ ನಿರ್ಮಾಣ ಮಾಡುವುದು, ಪ್ರೇಕ್ಷಣೀಯ ಸ್ಥಳಗಳಿಗೆ ಯಾತ್ರ ಹೋಗುವುದು ಇಂಥ ಹಲವಾರು ಕಾರ್ಯಗಳು ಸಾಧನೆ ಮಾಡತಕ್ಕದ್ದು ಈ ಮಸೂದೆಯಲ್ಲಿವೆ. ಹಾಗಿರುವಾಗ ಇಂಥ ಮಸೂದೆಯ ಬಗ್ಗೆ ಇಷ್ಟು ದೊಡ್ಡದಾಗಿ ಆರೋಪಣೆ ಮಾಡುವುದು ಪ್ರತಿಭಟನೆ ಮಾಡುವುದು ಅನಾವಶ್ಯಕವಾಗಿತ್ತು ಎಂದು ನಾನು ಅಭಿಪ್ರಾಯ ಪಡುತ್ತೇನೆ.

ನಮ್ಮ ರಾಷ್ಟ್ರ ಸ್ವತಂತ್ರವಾದ ಮೇಲೆ ಎರಡು ಗುಂಪುಗಳ ಹಿತರಕ್ಷಣೆಗಾಗಿ ನಮ್ಮ ಕೇಂದ್ರ ಸರಕಾರ ಹಾಗೂ ರಾಜ್ಯ ಸರಕಾರ ಪ್ರಯತ್ನ ಪಟ್ಟಿದ್ದಾರೆ. ನಮ್ಮ ಸಮಾಜದಲ್ಲಿ ಮಹಿಳೆಯರಿಗೆ ಪ್ರಾಧ್ಯಾನ್ಯತೆ ಕೊಟ್ಟು ಅವರ ಹಿತಸಾಧನೆ ಮೊದಲಿನಿಂದ ನಡೆಯುತ್ತದೆ. ಎರಡನೆಯ ಗುಂಪು ಕಾರ್ಮಿಕರ ಹಿತ ರಕ್ಷಣೆಯಾಗಿದೆ. ಸಮಾಜದಲ್ಲಿ ಬಹು ಸಂಖ್ಯೆಯಲ್ಲಿ ಇರುವ ಇತರ ಜನರ ಹಿತರಕ್ಷಣೆಗಾಗಿ ಯಾವ ವಿಧವಾದ ಕಾನೂನು ಇಲ್ಲ. ಅಗ್ರಿಕಲ್ಚರಲ್ ಲೇಬರ್, ಸರ್ಕಾರಿ ನೌಕರರು, ಗುಮಾಸ್ತರು ವಿದ್ಯಾರ್ಥಿಗಳ ಬಗ್ಗೆ ಇದುವರೆಗೆ ಅವರ ಕಲ್ಯಾಣ ಸಾಧನೆ ಮಾಡತಕ್ಕ ಕಾನೂನು ಬಂದಿಲ್ಲ. ಕಾರ್ಮಿಕರ ಹಿತರಕ್ಷಣೆ ಮಾಡುವುದರ ಜೊತೆಗೆ ಅವರ ಕಲ್ಯಾಣ ಸಾಧನೆ ಮಾಡಲು ಈ ಮಸೂದೆ ಬಂದಿರುವುದು ಯೋಗ್ಯವಾಗಿದೆ. ಇದರಿಂದ ಅವರ ಹಿತಸಾಧನೆಯಾಗುತ್ತದೆ. ಆದುದರಿಂದ ಈ ಮಸೂದೆಯ ಬಗ್ಗೆ ಕಾರ್ಮಿಕವರ್ಗ ಪ್ರತಿಭಟಿಸಬೇಕಾಗಿಲ್ಲ.

ಈ ದೃಷ್ಟಿಯಿಂದ ನೋಡುವುದಾದರೆ ಈ ಮಸೂದೆ ಬಹಳ ಯೋಗ್ಯವಾದುದು ಎಂದು ನಾನು ಅಂದುಕೊಂಡಿದ್ದೇನೆ. ಆದರೆ ನನ್ನ ದೃಷ್ಟಿಯಲ್ಲಿ ಈ ಮಸೂದೆಯಲ್ಲಿ ಎರಡು ದೋಷಗಳು ಕಾಣುತ್ತವೆ. ಇದರಲ್ಲಿ ಸರ್ಕಾರ ವಿಶೇಷ ಅಧಿಕಾರವನ್ನು ಪಡೆದುಕೊಂಡಿದೆ. ಇದು ಸರಿಯಲ್ಲ ಎಂಬುದು ಒಂದು ಇಂಥ ಒಂದು ಸ್ಟ್ಯಾಚುರಿ ಬಾಡಿಯನ್ನು ಸರ್ಕಾರದವರು ನೇಮಿಸಿದ ಮೇಲೆ ಇದಕ್ಕೆ ಸಂಪೂರ್ಣ ಅಧಿಕಾರವನ್ನು ಕೊಡಬೇಕಾದ್ದು ಯುಕ್ತವಾಗಿತ್ತು. ಆದರೆ ಅದಕ್ಕೆ ಬದಲಾಗಿ ಸರ್ಕಾರದವರ

ಪೂರ್ವಭಾವಿ ಅಪ್ಪಣೆ ಪಡೆದು ಇಂತಿಂಥ ಕೆಲಸಗಳನ್ನು ಈ ಬೋರ್ಡು ಮಾಡಬಹುದೆಂದು ಈ ಮಸೂದೆಯ ಕ್ಲಾಜು 8(3) ರಲ್ಲಿ ಹೇಳಿದ್ದಾರೆ. ಇಂಥ ಒಂದು ಮಸೂದೆಯನ್ನು ಮಾಡುವಾಗ ಸರ್ಕಾರದವರು ಏತಕ್ಕೆ ಇದರ ಕಾರ್ಯವ್ಯಾಪ್ತಿಯನ್ನು ಹೀಗೆ ಸಂಕುಚಿತಗೊಳಿಸಿದ್ದಾರೋ ಗೊತ್ತಿಲ್ಲ. ಅದು ಸರಿಯಾದ್ದಲ್ಲ. ಹೀಗೇ ಈ ಮಸೂದೆಯ ಕ್ಲಾಜು 12 ಮತ್ತು 13ರಲ್ಲಿ ವೆಲ್‌ಫೇರ್ ಕಮೀಷನ್ನರನ್ನು ಮತ್ತು ಇನ್‌ಸ್ಪೆಕ್ಟರುಗಳ ನೇಮಕ ಮಾಡಿಕೊಳ್ಳತಕ್ಕ ವಿಚಾರವನ್ನು ಸರ್ಕಾರಕ್ಕೆ ಬಿಡಬೇಕೆಂಬುದಾಗಿ, ಇಲ್ಲವೆ ಸರ್ಕಾರದ ಅನುಮತಿಯನ್ನು ಪಡೆದು ಮಾಡಬೇಕೆಂಬುದಾಗಿ ಇದರಲ್ಲಿ ನಮೂದಿಸಿದ್ದಾರೆ. ಈ ಇನ್‌ಸ್ಪೆಕ್ಟರನ್ನು ನೇಮಕ ಮಾಡತಕ್ಕ ಅಧಿಕಾರವನ್ನು ಸರ್ಕಾರವೇ ಇಟ್ಟುಕೊಂಡಿದೆ.

ಈ ಬೋರ್ಡು ತನ್ನ ಪ್ರತಿಯೊಂದು ಕಾರ್ಯವನ್ನೂ ಸರ್ಕಾರದ ಅಪ್ಪಣೆ ಪಡೆದು ಮಾಡಬೇಕೆಂದರೆ ಅದು ಯಾವ ಕಾರ್ಯವನ್ನೂ ಸರಿಯಾಗಿ ಮಾಡುವುದಕ್ಕಾಗುವುದಿಲ್ಲ. ಈ ಎಲ್ಲ ಅಧಿಕಾರಿಗಳನ್ನೂ ಸಂಪೂರ್ಣವಾಗಿ ಈ ಬೋರ್ಡಿಗೆ ಬಿಡಬೇಕಾಗಿತ್ತು ಎಂದು ನನ್ನ ಅಭಿಪ್ರಾಯ. ಆದರೆ, ಇದರಲ್ಲಿ ಕಾರಣತಕ್ಕ ಒಂದು ಮೂಲಭೂತವಾದ ದೋಷವೇನೆಂದರೆ ಇಂಥ ಮೂಲ ಮಸೂದೆಯಲ್ಲಿ ಯಾವ ಒಂದು ಮೂಲಭೂತವಾದ ತತ್ವವನ್ನು ಅಡಕ ಮಾಡಬೇಕಾಗಿತ್ತೋ ಅದನ್ನಿಲ್ಲಿ ಅಡಕ ಮಾಡದೆ, ಅದನ್ನು ಅಧಿನಿಯಮಾವಳಿಯಲ್ಲಿ ಬರುವಂತೆ ಮಾಡಿರತಕ್ಕದ್ದು ಉಚಿತವಾದುದಲ್ಲ ಎಂದು ನಾನು ಅಂದುಕೊಂಡಿದ್ದೇನೆ.

ಇನ್ನು ಕ್ಲಾಜ್ 14ರಲ್ಲಿ ಈ ಬೋರ್ಡಿನ ಗುಮಾಸ್ತರು ಇತ್ಯಾದಿಯ ಸಿಬ್ಬಂದಿಯ ನೇಮಕದ ಅಧಿಕಾರ ಬೋರ್ಡಿಗಿರತಕ್ಕದ್ದು ಎಂಬುದನ್ನು ತಿಳಿಸುತ್ತದೆ. ಆದರೆ ಇದರಲ್ಲಿರತಕ್ಕ ದೋಷವೇನೆಂಬುದನ್ನು ಇದುವರೆವಿಗೂ ಶ್ರೀ ಮಲ್ಲಾರಾಧ್ಯರು ಎತ್ತಿ ತೋರಿಸಿದ್ದಾರೆ. ನನ್ನ ಅಭಿಪ್ರಾಯವೂ ಕೂಡ ಅವರು ಹೇಳಿದಂತೆಯೇ ಇದೆ. ಹೀಗೆ ಇದನ್ನೆಲ್ಲಾ ರೂಲ್ ಮೇಕಿಂಗ್ ಪವರಿನಲ್ಲಿ ತರತಕ್ಕದ್ದು ಸರಿಯಲ್ಲ ಎಂದು ನಾನು ಅಂದುಕೊಂಡಿದ್ದೇನೆ.

ಈ ಹಿಂದೆ ತಮ್ಮಲ್ಲಿ ಏನು ಅರಿಕೆ ಮಾಡಿಕೊಳ್ಳುತ್ತಿದ್ದೇನೆಂದರೆ, ಯಾವ ಮೂಲಭೂತ ತತ್ವಗಳನ್ನು ಮೂಲ ಮಸೂದೆಯಲ್ಲಿ ತರಬೇಕೋ ಅವುಗಳನ್ನು ತಾರದೆ, ಅವುಗಳನ್ನು ಅಧೀನ ಶಾಸನದಲ್ಲಿ ತರತಕ್ಕದ್ದು ದೋಷಪೂರಿತವಾದುದು ಎಂಬುದನ್ನು ಹೇಳುತ್ತಿದ್ದೆನು.

4ನೇ ಕ್ಲಾಸಿನ (2)ನೇ ಸಬ್ ಕ್ಲಾಸಿನಲ್ಲಿ ಬೋರ್ಡಿನಲ್ಲಿ ಇಂತಿಂಥವರೇ ಇರಬೇಕು ಎಂಬುದನ್ನು ಹೇಳಲಾಗಿದೆ. ಆದರೆ ಇಲ್ಲಿ ಎಷ್ಟು ಜನರಿರಬೇಕು ಎಂಬುದನ್ನು ಹೇಳಿಲ್ಲ. ಇಲ್ಲಿ ಹೇಳಿರತಕ್ಕ ಒಂದು ದಾಮಾಷಾ ಪ್ರಮಾಣದಲ್ಲಿ ಸದಸ್ಯರನ್ನು ಆರಿಸಬೇಕು ಎಂಬ ನೇಮ ಯಾವ ಮಸೂದೆಯಲ್ಲೂ ಇರುವುದಿಲ್ಲ. ಇಲ್ಲಿ ಇಂತಿಂಥ ಪಕ್ಷದಿಂದ ಇಷ್ಟಿಷ್ಟು ಸದಸ್ಯರಿರಬೇಕು ಎಂಬುದನ್ನು ನಿಗದಿ ಮಾಡತಕ್ಕ ಅಧಿಕಾರವನ್ನು ಅಧೀನ ಶಾಸನಕ್ಕೆ ಬಿಟ್ಟಿರತಕ್ಕದ್ದು ಸರಿಯಲ್ಲ. ಇದು ಒಂದು ದೋಷಪೂರಿತವಾಗಿದೆ.

ಪಂಡಿತ ವಿಚಾರದಲ್ಲಿ ನಾನು ಇನ್ನು ಒಂದು ಸಲಹೆಯನ್ನು ಕೊಡುವುದಾದರೆ – ಹಣಕಾಸಿನ ತ:ಖ್ತೆಯಲ್ಲಿ ಇದಕ್ಕೆ ತಗುಲುವ ವೆಚ್ಚ ಒಟ್ಟು ರೂ. 1 ಲಕ್ಷ 70 ಸಾವಿರ ಎಂದು ಹೇಳಿ ಇದರಲ್ಲಿ ರೂ.1

ಲಕ್ಷ 47 ಸಾವಿರ ರೆಕರಿಂಗ್ ವೆಚ್ಚ ಎಂದು ಹೇಳಲಾಗಿದೆ. ಇನ್ನು ಇಲ್ಲಿ ಉಳಿಯತಕ್ಕ 23 ಸಾವಿರ ರೂಪಾಯಿಗಳು ಖರ್ಚಾಗದೆ ಹಾಗೆ ಉಳಿಯತಕ್ಕ ಹಣವಾಗಿದೆ. ಇಲ್ಲಿ ಒಂದು ಮುಖ್ಯವಾಗಿ ಗಮನಿಸತಕ್ಕ ಅಂಶ ಎಂದರೆ ಎಲ್ಲ ಕಾರ್ಮಿಕರೂ ಒಟ್ಟಾಗಿ ಒಂದು ಕಡೆ ಸಾಮೂಹಿಕವಾಗಿ ಸೇರತಕ್ಕಂಥ ಅವಕಾಶವನ್ನು ಈ ಮಸೂದೆ ಒದಗಿಸಿಕೊಡುತ್ತದೆ ಎಂಬುದು. ಇದನ್ನು ಶ್ರೀ ಎಂ.ಸಿ. ನರಸಿಂಹರವರು ಕೂಡ ಹೇಳಿದ್ದಾರೆ. ಅವರು ಹೇಳಿದಂತೆ ಆಯಾಯಾ ಫ್ಯಾಕ್ಟರಿಗಳಿಗೇ ವಹಿಸಿಕೊಟ್ಟ ಪಕ್ಷದಲ್ಲಿ ಆ ಕೆಲಸ ಸಾಧ್ಯವಾಗುತ್ತಾ ಇರಲಿಲ್ಲ. ಬೇರೆ ಬೇರೆ ಕಡೆ ಇರತಕ್ಕ ಜನವನ್ನು ಒಟ್ಟುಕೂಡಿಸತಕ್ಕ ಕೆಲಸ ಇದರಿಂದ ಮಾಡುವುದಕ್ಕೆ ಅವಕಾಶವಾಗುತ್ತದೆ ಎಂದು ನಾನು ಅಂದುಕೊಂಡಿದ್ದೇನೆ. ಶ್ರೀಮಾನ್ ನರಸಿಂಹನ್ ಅವರೂ ಕೂಡ ಅದನ್ನು ಈಗ ಒಪ್ಪಿಕೊಳ್ಳುತ್ತಾರೆ ಎಂದು ನಾನು ಭಾವಿಸುತ್ತೇನೆ. ಐ.ಟಿ.ಐ, ಹೆಚ್.ಎಂ.ಟಿ. ಅವರು ಅನೇಕ ಕೆಲಸಗಳನ್ನು ಮಾಡುತ್ತಾ ಇದ್ದಾರೆ, 50 ಜನ ಕಾರ್ಮಿಕರು ಎಲ್ಲಿ ಕೆಲಸ ಮಾಡುತ್ತಾ ಇದ್ದಾರೆ ಅದಕ್ಕಿಂತ ಹೆಚ್ಚಾಗಿರತಕ್ಕ ಫ್ಯಾಕ್ಟರಿಗಳೆಲ್ಲಕ್ಕೂ ಇದು ಅನ್ವಯವಾಗುತ್ತದೆ. ಅವರೆಲ್ಲರೂ ಈ ರೀತಿಯ ಕಲ್ಯಾಣ ಸಾಧನೆ ಮಾಡುತ್ತಾ ಇದ್ದಾರೆ. ಸಣ್ಣ ಪುಟ್ಟ ಫ್ಯಾಕ್ಟರಿಗಳವರು ಈ ಕಲ್ಯಾಣ ಸಾಧನೆಯನ್ನು ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ರೀಡಿಂಗ್ ರೂಮ್ ಸ್ಥಾಪನೆ ಮಾಡುವುದು ಆಗಲಿ, ಯಾತ್ರೆಗಳ ವ್ಯವಸ್ಥೆ ಮಾಡುವುದಾಗಲಿ, ಇಂತಹ ಕೆಲಸಗಳನ್ನು ಮಾಡಿಕೊಡುವುದಕ್ಕೆ ಸಾಧ್ಯವಾಗುವುದಿಲ್ಲ. ಸಾಮುದಾಯಿಕವಾಗಿ ಮಾಡಿದರೆ ಸಾಧ್ಯವೇ ಹೊರತು ಪ್ರತಿಯೊಂದು ಫ್ಯಾಕ್ಟರಿಯವರು ಮಾಡಬಲ್ಲರು ಎಂದರೆ ಅದು ತಪ್ಪಾಗುತ್ತದೆ. ಇತ್ತೀಚಿನ ವರ್ಷಗಳಲ್ಲಿ ಸರ್ಕಾರದವರು ನಡೆಸತಕ್ಕ ಕೆಲವು ಫ್ಯಾಕ್ಟರಿಗಳಲ್ಲಿ ಐ.ಟಿ.ಐ, ಹೆಚ್.ಎಂ.ಟಿ. ಮತ್ತು ಬಿ.ಇ.ಎಲ್. ನಲ್ಲಿ ಇವುಗಳನ್ನೆಲ್ಲಾ ಮಾಡುತ್ತಾ ಇದ್ದಾರೆ ಆದರೆ ಸಣ್ಣ ಪುಟ್ಟ ಫ್ಯಾಕ್ಟರಿಗಳಲ್ಲಿ ಕಾರ್ಮಿಕ ವರ್ಗಕ್ಕೆ ಈ ವಿಧವಾದ ಸೌಕರ್ಯ ಒದಗುತ್ತಾ ಇಲ್ಲ. ಅವರಿಗೆ ಈ ಸೌಲಭ್ಯವನ್ನು ಸಂಪಾದನೆ ಮಾಡಿಕೊಡಬೇಕೆಂದರೆ ಇಂತಹ ಕೇಂದ್ರಗಳನ್ನು ನಡೆಸಿಕೊಂಡು ಹೋಗಬೇಕು. ಅದಕ್ಕೆ ಹೆಚ್ಚು ಕೇಂದ್ರಗಳನ್ನು ನಿರ್ಮಾಣ ಮಾಡುವುದರಿಂದ ಮಾತ್ರ ಇಂತಹ ಸಾಮುದಾಯಿಕ ಜೀವನವನ್ನು ನಡೆಸುವುದಕ್ಕೆ ಸಾಧ್ಯವಾಗುತ್ತದೆ ಎಂದು ನಾನು ಅಂದುಕೊಂಡಿದ್ದೇನೆ.

ಕೊನೆಯದಾಗಿ ಹೇಳಬಹುದಾದರೆ ಇದರ ವ್ಯಾಪ್ತಿ ವಿಶೇಷವಾದದ್ದು. ಇದಕ್ಕೆ ಹಣ ಬಹಳ ಹೆಚ್ಚಾಗಿ ಬೇಕಾಗುತ್ತದೆ. ಈ ಕೇಂದ್ರಗಳನ್ನು ಯೋಗ್ಯವಾದ ರೀತಿಯಲ್ಲಿ ನಡೆಸಿಕೊಂಡು ಹೋಗುವುದಕ್ಕೆ ಸರ್ಕಾರದವರೂ ಕೂಡ ಪ್ರತಿ ವರ್ಷವೂ ಹಣವನ್ನು ಸಹಾಯ ಮಾಡಬೇಕು, ಕೇವಲ ಸೂಪರ್‌ವಿಜನ್ ಮಾತ್ರವಲ್ಲ. ಹಣ ಸಹಾಯ ಮಾಡಿದರೆ ಮಾತ್ರ ಈ ಕೇಂದ್ರಗಳು ಯಶಸ್ವಿಯಾಗುತ್ತವೆ. ಇಲ್ಲದೇ ಇದ್ದರೆ ಸಾಮುದಾಯಿಕ ಜೀವನ ಈ ಕೇಂದ್ರಗಳಲ್ಲಿ ಬೆಳೆಯುವುದಕ್ಕೆ ಆಗುವುದಿಲ್ಲ ಎಂದು ಹೇಳಿ ಅಂತಹ ಆರ್ಥಿಕ ಸಹಾಯವನ್ನು ಈ ಕೇಂದ್ರಗಳಿಗೆ ಒದಿಗಿಸಿಕೊಡಬೇಕು, ಈ ಮಸೂದೆ ಸ್ವಾಗತಾರ್ಹ ಎಂದು ಸೂಚನೆ ಮಾಡುತ್ತೇನೆ.

– * –

# IX. ವಾಹನ ಸಂಚಾರ ಸಮಸ್ಯೆ ಸಂಬಂಧವಾಗಿ ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

## 1. ಮೈಸೂರು ವಾಹನ ಸಂಚಾರ ಕಾಯಿದೆ (ಮಸೂದೆ) 1955ರ ಕುರಿತಂತೆ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ)** : ಮಾನ್ಯ ಸಭಾಪತಿಗಳಿಗೆ,

ಮಾನ್ಯ ಸಚಿವರು ಸಂಸ್ಥಾನದಲ್ಲಿ ವಾಹನ ಸಂಚಾರವನ್ನು ಹತೋಟಿಗೆ ತರುವುದಕ್ಕಾಗಿ ತಂದಿರತಕ್ಕ ಈ ಕಾಯಿದೆಯನ್ನು ಮಂಡಿಸುತ್ತಾ ಮಾಡಿರುವ ಭಾಷಣವನ್ನು ಬಹಳ ಕಾತರತೆಯಿಂದ ನಾನು ಕೇಳಿದ್ದೇನೆ. 1951ನೆಯ ಇಸವಿಯಿಂದ 1956ನೆಯ ಇಸವಿಯವರೆಗೆ ನಮ್ಮ ದೇಶದಲ್ಲಿ ಈ ಸಹಚಾರಗಳ ತೊಂದರೆ, ಅಡಚಣೆ ಎಷ್ಟು ಹೆಚ್ಚಾಗುತ್ತಿದೆ ಎಂಬುದಕ್ಕೆ ಅವರು ಕೊಟ್ಟಿರತಕ್ಕ ಅಂಕಿಅಂಶಗಳನ್ನು ನಾನು ಗಮನದಲ್ಲಿಟ್ಟುಕೊಂಡಿದ್ದೇನೆ. ವಾಹನ ಸಂಚಾರವನ್ನು ಹತೋಟಿಗೊಳಿಸತಕ್ಕ ಪ್ರಯತ್ನ ಅಥವಾ ಉದ್ದೇಶ ಸಾಧುವಾದುದೇನೋ ಹೌದು. ಆದರೆ ಈ ಉದ್ದೇಶವನ್ನು ಸಾಧನ ಮಾಡುವುದಕ್ಕಾಗಿ ಈ ಸಭೆಯ ಮುಂದೆ ಮಂಡಿಸಿರತಕ್ಕ ಮಸೂದಾ ಕಾನೂನು ಸಾಧುವೆ ಅಥವಾ ಅಲ್ಲವೆ ಎನ್ನುವುದನ್ನು ನಾವು ಆಲೋಚನೆ ಮಾಡುವುದು ಅತ್ಯಗತ್ಯ. ಯಾವ ಕಾನೂನನ್ನು ರಚನೆ ಮಾಡಬೇಕಾದರೂ ಅಂಥ ಕಾನೂನಿನ ರಚನೆಗೆ ವಿಶೇಷ ಅಗತ್ಯ ತರಬೇಕು. ಈ ಕಾನೂನು ಇದುವರೆಗೆ ಶಾಸನ ಕಡತದಲ್ಲಿ ಸೇರಿರತಕ್ಕ ಅನೇಕ ಕಾನೂನುಗಳಲ್ಲಿ ಉಳಿದಿರಬಾರದು. ಪುನರುಕ್ತಿ ದೋಷ ಬರಬಾರದು. ಹೀಗೆ ಬಾರದೇಯಿರುವ ಹಾಗೆ, ಸಾರ್ವಜನಿಕರ ಕ್ಷೇಮವನ್ನು ಮಾತ್ರ ರಕ್ಷಣೆ ಮಾಡತಕ್ಕ ಕಾನೂನನ್ನು ಪ್ರಜಾಯತ್ತ. ರಾಜ್ಯದಲ್ಲಿ ತಂದು ನಡೆಸಬೇಕಾದುದು ಅತ್ಯಗತ್ಯ. ಈ ದೃಷ್ಟಿಯಿಂದ ಈ ದಿನ ಮಾನ್ಯ ಸಚಿವರು ಮಂಡಿಸಿರತಕ್ಕ ಕಾನೂನಿನ ಉದ್ದೇಶ ಎಷ್ಟೆ ಶ್ರೇಷ್ಠವಾಗಿದ್ದರೂ ಕೂಡ ಅಗತ್ಯದ ದೃಷ್ಟಿಯಿಂದ ಪ್ರಜಾ ಸತ್ತಾತ್ಮಕ ತತ್ವದ ದೃಷ್ಟಿಯಿಂದ ಮೂರು ದೋಷಗಳಿಂದ, ಎಂದರೆ ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಪುನರ್ವ್ಯಾಪ್ತಿ ದೋಷಗಳಿಂದ ಕೂಡಿದೆ, ಆದಕಾರಣ ಅಸಾಧುವಾಗಿದೆ ಎಂದು ವಿಜ್ಞಾಪನೆ ಮಾಡಿಕೊಳ್ಳಬೇಕಾಗಿದೆ. ಈ ಮಸೂದೆಯ ಹೇಳಿಕೆಯಲ್ಲಿ ಆಬ್ಜೆಕ್ಟ್ ಮತ್ತು ರೀಸನ್‌ನಲ್ಲಿ ಅವರು ಹೇಳಿರುವುದೇನೆಂದರೆ, ನಮ್ಮ ದೇಶದಲ್ಲಿ ವಾಹನ ಸಂಚಾರ ವಿಪರೀತ ಹೆಚ್ಚಾಗುತ್ತಿದೆ. ಇದರಿಂದ ಅನೇಕ ದುರ್ಘಟನೆಗಳು ಆಗಿಂದಾಗ್ಗೆ ನಡೆಯುತ್ತಿದೆ. ಇದನ್ನು ನಿವಾರಣೆ ಮಾಡುವುದಕ್ಕಾಗಿ ಒಂದು ಕಾನೂನು ಮಾಡುವುದು ಅಗತ್ಯ ಎಂದು ಹೇಳಿದ್ದಾರೆ. ವಾಹನ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೆ ಎಷ್ಟು ಬೇಕೋ ಅಷ್ಟು ಮಾಡುವುದು ನ್ಯಾಯ ಅದಕ್ಕಿಂತ ಹೆಚ್ಚು ಕಾನೂನು ಮಾಡಿದರೆ, ಅತಿವ್ಯಾಪ್ತಿಯಾಗಿ ಪರಿಣಮಿಸಿ ದೇಶದ ಹಿತಕ್ಕೆ ಧಕ್ಕೆ ಬರತಕ್ಕ ಸನ್ನಿವೇಶ ಬರುತ್ತದೆ. ಇಂಥ ಸನ್ನಿವೇಶವನ್ನು ಸೃಷ್ಟಿ ಮಾಡಿ ಕೊಳ್ಳಬಾರದು. ಇದನ್ನು ಸೂಕ್ಷ್ಮವಾಗಿ ಪರಿಶೀಲನೆ ಮಾಡಿದರೆ, ಇದರಲ್ಲಿ ಅಡಕವಾಗಿರತಕ್ಕ ಪದಗಳನ್ನು ವಿಮರ್ಶೆ ಮಾಡಿದರೆ, ಅದರಲ್ಲಿ 2ನೆಯ ಮತ್ತು 3ನೆಯ ಕ್ಲಾಸುಗಳಲ್ಲಿರುವ ಪದಗಳನ್ನು ವಿಮರ್ಶೆ ಮಾಡಿದರೆ ಸಾರ್ವಜನಿಕ ಹಿತಕ್ಕೆ ಇದು ಒಂದು ದೊಡ್ಡ ಸಂಚಕಾರವನ್ನು ತಂದೀತೊ ಎನ್ನುವ ಸಂಶಯ ಉಂಟು ಮಾಡತಕ್ಕದ್ದಾಗಿದೆ. ಅದುದರಿಂದ ಇಂಗ್ಲಿಷ್ ಪದವನ್ನು ಉಪಯೋಗಿಸುವುದಾದರೆ ಅನ್‌ಡಮಾಕ್ರಿಟಿಕ್ ಆಗಿದೆ. ಪ್ರಜಾಪ್ರಭುತ್ವದ ಕಾಲದಲ್ಲಿ ಸುಖೀರಾಜ್ಯವಾಗುವ ಕಾಲದಲ್ಲಿ, ಪೋಲೀಸ್ ರಾಜ್ಯಸ್ಥಾಪನೆ ಇದರಿಂದ ಆಗುತ್ತದೆಂದು ಕಾಣಬರುತ್ತದೆ.

1. ಮೈಸೂರು ವಾಹನ ಸಂಚಾರ ಕಾಯಿದೆ, 1955 ಕುರಿತಂತೆ 21.9.1956 ರಂದು ನಡೆದ ಚರ್ಚೆಯಲ್ಲಿ

ಇದಕ್ಕೆ ಎರಡು ಮೂರು ಉದಾಹರಣೆಗಳನ್ನು ಕೊಟ್ಟು ಈ ಸಭೆಯ ಮುಂದಿರುವ ಈ ಮಸೂದೆ ಈ ಸ್ವರೂಪದಲ್ಲಿ ಅಂಗೀಕಾರಕ್ಕೆ ಅನರ್ಹವಾಗಿದೆ ಎಂದು ವಿಜ್ಞಾಪನೆ ಮಾಡಿಕೊಳ್ಳಬೇಕಾಗಿದೆ. ಮೊದಲನೆಯದಾಗಿ, 1955ನೆಯ ಇಸವಿ ಅಕ್ಟೋಬರ್ 21ನೆಯ ತಾರೀಖಿನ ದಿವಸ ಈ ಮಸೂದೆ ವಿಧಾನ ಸಭೆಯ ಒಪ್ಪಿಗೆಯನ್ನು ಪಡೆಯಿತು. ಎಂದರೆ ಹತ್ತು ತಿಂಗಳ ಗರ್ಭ ಈ ಹೊತ್ತು ಹೊರಗೆ ಬರುತ್ತಿದೆ. ಇದರ ಅವಶ್ಯಕತೆ ಅಷ್ಟು ವಿಶೇಷವಾಗಿದ್ದಿದ್ದರೆ, ಈ ಕಾನೂನಿನ ಮೂಲಕ ಸಾರ್ವಜನಿಕರ ಹಿತವನ್ನು ಸಾಧನೆ ಮಾಡಬೇಕಾದುದು ಅಷ್ಟು ಅತ್ಯಗತ್ಯವಾಗಿದ್ದಲ್ಲಿ, ವಿಧಾನ ಸಭೆಯ ಒಪ್ಪಿಗೆಯಲ್ಲಿ ಪಡೆದ ಈ ಮಸೂದೆಯನ್ನು ಹತ್ತು ತಿಂಗಳು ತಡಮಾಡಿ ಏಕೆ ತರಬೇಕಾಗಿತ್ತು. ಮಂತ್ರಿಗಳ ಮನಸ್ಸಿನಲ್ಲಿ ಹತ್ತು ಹನ್ನೊಂದು ತಿಂಗಳಾದರೂ ಮೈಸೂರಿನ ಪ್ರಜೆಗಳಿಗೆ ಇದರ ಅತುರವಿರಲಾರದೆಂದು ಗೊತ್ತಿರಬಹುದು. ಅದುದರಿಂದ ಇದರಿಂದ ಭಾದಕವಿಲ್ಲವೆಂದು ಇಷ್ಟು ತಡಮಾಡಿರಬಹುದು. ಅಷ್ಟು ಅಗತ್ಯವಿದ್ದರೆ ಹೋದ ಫೆಬ್ರವರಿ ಮತ್ತು ಮಾರ್ಚ್ ತಿಂಗಳುಗಳಲ್ಲಿ 35–40 ದಿವಸಗಳು ಈ ಸಭೆ ಸೇರಿದ್ದ ಕಾಲದಲ್ಲಿ, ಇದು ಅಗತ್ಯವಾದ, ಪ್ರಜೆಗಳ ಜೀವಗಳನ್ನು ಉಳಿಸತಕ್ಕ ಪ್ರಜೆಗಳನ್ನು ಬದುಕಿಸತಕ್ಕ ಕಾನೂನಾಗಿದ್ದಿದ್ದರೆ, ಆಗಲೇ ತರಬಹುದಾಗಿತ್ತು. ಹಾಗೆ ಮಾಡದೇಯಿದ್ದ ಕಾರಣ ಇದಕ್ಕೆ ಅಗತ್ಯವಿಲ್ಲವೆಂದು ಕಂಡುಬರುತ್ತದೆ. ಇದ್ದ ಪಕ್ಷಗಳಲ್ಲಿ ಮಂತ್ರಿಗಳಿಗೆ ಈ ವಿಷಯದಲ್ಲಿ ಇನ್ನೂ ಹೆಚ್ಚು ಶ್ರದ್ಧೆ ಕಂಡು ಬರುತ್ತಿತ್ತು. ಇದರಲ್ಲಿ ಯಾವುದಾದರೂ ಸರಿ ಇರಬಹುದು. ಅಗತ್ಯವಿರಬೇಕಾದ ಕಾನೂನನ್ನು ಮಾಡುವುದರಲ್ಲಿ ಯಾವ ಆಸಕ್ತಿ ಶ್ರದ್ಧೆ ಇರಬೇಕೋ ಅದು ಇದ್ದಿರಲಿಲ್ಲವೆಂದು ಕಾಣುತ್ತದೆ.

ನನ್ನ ದೃಷ್ಟಿಯಲ್ಲಿ ಡೆಫಿನಿಷನ್ ಕ್ಲಾಸ್‌ನಲ್ಲಿರುವ ಕೆಲವು ಭಾಗಗಳು ಮುಖ್ಯ. ಅದರಲ್ಲಿಯೂ 3ನೆಯ ಕ್ಲಾಜಿನಲ್ಲಿರುವ ಕೆಲವು ಭಾಗಗಳನ್ನು ತೆಗೆದು ಹಾಕಿದರೆ ಮಾತ್ರ ಈ ಮಸೂದೆ ಈ ಸಭೆಯ ಅಂಗೀಕಾರಕ್ಕೆ ಯೋಗ್ಯವಾಗುತ್ತದೆ. ಅದುವರೆಗೆ ಅಂಗೀಕಾರ ಯೋಗ್ಯವಲ್ಲವೆಂದು ನನ್ನ ಭಾವನೆ. ಈ ಹೊತ್ತು ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಬೆಳೆಯುತ್ತಿದೆ. ಈ ಪ್ರಭುತ್ವದಲ್ಲಿ ಅಧಿಕಾರ ಕೇಂದ್ರೀಕೃತವಾಗಬಾರದು. ಅಧಿಕಾರವೆನ್ನುವುದು ಯಾವುದೇ ಒಂದು ಭಾಗದಲ್ಲಿ ನಿಲ್ಲಬಾರದು. ವಿಕೇಂದ್ರೀಕರಣವಾಗಬೇಕೆಂದು ಪ್ರಾಜ್ಞರಾದ ಹಿರಿಯ ಕಾಂಗ್ರೆಸ್ ಮುಂದಾಳುಗಳು ಹೇಳುತ್ತಿದ್ದಾರೆ. ಈಗ ಸ್ಥಳೀಯ ಸಂಸ್ಥೆಗಳಾದ ಮುನಿಸಿಪಾಲಿಟಿಗಳು ಕಾರ್ಪೊರೇಷನ್ ಮತ್ತು ಇತರ ಘನ ಸಂಸ್ಥೆಗಳು ಸರಿಯಾಗಿ ನಡೆಯುವುದಕ್ಕೆ ಕಾನೂನು ಮಾಡಿದ್ದೇವೆ. ಆ ಕಾನೂನಿನಲ್ಲಿ ವಾಹನ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೆ ಬೇಕಾದಷ್ಟು ಅನುಚ್ಛೇದಗಳಿವೆ, ಅಧಿಕಾರಗಳಿವೆ, ವ್ಯಾಪ್ತಿ ವಿಶೇಷವಾಗಿದೆ. ಬೆಂಗಳೂರು, ಮೈಸೂರು, ದಾವಣಗೆರೆಯಂಥ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕಾದರೆ ಪೌರಸಭೆಗಳಿಗೂ ಕಾರ್ಪೊರೇಷನ್‌ಗೂ ವಿಶೇಷ ಅಧಿಕಾರವಿದೆ, ಹಕ್ಕಿದೆ. ಈ ಹಕ್ಕನ್ನು ತೆಗೆದುಕೊಂಡು ಒಂದು ಸಂಸ್ಥಾನದ ಸರ್ಕಾರದ ಕೈಯಲ್ಲಿ ಅಳವಡಿಸಿಕೊಳ್ಳುವುದು ಯೋಗ್ಯವಲ್ಲ.

ಇನ್ನೊಂದು ವಿಷಯ. ಇಡೀ ಸಂಸ್ಥಾನಕ್ಕೆ ಅನ್ವಯಿಸುವ ರೀತಿ 1908ನೆಯ ಇಸವಿ ಪೋಲೀಸ್ ಆ್ಯಕ್ಟ್ ಇದೆ. ಆಗ ಮಾಡಿದ ಈ ಕಾನೂನಿನ ಪ್ರಕಾರ ಯಾವ ಸಾರ್ವಜನಿಕ ರಸ್ತೆ ಮತ್ತು

ಪ್ರದೇಶಗಳಲ್ಲಾದರೂ ದಾಂಧಲೆಗಳನ್ನು ನಿಲ್ಲಿಸಬೇಕಾದರೆ ಜನರಿಗೆ ಸೌಕರ್ಯವನ್ನೂದಗಿಸಬೇಕಾದರೆ, ಬೇಕಾದಷ್ಟು ವಿಚಾರಣಾ ಅಧಿಕಾರವಿದೆ. ನಮ್ಮ ಮೈಸೂರು ಸಂಸ್ಥಾನದ ನಗರಗಳು ಮತ್ತು ಇತರ ಗ್ರಾಮಾಂತರ ಪ್ರದೇಶಗಳಲ್ಲಿ ವಾಹನ ಸಂಚಾರ ಸೌಕರ್ಯವನ್ನು ಹತೋಟಿಯಲ್ಲಿಟ್ಟುಕೊಂಡು ಅನೇಕ ಜನರ ಪ್ರಾಣಗಳನ್ನುಳಿಸಬೇಕಾದರೆ ಮೈಸೂರು ಪೋಲೀಸ್ ಆ್ಯಕ್ಟಿನ ನಾಲ್ಕನೆಯ ಅನುಚ್ಛೇದದಲ್ಲಿರುವ ಅಧಿಕಾರವನ್ನು ಚಲಾಯಿಸಿದರೆ ಸಾಕು, ಈ ಕೆಲಸವನ್ನು ಸಂಪೂರ್ಣವಾಗಿಯೂ ಸಮಗ್ರವಾಗಿಯೂ ಮಾಡಬಹುದು.

ಪೋಲೀಸ್ ಆಕ್ಟ್ ಪ್ರಕಾರ ಪೋಲೀಸರಿಗೆ ಅಧಿಕಾರವು ಈಗ ಯಾವುದಾದರೂ ಸಾಮಾನ್ಯ ರಸ್ತೆಗಳಿಗೆ ಅನ್ವಯಿಸುತ್ತದೆ. ಆದರೆ ಪಬ್ಲಿಕ್ ಪ್ಲೇಸ್‌ನಲ್ಲಿಲ್ಲ.

ಇದನ್ನು ಬಿಟ್ಟು ಇನ್ನೂ ಕೆಲವು ಭಾಗಗಳಿವೆ. ಅವು ಸೇರುವುದಿಲ್ಲ. ಆದರೆ ಈ ಡೆಫಿನಿಷನ್ ಪ್ರಕಾರ ಎಲ್ಲವೂ ಸೇರುತ್ತವೆ. ಆದುದರಿಂದ ಇದರ ವ್ಯಾಪ್ತಿ ವಿಶೇಷವಾಗುತ್ತದೆ. ವಾಹನ ಸಂಚಾರವನ್ನು ಹತೋಟಿ ಮಾಡುವುದು ಅತ್ಯಗತ್ಯ. ಇದಕ್ಕೆ ಅಧಿಕಾರವಿರಬೇಕಾದುದು ಅಗತ್ಯ, ಒಪ್ಪುತ್ತೇನೆ. ಆದರೆ Mysore Municipalities Act of 1933, Bangalore City Muncipal Corporation Act of 1949 and Mysore Tason Muncipalities Act of 1951. ಪ್ರಕಾರ ಯಾವ ಅಧಿಕಾರ ಸ್ಥಳೀಯ ಸಂಸ್ಥೆಗಳಿಗಿದೆಯೋ ಅದು ಈ ಕಾನೂನಿನಿಂದ ಹೊರಟು ಹೋಗುತ್ತದೆ. ಇದರ ಒಂಭತ್ತನೆಯ ಕ್ಲಾಸನ್ನು ನೋಡಿದರೆ ಅದನ್ನು ರಿಪೀಲ್ ಮಾಡಬೇಕೆಂದು ಹೇಳಿದ್ದಾರೆ. ರೀಪಿಲ್ ಅಂಡ್ ಸೇವಿಂಗ್ ಕ್ಲಾಸನ್ನು ಆಲೋಚನೆ ಮಾಡಿದರೆ ಯಾವುದನ್ನು ಇಟ್ಟಿದ್ದಾರೆ. ಯಾವುದನ್ನು ತೆಗೆದಿದ್ದಾರೆ ಎಂಬುದು ಗೊತ್ತಾಗುತ್ತದೆ. ಸ್ಥಳೀಯ ಸಂಸ್ಥೆಗಳಿಗೆ ಪ್ರಜಾಪ್ರತಿನಿಧಿಗಳಾಗಿ ಬಂದು ಮುಂದೆ ದೇಶದ ಆಡಳಿತವನ್ನು ನಿರ್ವಹಿಸಲು ಬೇಕಾದ ಶಿಕ್ಷಣವನ್ನು ಅಲ್ಲಿ ಪಡೆಯಲು ಅಲ್ಲಿ ಅವಕಾಶವಿರುವಾಗ, ಸ್ಥಳೀಯ ಸಂಸ್ಥೆಗಳಿಗೆ ವಿಶೇಷ ಅಧಿಕಾರಗಳನ್ನು ಕ್ರಮೇಣ ಕೊಡುತ್ತಾ ಬರುವುದು ಯೋಗ್ಯ. ಒಂದು ಕಾಲದಲ್ಲಿ ಗಾಂಧೀಜಿಯವರೇ ಹೇಳಿದ ಹಾಗೆ, ಅಧಿಕಾರ ವಿಕೇಂದ್ರಿಕರಣ ಮಾಡಬೇಕು ಜನರಲ್ಲೇ ಉಳಿಸಬೇಕು, ಪಂಚಾಯಿತಿ ರಾಜ್ಯವಾಗಬೇಕು ಎಂದು ಹೇಳಿ ಈಗ ಹತ್ತಾರು ಜನರು ಯಾವುದೇ ಪ್ರದೇಶದಲ್ಲಿ, ನಗರದಲ್ಲಿ ಅಧಿಕಾರ ಚಲಾಯಿಸಬಾರದೆಂದೂ ಅದು ಪ್ರಜಾಕ್ಷೇಮಕ್ಕೆ ಧಕ್ಕೆ ಎಂದೂ ಹೇಳಿದರೆ ಹೇಗೆ?

ಇದು ಪ್ರಜಾಪ್ರಭುತ್ವವೆಂಬುದರಲ್ಲಿ ಇರುವ ಒಂದು ವಿಶೇಷ ತತ್ವವನ್ನು ಪ್ರತಿಪಾದನೆ ಮಾಡುವುದಿಲ್ಲ. ಒಂದು ಪ್ರವಾಹ ನಾಲ್ಕಾರು ಮಾರ್ಗಗಳಲ್ಲಿ ಹೋಗಿ ಸಾಗರವಾಗಿ ಪರಿಣಮಿಸುತ್ತದೆ. ಆದರೆ ಆ ಸಾಗರದಲ್ಲಿ ಉಪ್ಪು ನೀರು ದೊರೆಯುತ್ತದೆಯೇ ಹೊರತು, ಜನರು ಅದರಲ್ಲಿ ಮುಳುಗಿ ಸಾಯಬಹುದೇ ಹೊರತು ದಾಹವನ್ನಡಗಿಸಿಕೊಳ್ಳುವುದಕ್ಕಾಗುವುದಿಲ್ಲ. ಅಂತೆಯೇ, ಪ್ರಜಾಪ್ರಭುತ್ವ ಬೇರೂರಬೇಕಾಗಿರುವ ಕಾಲದಲ್ಲಿ ಹತ್ತಾರು ಗುಣಗಳನ್ನು ಪಡೆದ ನಾಯಕರುಗಳು ಆಯಾ ಸ್ಥಳೀಯ

ಸಂಸ್ಥೆಗಳ ಕೆಲಸಗಳನ್ನು ಸಂಪೂರ್ಣವಾಗಿ ಯಶಸ್ವಿಯಾಗಿ ನಡೆಸಬೇಕಾದ ಕಾಲದಲ್ಲಿ ಅವರಿಗೆ ಅಧಿಕಾರವನ್ನು ಕೊಡುವುದನ್ನು ಬಿಟ್ಟು ಒಂದು ಕಡೆ ಕೇಂದ್ರೀಕೃತ ಮಾಡುವುದು ಶುದ್ಧ ತಪ್ಪು ಎಂದು ನಾನು ಭಾವಿಸುತ್ತೇನೆ. ಈ ದೃಷ್ಟಿಯಿಂದ ನೋಡಿದರೆ ಈ ಕಾನೂನನ್ನು ತಂದಿರುವ ಸ್ವರೂಪ ಉಚಿತವಾದದ್ದಲ್ಲ, ಉದ್ದೇಶವೇನೋ ಘನವಾದುದು. ಮಂತ್ರಿಗಳಿಗೂ ನನಗೂ ಆ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಇಲ್ಲ "In this Act, public place" means a road, street way or other place, whether through fare or not ..... have a right to pass" ಎಂದು ಹೇಳಿದ್ದಲ್ಲದೆ, it includes four other things. ಎಂದು ನಾಲ್ಕು ಅನುಚ್ಛೇದಗಳನ್ನು ನಿರೂಪಿಸಿದೆ. ಅವುಗಳನ್ನು ಮೂರು ಸ್ಥಳೀಯ ಸಂಸ್ಥೆಗಳಿಗೆ ಅನ್ವಯಿಸುವಂಥವು, ಇನ್ನೊಂದು ಪೊಲೀಸ್ ಆಕ್ಟಿಗೆ ಅನ್ವಯಿಸುವಂಥಾದ್ದು. ಅಲ್ಲಿಗೆ ಇದರ ವ್ಯಾಪ್ತಿ ಎಷ್ಟಾಯಿತೆಂಬುದನ್ನು ತಾವು ಯೋಚನೆ ಮಾಡಬೇಕು. ಇದನ್ನೂ 8–9ನೆಯ ಸೆಕ್ಷನ್‌ಗಳಲ್ಲಿ ಹೇಳಿರುವ ಸೇವಿಂಗ್ಸ್ ಮತ್ತು ರಿಪೀಲ್ ಭಾಗವನ್ನೂ ಮನಸ್ಸಿನಲ್ಲಿಟ್ಟುಕೊಂಡರೆ ಅಧಿಕಾರ ಎಷ್ಟರಮಟ್ಟಿಗೆ ಕೇಂದ್ರೀಕೃತವಾಗುತ್ತದೆಂಬುದು ಗೊತ್ತಾಗುತ್ತದೆ. ಪೊಲೀಸ್ ಅಧಿಕಾರ ನಡೆಸಲು ಅನುಕೂಲವಾದ ಹಾಗಾಗುತ್ತದೆ ಪ್ರಜಾರಾಜ್ಯಕ್ಕೆ ಬದಲು ಪೊಲೀಸ್ ರಾಜ್ಯ ಬರುವುದಕ್ಕೆ ದಾರಿಯಾಗುತ್ತದೆ. 1953ರ ಮೈಸೂರು ಸಿಟಿ ಮುನಿಸಿಪಾಲಿಟಿಗಳ ಕಾನೂನು ಪ್ರಕಾರ ವಾಹನ ಸಂಚಾರಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕೆ ಅವಕಾಶವಿದೆ. ಈ ರೀತಿ ವಾಹನ ಸಂಚಾರವನ್ನು ಹತೋಟಿಯಲ್ಲಿಡುವುದಕ್ಕೆ ಬೇಕಾದಷ್ಟು ಕಾನೂನುಗಳಿವೆ. ಅಪಾಯ ಸಂಭವವಿದ್ದರೆ, ಯಾರಾದರೂ ಅಡ್ಡಿ ಮಾಡುತ್ತಿದ್ದರೆ, ಅಥವಾ ಆತಂಕಪಡಿಸಿದರೆ ಅದನ್ನು ನಿವಾರಣೆ ಮಾಡುವುದಕ್ಕೆ ಇವತ್ತಿಗೂ ಕಾನೂನಿನಲ್ಲಿ ಅವಕಾಶವಿದೆ. ಇಷ್ಟೆ 105ನೆಯ ಸೆಕ್ಷನ್ ಪ್ರಕಾರ "ಅಂಡ್ ಟು ಡಿಕ್ಲೇರ್ ಸಚ್ ಸ್ಟ್ರೀಟ್ ಪಬ್ಲಿಕ್" ಎಂದು ಹೇಳಿ ಪೌರಸಭೆಯವರಿಗೆ ಹೆಚ್ಚಿಗೆ ಅಧಿಕಾರವುಂಟು. ಈ ವ್ಯಾಪ್ತಿಯನ್ನು ಉಪಯೋಗಿಸಿಕೊಂಡು ಸನ್ನಿವೇಶಗಳಿಗೆ ತಕ್ಕಂತೆ ಕೆಲವು ಸ್ಥಳಗಳನ್ನು ಸಾರ್ವಜನಿಕ ಸ್ಥಳಗಳೆಂದು ಪ್ರಸಿದ್ಧ ಮಾಡುವುದಕ್ಕೂ ಅವಕಾಶವಿದೆ. ಈ ಕಾನೂನೆಂದರಲ್ಲೇ ಅಲ್ಲಿ 1951ನೆಯ ಇಸವಿಯ ಮೈಸೂರು ಟೌನ್ ಮುನಿಸಿಪಾಲಿಟಿ ಆಕ್ಟಿನಲ್ಲಿಯೂ ಕೂಡ ಈ ಅವಕಾಶವಿದೆ. For controlling unwield traffic prohibiting transit of any vehicles of such form construction, weight or size ಎಂದು ಅಲ್ಲಿ ಹಾಕಿದ್ದಾರೆ. ಇದರ ಪ್ರಕಾರ ಈಗ ನಮ್ಮ ಮುಂದಿರುವ ಬಿಲ್ಲಿನಲ್ಲಿ ಏನು ಅಧಿಕಾರ ಕೇಳಿದ್ದಾರೆ. ಆ ಅಧಿಕಾರ ಇದ್ದೇ ಇದೆ. ಹೀಗಿರುವಾಗ ಬೇರೊಂದು ಕಾನೂನು ಅನಗತ್ಯವೆಂದು ಹೇಳುತ್ತೇನೆ. ಅಲ್ಲದೆ ಈ ಬಿಲ್ಲಿನ ವ್ಯಾಪ್ತಿ ಎಷ್ಟು ಜಾಸ್ತಿಯೆಂಬುದನ್ನು ನಾನು ತಿಳಿಸುತ್ತೇನೆ. ಏನಾದರೂ ಲಾರಿಗಳು, ಜಟಕಾಗಳು ಮೋಟಾರು ಸೈಕಲ್ಲುಗಳು ಯಮದೂತರು ಬಂದ ಹಾಗೆ ಬರುತ್ತಿದ್ದಾರೆ. ಅವುಗಳಿಂದ ಪಬ್ಲಿಕ್ ಸ್ಟ್ರೀಟ್‌ಗಳಲ್ಲಿ ಉಂಟಾಗುವ ಅಡಚಣೆಗಳನ್ನು ತಡೆಗಟ್ಟುವುದು ಹೇಗೆ? ಅದಕ್ಕೆ ಬದಲು ಅಲ್ಲಿ ಸುತ್ತಮುತ್ತಲ ಪ್ರದೇಶವನ್ನೆಲ್ಲಾ ಪಬ್ಲಿಕ್ ಪ್ಲೇಸ್ ಎಂದು ಕರೆದು ಮುಚ್ಚಿಬಿಡುವುದು ಹೇಗಿದೆ? ನೀವೇ ನೋಡಿ. ದೊಡ್ಡ ದೊಡ್ಡ ವ್ಯಾಪಾರ ನಡೆಯುವ ರಸ್ತೆಗಳಲ್ಲಿ ಕೆಲವೇ ವಿಧವಾದ ವ್ಯಾಪಾರ ನಡೆಯುವಂತೆ ನಿಬಂಧನೆ ಮಾಡುವುದೇನೋ ಸರಿಯೇ? ಉದ್ದೇಶ ಅಷ್ಟು ಮಾತ್ರ ಆಗಿದ್ದರೆ ಸಾಕಾಗಿತ್ತು. ಆದರೆ

For the regulation of the use of public place" ಎಂಬ ಪದಗಳನ್ನು ಉಪಯೋಗಿಸುವುದರ ಅಗತ್ಯವೇನಿದೆ? "For the regulation of the use of any public place" ಎನ್ನುವುದಕ್ಕೂ ವ್ಯತ್ಯಾಸವೆಷ್ಟಿದೆಯೆಂಬುದನ್ನು ನೋಡಿ. ಈ ರೀತಿ ಕಾನೂನು ಮಾಡಿದ ಪಕ್ಷದಲ್ಲಿ ಶ್ರೀಮಾನ್ ಸಿದ್ಧವೀರಪ್ಪನವರೇ ಪೋರ್ಟ್‌ಫೋಲಿಯೋ ಮಂತ್ರಿಗಳಾಗಿದ್ದು, ಜನರ ಸ್ವಭಾವ ಬಲ್ಲವರು ಪ್ರಜಾಪ್ರಭುತ್ವವಿರಬೇಕೆಂದು ಆಸೆಯುಳ್ಳವರು ಇದ್ದರೆ ಪರವಾಯಿಲ್ಲ. ಹಾಗಿಲ್ಲದೆ ಇವತ್ತು ಇಂಥ ಕಾನೂನು ಮಾಡಿ ನಾಳೆ ಅಪರಷ್ಟೆ ಪ್ರಜಾಪ್ರಭುತ್ವದಲ್ಲಿ ಅಭಿಮಾನವಿಲ್ಲದಿರುವ ಜನರು ಅಧಿಕಾರಕ್ಕೆ ಬಂದರೆ ಪರಿಸ್ಥಿತಿ ಏನಾಗುತ್ತದೆ. ಒಂದು ವಿಷಯ ಹೇಳವುದಾದರೆ, 1935 ರಿಂದ 1938ನೆಯ ಇಸವಿಯವರೆಗೆ ಬೆಂಗಳೂರು ನಗರದಲ್ಲಿ ಅವಿಶ್ರಾಂತವಾಗಿ ಸ್ವಾತಂತ್ರ್ಯ ಚಳವಳಿ ನಡೆಯಿತು. ಆಗ್ಗೆ ಜನರನ್ನು ಈ ಚಳವಳಿಗಾಗಿ ಹುರಿದುಂಬಿಸುವುದಕ್ಕಾಗಿ ಸಭೆ ನಡೆಸುವುದು ದಿನಚರಿಯಾಗಿತ್ತು. ಮೈಸೂರು ಬ್ಯಾಂಕಿನ ಹತ್ತಿರವಿರುವ ಬಸ್‌ಪ್ಪಾ ಪಾರ್ಕಿನಲ್ಲಿ ನಿತ್ಯವೂ ಸಭೆ ಸೇರಿ ಜನರನ್ನು ಸ್ವಾತಂತ್ರ್ಯಕ್ಕೆ ನಾಗಾಲೋಟದಲ್ಲಿ ಒಯ್ಯುವ ಪ್ರಯತ್ನದಲ್ಲಿದ್ದಾಗ ಅಧಿಕಾರ ವರ್ಗದವರು ಅದಕ್ಕೊಂದು ವಿಶೇಷವಾದ ಅರ್ಥವನ್ನು ಕಲ್ಪನೆಮಾಡಿಕೊಂಡು ಜನರನ್ನು ಯಾವ ರೀತಿ ಹಿಂಸೆ ಮಾಡುವುದಕ್ಕೆ ಪ್ರಯತ್ನಪಟ್ಟರು. ಆಗಿನ ಅಧಿಕಾರವರ್ಗ ಎಷ್ಟು ಮಟ್ಟಿಗೆ ಕಾಯಿದೆಗಳನ್ನು ಮೀರಿ ನಡೆಯುತ್ತಿದ್ದರು. ಪಬ್ಲಿಕ್ ಪ್ಲೇಸ್ ಎಂದ ಮಾತ್ರಕ್ಕೇ ಯಾರೊಬ್ಬರೂ ಆ ಪ್ರದೇಶಕ್ಕೆ ಬರಕೂಡದೆಂದು ಹೇಳಲಿಲ್ಲವೆ? ಇದರಿಂದಾಗಿ ಅನೇಕ ಜನರು ಬಸಪ್ಪ ಪಾರ್ಕಿನಲ್ಲಿ ಗೋಲಿ ಬಾರಿಗೆ ತುತ್ತಾದರು. ಕಾರಾಗೃಹವಾಸ ಪಡೆದರು; ಪೋಲೀಸರ ಲಾಠಿ ಪ್ರಹಾರಕ್ಕೆ ಸಿಕ್ಕಿಬಿದ್ದು ಇವತ್ತಿಗೂ ಅಸ್ವಸ್ಥದೇಹದಿಂದ ಆದರೂ ಯೋಗ್ಯವಾದ ಮನಸ್ಸಿನಿಂದ ಕೂಡಿದವರಾಗಿಲ್ಲವೇ? ಇವೆಲ್ಲವೂ ಇರಲ್ಲಿರತಕ್ಕ ಸದಸ್ಯರಿಗೂ ಪರಿಚಯವಾಗಿದೆ. ಆದ್ದರಿಂದ ಕಾನೂನು ಚಲಾಯಿಸುವವರು ಯೋಗ್ಯರಾಗದ ಪಕ್ಷದಲ್ಲಿ ಪ್ರಜಾಪ್ರಭುತ್ವಕ್ಕೆ ಅನಾನುಕೂಲತೆಯುಂಟಾಗೀತು, ಹತ್ತು ಜನರನ್ನು ಉಳಿಸಬೇಕೆಂದು ಹೇಳಿ ಇಡೀ ಜನಾಂಗಕ್ಕೇ ಹಿಂಸೆಯಾಗುವಂಥ ಕಾನೂನು ಮಾಡಬಾರದೆಂದು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ನನ್ನ ದೃಷ್ಟಿಯಿಂದ ಈ ಕಾನೂನು ಬದಲಾವಣೆಯಾಗದ ಪಕ್ಷದಲ್ಲಿ ಇಲ್ಲಿ ಹೇಳಿರುವ "For the regulation of the use of any public place and the closing there of or parts there of" ಎಂಬುದನ್ನು ತೆಗೆದುಹಾಕುವುದಕ್ಕಾಗಲಿ ಬದಲಾವಣೆ ಮಾಡುವುದಕ್ಕಾಗಲಿ ಆಗದೆ ಹೋದರೆ ಸಾರ್ವಜನಿಕ ಚಟುವಟಿಕೆ ಬೆಳೆಯುವುದು ಹೋಗಿ ಇದು ಅದನ್ನು ಧ್ವಂಸ ಮಾಡುತ್ತದೆಂದು ಹೇಳುತ್ತೇನೆ. ಈ ರೀತಿಯ ಪ್ರತಿಬಂಧಕಗಳನ್ನು ತಂದುಹಾಕುವ ಕಾನೂನನ್ನು ಮಾಡಬಾರದು. ಅದರಲ್ಲೂ ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಇನ್ನೂ ಬೆಳೆಯಬೇಕಾಗಿದೆ. ದ್ವಿಪಕ್ಷೀಯ ಸರ್ಕಾರ ನಮ್ಮ ದೇಶದಲ್ಲಿ ಬಂದು ಪಾರ್ಲಿಮೆಂಟ್ ಪ್ರಭುತ್ವ ಸುಗಮವಾಗಿ ಬೆಳೆಯಬೇಕೆಂಬ ಕಾಲದಲ್ಲಿ ನಾವಿದ್ದೇವೆ. ಇಂಥ ಕಾಲದಲ್ಲಿ ಕಾನೂನು ರಚನೆ ಈ ರೀತಿ ನಡೆಯುವ ಪಕ್ಷದಲ್ಲಿ ಅದು ದುರುಪಯೋಗವಾದೀತು. ಜನರನ್ನು ನಾವು ಮೆಚ್ಚಬೇಕಾದ್ದು ಯೋಗ್ಯ. ಈ ನಮ್ಮ ಮಂತ್ರಿಗಳು ಹೇಳಿದ ಮೂರು ವಿಧಾನಗಳಲ್ಲಿ "Enforcement 2. Engineering 3. Education ಗಳಲ್ಲಿ ಕೊನೆಯ ಎರಡನ್ನು ಮಾತ್ರ ಪ್ರಯೋಗ ಮಾಡಿ ಮೊದಲನೆಯದಾದ "Enforcement ಎಂಬುದನ್ನು ಕಡೆಗಿಡಿ. ಸಂಚಾರ

ಸೌಕರ್ಯಕ್ಕನುಕೂಲವಾಗುವಂತೆ ವಾಹನಗಳು ಸರಿಯಾದ ರೀತಿಯಲ್ಲಿ ಹೋಗುವಂತೆ ತಕ್ಕ ಶಿಕ್ಷಣ ಜನರಿಗೆ ಕೊಡಿ. ರಸ್ತೆಗಳನ್ನು ನಿರ್ಮಾಣ ಮಾಡುವುದರಲ್ಲಿ ತಮ್ಮ ಪ್ರತಿಭೆಯಲ್ಲವನ್ನೂ ತೋರಿಸಿ. ಮಾತ್ರ "Enforcement" ವಿಷಯದಲ್ಲಿ ಆ ಪ್ರತಿಭೆಯನ್ನು ಶಕ್ತಿಯನ್ನು ತೋರಿಸಬೇಡಿ ಎಂದು ನಾನು ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ತಮ್ಮ ಉದ್ದೇಶವೇನೋ ಯೋಗ್ಯವಾದದ್ದೇ. ಆದರೆ ಮಾಡತಕ್ಕ ಪ್ರಯತ್ನ ಸಾಧುವಾದದ್ದಲ್ಲ. ಸಾರ್ವಜನಿಕ ಹಿತಕ್ಕೆ ಘಾತುಕವಾಗುತ್ತದೆ. ಅದರಲ್ಲೂ ಮುಂದೆ ಪಕ್ಷಗಳು ಬೆಳೆಯಬೇಕಾಗಿರುವಾಗ ಪ್ರಭಲ ಪಕ್ಷಗಳು ಉಂಟಾಗಬೇಕಾಗಿರುವಾಗ ಜನರು ಸಂಘಟನೆಯಿಂದ ಹುಮ್ಮಸ್ಸಿನಿಂದ ಯೋಗ್ಯವಾದ ರೀತಿಯಲ್ಲಿ ನಮ್ಮ ನಾನಾ ಎಕನಾಮಿಕ್ ಪ್ರೊಗ್ರಾಂಗಳು ನಡೆಯಬೇಕಾಗಿರುವ ಕಾಲದಲ್ಲಿ 'ಪಬ್ಲಿಕ್ ಪ್ಲೇಸ್' ಎಂಬ ಶಬ್ದವನ್ನು ಸೇರಿಸಿ ವಾಹನ ಸಂಚಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವ ಕಾನೂನನ್ನು ತಂದು ಅಧಿಕಾರವನ್ನು ಕೇಂದ್ರೀಕೃತ ಮಾಡಿಕೊಳ್ಳುವುದು ಉಚಿತವಲ್ಲವೆಂದು ಕೇಳುತ್ತೇನೆ. ಆದ್ದರಿಂದ ಈ ಬದಲಾವಣೆಯನ್ನು ತಾವೇ ಸಭೆಯ ಮುಂದಿಡುತ್ತಾ ಈ ಸಭೆಯ ಒಪ್ಪಿಗೆಯನ್ನು ಪಡೆಯುತ್ತೀರೆಂದು ನಂಬಿ ನನ್ನ ಭಾಷಣವನ್ನು ಮುಗಿಸುತ್ತೇನೆ.

## 2. ಮೈಸೂರು ರಾಜ್ಯ ವಾಹನ ಮಸೂದೆ 1958 ಕುರಿತಂತೆ

### ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ)

ಮಾನ್ಯ ಸಭಾಪತಿಗಳೇ, ಈ ವಿಧೇಯಕ ನಮ್ಮ ಮಿತ್ರರಾದ ಶ್ರೀಮಾನ್ ಈಶ್ವರಪ್ಪನವರ ಅಭಿನಂದನೆಗೆ ಪಾತ್ರವಾಗಿದೆ ಎಂದ ಮೇಲೆ ಇದು ಸಾರ್ವಜನಿಕರ ಮನ್ನಣೆಗೂ ಪಾತ್ರವಾಗಿದೆ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಈಗ ಸಾರ್ವಜನಿಕ ಸಂಚಾರವನ್ನು ನಿಯಂತ್ರಣ ಮಾಡುವುದಕ್ಕೆ ಸಂಬಂಧಪಟ್ಟ ಕಾನೂನು ಇಡೀ ರಾಜ್ಯದಲ್ಲಿ ಒಂದೇ ರೀತಿ ಇರಬೇಕೆಂಬ ಆಸೆಯಿಂದ ಇದನ್ನು ತಂದಿದ್ದಾರೆ. ಈ ಕಾನೂನು ಇಲ್ಲವೆಂದು ನಮ್ಮಲ್ಲಿ ಕಷ್ಟವಾಗಿಲ್ಲ. ಆದರೆ ಇದನ್ನು ಜಾರಿಗೆ ತರುವುದಕ್ಕೆ ಸಾಮರ್ಥ್ಯವಿಲ್ಲವೆಂದು ಜನರಿಗೆ ಕಷ್ಟವಾಗಿದೆ. ಒಂದು ಉದಾಹರಣೆಯನ್ನು ವಿಜ್ಞಾಪನೆ ಮಾಡಿಕೊಳ್ಳುವುದಾದರೆ, ನಮ್ಮ ಮೈಸೂರು ದೇಶದಲ್ಲಿ ಸಂಚಾರವನ್ನು ನಿಯಂತ್ರಣ ಮಾಡುವುದಕ್ಕೆ ಕೆಲವು ನಿಯಮಾವಳಿಗಳಿವೆ. ಇದನ್ನು ಪೊಲೀಸ್ ಆಕ್ಟಿನಲ್ಲೇ ಸೇರಿಸಿದ್ದಾರೆ. ಆದರೆ ದಿನವಹಿ ನಡೆಯುತ್ತಿರುವ ಅನಾಹುತಗಳನ್ನು ಗಣನೆಗೆ ತೆಗೆದುಕೊಂಡರೆ, ಈ ಕಾನೂನನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿಲ್ಲವೆಂಬುದು ಗೊತ್ತಾಗುತ್ತದೆ. ಮೈಸೂರು-ಬೆಂಗಳೂರು ರಸ್ತೆ ಬಹಳ ಚೆನ್ನಾಗಿದೆ. ಕಾರುಗಳು ಬಸ್ಸುಗಳು ಮತ್ತು ಇತರ ವಾಹನಗಳಲ್ಲಿ ಜನರು ಹೋಗುತ್ತಾರೆ. ಒಂದು ಸಾರಿ ಮೈಸೂರಿನಿಂದ ಬೆಂಗಳೂರಿಗೆ ಅಥವಾ ಬೆಂಗಳೂರಿನಿಂದ ಮೈಸೂರಿಗೆ ಪ್ರಯಾಣ ಮಾಡಬೇಕೆಂದರೆ ಜನರು ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಹೋಗಬೇಕಾಗಿದೆ. ಲಾರಿಗಳ ಹಾವಳಿಯನ್ನು ಹೇಳುವುದಕ್ಕಾಗುವುದಿಲ್ಲ. ಮುಖ್ಯಮಂತ್ರಿಗಳು ಪ್ರಯಾಣ ಮಾಡುವಾಗ ರಾಜ್ಯದ ಆಡಳಿತದ ಸಂಬಂಧವಾಗಿ ಯೋಚನಾಪರರಾಗಿಲ್ಲದಿರುವಾಗ, ಅವರೂ ಗಮನಿಸಿದ್ದಾರೆಂದು ಕಾಣುತ್ತದೆ. ಲಾರಿಗಳಲ್ಲಿ ಮುಂದೆ ಇರಬೇಕಾದ ದೀಪ ಇರುವುದಿಲ್ಲ. ಹಾರನ್ ಮಾಡುವುದಿಲ್ಲ.

2. ಮೈಸೂರು ರಾಜ್ಯ ವಾಹನ ಮಸೂದೆ 1958 ಕುರಿತಂತೆ 9.12.1959 ರಂದು ನಡೆದ ಚರ್ಚೆಯಲ್ಲಿ

ಮೋಟಾರಿಗೆ ಮುಂದೆ ಹೋಗಲು ರಸ್ತೆ ಬಿಡುವುದಿಲ್ಲ. ಈ ವಿಧೇಯಕರಲ್ಲಿರುವಂತೆ ಚಾಚೂ ನಡೆಯುವುದಿಲ್ಲ. ನಮ್ಮ ಬೆಂಗಳೂರು ನಗರವನ್ನು ತೆಗೆದುಕೊಂಡರೆ ನಾನು ಮಲ್ಲೇಶ್ವರದ ನಿವಾಸಿ ಅನೇಕ ವರ್ಷಗಳಿಂದ ಅಲ್ಲಿನ ಮೂರನೆಯ ರಸ್ತೆ ಮೋಟಾರು ಮತ್ತು ಬಸ್ಸು ಸಂಚಾರಕ್ಕೆ ಮಾತ್ರ ಇರುವುದು, ಅಲ್ಲಿ ಲಾರಿಗಳು ಬರಬಾರದೆಂದೂ ಸುಬೇದಾರ್ ರಸ್ತೆಯ ಎಂಟನೆಯ ರಸ್ತೆಯಲ್ಲಿ ಹೋಗಬೇಕೆಂದೂ ಗೊತ್ತು ಮಾಡಿದ್ದಾರೆ. ಆದರೂ ನಾಲ್ಕು, ಐದು, ಆರು ಮತ್ತು ಏಳನೆಯ ರಸ್ತೆಗಳಲ್ಲಿ ಲಾರಿಗಳ ಸಂಚಾರವನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಮಕ್ಕಳನ್ನು ಶಾಲೆಗಳಿಗೆ ಕಳುಹಿಸುವುದೇ ಕಷ್ಟವಾಗಿದೆ. ಗಂಡಸರು ಹೆಂಗಸರು ಮನೆಗಳನ್ನು ಬಿಟ್ಟು ಹೊರಗೆ ಹೋದರೆ ಜೀವಂತರಾಗಿ ಬರುತ್ತಾರೆಯೇ ಎಂಬ ಕಾತುರತೆಯಿಂದಿರುತ್ತೇವೆ. ಮಲ್ಲೇಶ್ವರದ ನಿವಾಸಿಗಳು ಈ ತೊಂದರೆಯನ್ನು ಹೊಸದಾಗಿ ಕಾನೂನು ಮಾಡಿ ನಿಲ್ಲಿಸಬೇಕಾಗಿಲ್ಲ. ಕಾನೂನು ಇದ್ದರೂ ಇದ್ದು ವ್ಯವಸ್ಥಿತವಾಗಿ ನಡೆಯದೇ ಇರುವುದರಿಂದ ಜನರಿಗೆ ಕಷ್ಟವಾಗಿದೆ. ಮಂತ್ರಿಗಳು ಸಂಚಾರ ಮಾಡುವಾಗ ಅಧಿಕಾರಿಗಳು ಕರ್ಟಸಿ ತೋರಿಸಬೇಕೆಂದು ಸರ್ಕ್ಯುಲರ್ ಹೊರಡಿಸಿದ್ದಾರೆ. ಬಸ್ಸುಗಳಲ್ಲಿ ಓವರ್‌ಲೋಡ್ ಹಾಕಿರುವುದನ್ನು ಕಂಡು ಹಿಡಿದಿದ್ದಾರೆ. ಮಂತ್ರಿಗಳ ಪ್ರವಾಸ ಕಾಲದಲ್ಲಿ ಇಂಥಾ ಲಾರಿಗಳ ಹಾವಳಿಯನ್ನು ನಿಲ್ಲಿಸಿದರೆ ರಾಜ್ಯಾಡಳಿತ ಅರ್ಧಭಾಗವನ್ನು ಸುಸೂತ್ರವಾಗಿ ನಡೆಸಿದಂತಾಗುತ್ತದೆಂದು ನನಗಾದರೂ ಎನಿಸುತ್ತದೆ. ಸಂಚಾರ ಮಂತ್ರಿಗಳು ಹಳ್ಳಿಗಳಲ್ಲಿ ಹೆಚ್ಚು ಸಂಚಾರ ಮಾಡುತ್ತಿದ್ದಾರೆ. ಅವರು ಲಾರಿಗಳ ಹಾವಳಿಯನ್ನು ನಿಲ್ಲಿಸಿ ಸಾರ್ವಜನಿಕ ಸೇವೆ ಮಾಡುತ್ತಾರೆಂದು ನನ್ನ ಭಾವನೆ.

ಇದರಲ್ಲಿ ಅನೇಕ ಕಲಮುಗಳು ಸರ್ವಸಮರ್ಪಕವಾಗಿವೆ. ಆದರೆ ಯಾವ ಒಂದು ವಿಧೇಯಕ ಅಥವಾ ಕಾನೂನು ಮಾಡಿದರೂ ಅದು ವಾಸ್ತವವಾಗಿರತಕ್ಕ ಜೀವನಕ್ಕೆ ಹೊಂದಿಕೊಂಡು ಹೋಗುವಂತಿರಬೇಕು. ಇದರಲ್ಲಿನ ಒಂದೆರಡು ಕ್ಲಾಸುಗಳನ್ನು ನೋಡಿದರೆ ನನಗೆ ಹೀಗನ್ನಿಸುತ್ತದೆ ಈಗಿನ ಕಾಲದ ವಿದ್ಯಾರ್ಥಿಗಳು ಯಾವುದೋ ಒಂದು ಭಾಗವನ್ನು 'ಬೈಹಾರ್ಟ್' ಮಾಡುವುದು ಪರೀಕ್ಷೆಯ ಕಾಲದಲ್ಲಿ ಇದನ್ನು ವಾಂತಿ ಮಾಡುವುದು, ಅದರಿಂದ ಜೀವ ಉಳಿಸಿಕೊಳ್ಳುವುದು ಹೇಗೆ ಮಾಡುತ್ತಾರೆ, ಇದರಂತೆ ಈ ಮಸೂದೆಯ ಕೆಲವು ಖಂಡಗಳಲ್ಲಿ ತೋರುತ್ತದೆ. ಉದಾಹರಣೆಗೆ 20ನೆಯ ಪುಟದಲ್ಲಿ 3ನೆಯ ಕಲಮನ್ನು ನೋಡಬಹುದು. ವಾಹನಗಳನ್ನು ನಡೆಸುವವನು ಹೇಗೆ ನಡೆದುಕೊಳ್ಳಬೇಕೆಂದು ಹೇಳಿದೆ.

ಈ ರೀತಿಯಲ್ಲಿರುವುದು ಬೊಂಬಾಯಿನಲ್ಲಿ, ಟ್ರಾಮ್ಸ್ ಇರುವುದು ಅಲ್ಲಿ ಆದರೆ ಅಲ್ಲಿನ ಕಾನೂನನ್ನು ನಕಲಿ ಮಾಡುವಾಗ ಅರ್ಥದ ಕಡೆ ಗಮನಕೊಡದೆ, ಕೇವಲ ಪದ ಇರಬೇಕೆಂದು ಮಾಡಿದ್ದಾರೆ. ಈ ರೀತಿ ಕಾನೂನುಗಳನ್ನು ತಂದರೆ ಸರ್ವಸಮರ್ಪಕವಾಗಿದ್ದೀತೆ. ವಾಸ್ತವಿಕ ವಿದ್ಯಮಾನಗಳನ್ನು ಗಮನಿಸದೆ ಸುಮ್ಮನೆ ಕಾಪಿ ಮಾಡಿದರೆ ಹೀಗೆಯೇ ಆಗುವುದು. ಇಲ್ಲಿ ಟ್ರಾಮ್ಸ್ ಬಂದರೆ ಹೀಗೆಯೇ ಬರಬಹುದು. ಆದರೆ ಈಗ ಇದು ವಾಸ್ತವಿಕ ವಿಷಯಕ್ಕೆ ದೂರವಾಗಿದೆ.

ಈ ವಿಧೇಯಕದ ಮೊದಲನೆಯ ಷೆಡ್ಯೂಲಿನಲ್ಲಿರುವ ಚಿತ್ರಗಳು ಬಹಳ ಚೆನ್ನಾಗಿದೆ. ನಮ್ಮ ದೇಶದ ಜನಸಂಖ್ಯೆ 30 ಕೋಟಿ, ದೇವತೆಗಳೂ ಇಷ್ಟೇ ಇದ್ದಾರೆಂದು ಹೇಳುತ್ತಾರೆ. ಅಷ್ಟಿದೆ ಚಿತ್ರಗಳು,

ಲಾರಿ ಡ್ರೈವರ್‌ಗಳೂ ಇತರ ವಾಹನಗಳನ್ನು ನಡೆಸುವವರೂ ಇವುಗಳನ್ನೆಲ್ಲಾ ಪರಿಚಯ ಮಾಡಿಕೊಂಡು ತಿಳಿದುಕೊಳ್ಳಬೇಕಾದರೆ ಕಷ್ಟ. ಇವುಗಳನ್ನು ಇನ್ನೂ ಸುಲಭ ಮಾಡಲು ಸಾಧ್ಯವೇ ಅಥವಾ ಮಾಡುವುದು ಯೋಗ್ಯವೇ ಎನ್ನುವುದನ್ನು ಯೋಚನೆ ಮಾಡಬೇಕಾಗಿದೆ ಇದು ಜಾಗ್ರತೆ ಕಾನೂನಾಗಬೇಕಾಗಿರುವುದರಿಂದ ರೂಲ್ಸ್‌ನಲ್ಲಾದರೂ ಇದನ್ನು ಸುಲಭ ಮಾಡಬೇಕೆಂದು ಸೂಚಿಸುತ್ತೇನೆ.

ವಿಧೇಯಕದ 3ನೆಯ ಖಂಡದಲ್ಲಿರುವಂತೆ ಯಾವುದಾದರೂ ರಸ್ತೆ ಅಥವಾ ಸೇತುವೆ ಸರಿಯಾದ ಸ್ಥಿತಿಯಲ್ಲಿಲ್ಲದಿದ್ದರೆ ರಿಪೇರಿ ಮಾಡಬೇಕಾಗಿದ್ದರೆ ವಾಹನಗಳ ಸಂಚಾರವನ್ನು ನಿಲ್ಲಿಸಬಹುದು ಅಥವಾ ನಿಷೇಧಿಸಬಹುದು.

ಒಂದು ತಿಂಗಳಿಗಿಂತ ಕಡಿಮೆ ಕಾಲ ನಿಷೇಧಿಸಬೇಕಾದಲ್ಲಿ ಪ್ರಕಟಣೆ ಅಥವಾ ಮುನ್ಸೂಚನೆ ಬೇಕಾಗಿಲ್ಲವೆಂದು ಹೇಳಿದ್ದಾರೆ. ಇದರಿಂದ ಸಾರ್ವಜನಿಕರಿಗೆ ಬಹಳ ತೊಂದರೆಯಾಗಬಹುದು. ಹಳೆಯ ಮೈಸೂರು ರಾಜ್ಯದ ಮಲೆನಾಡು ರಸ್ತೆಗಳು ಬೊಂಬಾಯಿ ಕರ್ನಾಟಕ ಉತ್ತರ ಕನ್ನಡ ಜಿಲ್ಲೆಯ ಕೆಲವು ರಸ್ತೆಗಳು ಇವುಗಳನ್ನು ರಿಪೇರಿ ಮಾಡಲು ಒಂದು ತಿಂಗಳು ಬೇಕಾಗುತ್ತದೆ. ಅಲ್ಲಿ ಹೆಚ್ಚು ವಾಹನಗಳ ಸಂಚಾರವಿರುತ್ತದೆ. ಈಗ ಕಾರವಾರದ ಕಡೆ ಸಂಚರಿಸುವ ವಾಹನ ಸಂಖ್ಯೆ ಹೆಚ್ಚಾಗಿದೆ. ಖನಿಜ ಸಂಪತ್ತಿನ ವ್ಯವಹಾರ ಹೆಚ್ಚಿದೆ. ಹೀಗಿರುವಾಗ ಮುನ್ಸೂಚನೆ ಕೊಡದಲ್ಲಿ ಜನರಿಗೆ ತೊಂದರೆಯಂಟಾದೀತು.

ಆದುದರಿಂದ ಈ ಮುನ್ಸೂಚನೆ ಕೊಡಬೇಕಾದುದು ಅಗತ್ಯ. ಇದನ್ನು ಅವರು ಗಮನಿಸಬೇಕು. ಪರಿಷ್ಕೃತವಾಗಬೇಕು ಎಂದು ವಿಜ್ಞಾಪನೆ ಮಾಡುತ್ತೇನೆ.

ನಾನು ಅಷ್ಟು ತಿಳಿಯದ ವಿದ್ಯೆಗೆ ಹೋಗುವುದಿಲ್ಲ. ಅದು ದೈವಯತ್ನ. ಮನುಷ್ಯ ಯತ್ನವಲ್ಲ. ಮನುಷ್ಯನ ಸ್ವಾಧೀನವಾಗತಕ್ಕ ವಿಷಯವನ್ನು ಮಾತ್ರ ಮಂತ್ರಿಗಳಲ್ಲಿ ವಿಜ್ಞಾಪನೆ ಮಾಡುತ್ತಾ ಇದ್ದೆ. ತಾವು ಹೇಳುವಷ್ಟು ವಿದ್ಯೆ ನನಗೆ ಇರಲಾರದು. ನನ್ನ ಬರಿದಿ ಸಾಮಾನ್ಯ ಬುದ್ಧಿ. ವಿತರ್ಕ ಬುದ್ಧಿಯಿಲ್ಲ.

ಇನ್ನೊಂದು (ಸೈನ್ಸ್) ಸೂಚನೆ ಕೊಡತಕ್ಕ ಗುರುತುಗಳು, ಬಣ್ಣಬಣ್ಣದ ಮಾದರಿಗಳಲ್ಲಿ ಚೌಕದ, ತ್ರಿಕೋಣಾಕಾರದ ಚಿಹ್ನೆಗಳ ಮೇಲೆ ಕನ್ನಡ ಭಾಷೆಯಲ್ಲಿ ಬರಯಬೇಕೆಂದು ಇಲ್ಲಿ ಹಾಕಿದ್ದಾರೆ. ಇದರ ಜೊತೆಗೆ ಇಂಗ್ಲೀಷ್ ಕೂಡ ಕೆಲವು ಕಾಲ ಇದ್ದಿರಬೇಕಾದುದು ಅಗತ್ಯ ಎಂದು ವಿಜ್ಞಾಪನೆ ಮಾಡುತ್ತೇನೆ. ಏಕೆಂದರೆ ನಾನು ಅನುಭವಿಸಿದ್ದೇನೆ. ಮದರಾಸ್ ಪ್ರಾಂತಕ್ಕೆ ಕಾಲಿಟ್ಟ ಮೇಲೆ ಯಾವ ಬಸ್ಸು ಯಾವ ಕಡೆಗೆ ಹೋಗುತ್ತದೆ ಯಾವ ರಸ್ತೆ ಏನು ಎಂಬುದು ಒಂದೂ ಗೊತ್ತಾಗುವುದಿಲ್ಲ. ಈ ಭಾಷೆಯ ವ್ಯಾಮೋಹಸಾರ್ವಜನಿಕ ಹಿತಕ್ಕೆ ಧಕ್ಕೆ ತರಬಾರದು. ಯಾವ ದೇಶದಲ್ಲಿ ಭಾಷೆಯ ವ್ಯಾಮೋಹ ಸಾರ್ವಜನಿಕ ಹಿತಕ್ಕೆ ಧಕ್ಕೆ ತರುತ್ತದೆ ಅಂತಹ ರಾಜ್ಯ ನಮ್ಮ ಭಾರತ ರಾಷ್ಟ್ರದಲ್ಲಿ ಹೆಚ್ಚು ಯಶಸ್ವಿಯಾಗಿ ಬಾಳಲಾರದು. ಭಾಷೆಯ ಮೇಲೆ ಅಭಿಮಾನ ಇರಬೇಕು. ಅನೇಕ ಜನ ಹೊರಗಿನವರು ನಮ್ಮ ದೇಶಕ್ಕೆ ಬರುತ್ತಾರೆ. ದೊಡ್ಡ ಯಾತ್ರಾ ಸ್ಥಳಗಳಿವೆ. ಆದರೆ ವ್ಯಾಮೋಹ ಇರಬಾರದು. ಕನ್ನಡದಲ್ಲಿ

ಇರಬೇಕು. ಇಂಗ್ಲೀಷ್‌ನಲ್ಲೂ ಇರಬೇಕು. ಪ್ರಾಚೀನ ಸ್ಮಾರಕಗಳ ದೃಷ್ಟಿಯಿಂದ, ಕೈಗಾರಿಕೆಗಳ ಅಭಿವೃದ್ಧಿಯ ದೃಷ್ಟಿಯಿಂದ ರಾಜಕೀಯ ದೃಷ್ಟಿಯಿಂದಲೂ ಕೂಡ ಎಷ್ಟೋ ಜನ ಹೊರಗಿನವರು ಮೈಸೂರು ರಾಜ್ಯವನ್ನು ನೋಡಬೇಕೆಂಬ ಅಭಿಲಾಷೆಯಿರತಕ್ಕವರು ಇಂಡಿಯಾ ದೇಶದಲ್ಲಿ ಇದ್ದಾರೆ.

ಟ್ರ್ಯಾಫಿಕ್ ಸೆನ್ಸ್ ಎನ್ನುವುದು ಕನ್ನಡದಲ್ಲಿ ಇರಲೇಬೇಕು. ಯೋಗ್ಯ. ಅಕ್ಷರ ಜೊತೆಗೆ ಈಗಿರುವ ಹಾಗೆ ಇಂಗ್ಲಿಷ್‌ನಲ್ಲಿರುವುದನ್ನು ಮುಂದುವರಿಸಿಕೊಂಡು ಬರಬೇಕಾದುದು ಅಗತ್ಯವಾಗಿದೆ. ಇದು ಬಹಳ ಯೋಗ್ಯವಾಗಿದೆ. ಅರ್ಥವತ್ತಾಗಿದೆ. ಒಪ್ಪಿಗೆ ಅರ್ಹವಾಗಿವೆ ಎಂದು ಮಾತ್ರ ಹೇಳುತ್ತೇನೆ.

– * –

# X. ಪೋಲಿಸ್ ಇಲಾಖೆಯ ಸಮಸ್ಯೆಗಳಿಗೆ ಸಂಬಂಧಿಸಿದಂತೆ ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

## 1. 1953 ರ ಮೈಸೂರು ಪೋಲಿಸು (ತಿದ್ದುಪಡಿ) ಮಸೂದೆ ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ : (ಉಪಾಧ್ಯಾಯರ ಕ್ಷೇತ್ರ) : ಸ್ವಾಮಿ ಈಗ ಮೈಸೂರು ಪೋಲಿಸು ಅಮೆಂಡ್‌ಮೆಂಟ್ ಬಿಲ್ಲಿಗೆ ಶ್ರೀಮಾನ್ ವೀರಬಸಪ್ಪನವರು ತಂದಿರತಕ್ಕಂಥ ತಿದ್ದುಪಡಿಯನ್ನು ಬಹಳ ತೀವ್ರವಾಗಿ ಪ್ರತಿಭಟಿಸಬೇಕಾಗಿದೆ. ಹಾಗೆ ತೀವ್ರವಾಗಿ ಪ್ರತಿಭಟಿಸಿಬೇಕಾಗಿರುವುದಕ್ಕೆ ಕಾರಣ ಇಷ್ಟೆ. ಮೊದಲನೆಯದಾಗಿ ಈ ಸಭೆಯ ಮುಂದೆ ಅವರು ತಂದಿರತಕ್ಕಂಥ ಈ ತಿದ್ದುಪಡಿ ಬಹಳ ಅತುರದಲ್ಲಿ ಹೆಚ್ಚು ವಿವೇಚನೆಗೆ ಒಳಪಡಿಸಿಕೊಳ್ಳದೆ ತಂದಿದ್ದಾರೆ. ಆ ವಿಷಯದಲ್ಲಿ ಮುಖ್ಯವಾದ ಉದಾಹರಣೆಗಳನ್ನು ಕೂಡ ಈ ಸಭೆಯ ಮುಂದೆ ಇಡುತ್ತೇನೆ. ಎರಡನೆಯದಾಗಿ ಇಂತಹ ತಿದ್ದುಪಡಿ ತಂದು ಸೆಲೆಕ್ಟ್ ಸಮಿತಿಯಲ್ಲಿ ಬಹುಮತದಿಂದ ಮಾಡಿರುವ ತೀರ್ಮಾನವನ್ನು ಈ ಸಭೆ ಒಪ್ಪುವುದಕ್ಕೆ ಅವಕಾಶ ಕಲ್ಪನೆ ಮಾಡಿಕೊಡದಿರುವ ಮನೋವೃತ್ತಿಯನ್ನು ಮನೋಭಾವನೆಯನ್ನು ತೀಕ್ಷ್ಣವಾಗಿ ಖಂಡಿಸತಕ್ಕದ್ದು. ನನ್ನ ಕಾರ್ಯ ಎಂದು ನಾನು ಭಾವಿಸಿ ಕೊಂಡಿದ್ದೇನೆ.

ಇದರಲ್ಲಿ ಮುಖ್ಯ ವಿಷಯವಿಷ್ಟೆ. ಈ ಸಭೆಯ ಮುಂದೆ ಮೊಟ್ಟಮೊದಲು ಈ ಮಸೂದೆ ಬಂದಾಗ, ಅಮಲ್ದಾರರಿಗಾಗಲಿ, ಅಥವಾ ಮ್ಯಾಜಿಸ್ಟ್ರೇಟರಿಗಾಗಲಿ ಲೈಸನ್ಸ್ ಕೊಡುವ ಅಧಿಕಾರವಿರಲಿಲ್ಲ. ಆದ್ದರಿಂದ ಇದನ್ನು ಸೆಲೆಕ್ಟ್ ಕಮಿಟಿಗೆ ಕಳುಹಿಸಿ ಮ್ಯಾಜಿಸ್ಟ್ರೇಟರಿಗೆ, ನ್ಯಾಯಾಧಿಪತಿಗಳಿಗೆ ಅಧಿಕಾರ ಕೊಡುವುದು ಸೂಕ್ತ ಎಂಬುದನ್ನು ಪರ್ಯಾಲೋಚಿಸಬೇಕು ಎಂದು ಬಹಳ ಜನರು ಈ ಸಭೆಯಲ್ಲಿ ವಾದಮಾಡಿದರು. ಆ ದೃಷ್ಟಿಯನ್ನು ಮನಸ್ಸಿನಲ್ಲಿಟ್ಟು ಸೆಲೆಕ್ಟ್ ಕಮಿಟಿಯುವರು ಮ್ಯಾಜಿಸ್ಟ್ರೇಟರಿಗೆ ಕೂಡ ಲೈಸೆನ್ಸ್ ಕೊಡುವ ಹಕ್ಕನ್ನು ಕಲ್ಪನೆ ಮಾಡಬೇಕೆಂಬ ಉದ್ದೇಶದಿಂದ ಈ ಬದಲಾವಣೆ ಮಾಡಿದ್ದಾರೆ. ಇದರಲ್ಲಿ ಎರಡರ್ಥವಿದೆ. ಈಗ ಇದು ಪೋಲಿಸ್ ಆಕ್ಟು. ಇದರಿಂದ ಯಾವ ವಿಧವಾದ ತೊಂದರೆ ಅನ್ಯಾಯ ಅಥವಾ ಕಿರುಕುಳ ಆಗುವುದಾಗಿದ್ದರೆ ಪರಿಹರಿಸಿಕೊಳ್ಳಬಹುದು. ಪೋಲಿಸು ಅಧಿಕಾರಿಗಳಿಗೆ ಈ ಅಧಿಕಾರವಿರುವುದು ನ್ಯಾಯವಾಗಿದೆ. ನಾನು ಇದನ್ನು ಒಪ್ಪುತ್ತೇನೆ. ಆದರೆ ಧ್ವನಿವರ್ಧಕ ಯಂತ್ರವನ್ನು ಉಪಯೋಗ ಮಾಡುವ ಮೆರವಣಿಗೆ ಹೋಗುವಾಗ. ದೊಡ್ಡ ದೊಡ್ಡ ಸಭೆ ನಡೆಸುವಾಗ ಲೈಸೆನ್ಸ್ ಕೊಡುವ ಅಧಿಕಾರ ಕೇವಲ ಪೋಲಿಸು ಅಧಿಕಾರಿಗಳಿಗೆ ಮಾತ್ರವಲ್ಲದೆ ಇತರ ಅನೇಕ ಅಧಿಕಾರಿಗಳಿಗೂ ಇರಬೇಕಾದದ್ದು ಉಚಿತ.

ಈ ಪೋಲೀಸ್ ತಿದ್ದುಪಡಿ ಮಸೂದೆಯ ಮೂಲಕ ಈ ದಿನ ನ್ಯಾಯಾಧೀಶರಿಗೆ ಇರತಕ್ಕ ಅಧಿಕಾರವನ್ನು ಸರ್ಕಾರ ಕಸಿದುಕೊಳ್ಳುತ್ತಿದೆ. ಈ ರೀತಿ ನಮ್ಮ ದೇಶದಲ್ಲಿ ಆಡಳಿತ ಸೂತ್ರವನ್ನು

---

1. 1953 ರ ಮೈಸೂರು ಪೋಲಿಸು (ತಿದ್ದುಪಡಿ) ಮಸೂದೆ ಕುರಿತಂತೆ 24.7.1953 ರಂದು ನಡೆದ ಚರ್ಚೆಯಲ್ಲಿ

ವಹಿಸಿರತಕ್ಕ ಪ್ರಜಾ ಸರ್ಕಾರ ನ್ಯಾಯಾಧೀಶರಿಗಿದ್ದ ಅಧಿಕಾರವನ್ನು ಕಸಿದುಕೊಂಡು ಪೋಲಿಸ್ ಅಧಿಕಾರಿಗಳಿಗೆ ವಹಿಸುತ್ತಿರುವುದನ್ನು ಕಂಡು, ನಮ್ಮ ಸರ್ಕಾರಕ್ಕೆ ಪೋಲಿಸ್ ಅಧಿಕಾರಿಗಳಲ್ಲಿರುವ ನಂಬಿಕೆ, ವಿಶ್ವಾಸ ನ್ಯಾಯಾಧೀಶರಲ್ಲಿಲ್ಲವಲ್ಲ ಎಂದು ಖಿನ್ನವಾಗಿದ್ದೇನೆ. ಈ ತಿದ್ದುಪಡಿ ಮಸೂದೆಯನ್ನು ತಂದಿರತಕ್ಕ ಉದ್ದೇಶವಾದರೂ ಸಾಮಾನ್ಯ ಪ್ರಜೆಯ ನಿತ್ಯಜೀವನದಲ್ಲಿ ಈ ಧ್ವನಿವರ್ಧಕ ಯಂತ್ರದಿಂದ ಆಗುತ್ತಿರುವ ಕಿರುಕುಳ ಮತ್ತು ಶಾಂತಿಭಂಗವನ್ನು ತಪ್ಪಿಸುವುದಕ್ಕಾಗಿ ಈ ನೆಮ್ಮದಿ ಭಂಗ, ಶಾಂತಿ ಭಂಗವನ್ನು ತಪ್ಪಿಸತಕ್ಕ ಕಾಲದಲ್ಲಿ ಸಾಮಾನ್ಯ ಪ್ರಜೆಯ ಸಾಮಾನ್ಯ ಹಕ್ಕಿಗೆ ಲೋಪಬರದಂತೆ ವರ್ತಿಸುವುದು ಸರ್ಕಾರದ ಆದ್ಯಕರ್ತವ್ಯವೆಂದು ನಾನು ಭಾವಿಸುತ್ತೇನೆ. ನಮ್ಮ ದೇಶದಲ್ಲಿ ಪೋಲಿಸ್ ಅಧಿಕಾರಿಗಳ ಹತ್ತಿರ ಹೋಗುವುದಕ್ಕೆ ಜನರು ಹೆದರಿಕೊಳ್ಳತಕ್ಕ ಕಾಲದಲ್ಲಿ ನ್ಯಾಯಾಧೀಶರ ಬಳಿಗೆ ಹೋಗಲು ಸಿದ್ಧವಾಗಿರತಕ್ಕ ಕಾಲದಲ್ಲಿ, ನ್ಯಾಯಾಧೀಶರು ಸಂಸ್ಥಾನದ ಎಲ್ಲಾ ತಾಲ್ಲೂಕು ಹೆಡ್ ಕ್ವಾರ್ಟರ್ಸ್‌ನಲ್ಲಿಯೂ ಇರತಕ್ಕ ಕಾಲದಲ್ಲಿ, ನ್ಯಾಯದ ಅಧಿ ದೇವತೆಯಿಂದ ಒಂದು ಅಧಿಕಾರವನ್ನು ಕಸಿದು ಪೋಲಿಸ್ ಅಧಿಕಾರಿಗೆ ಕೊಡುವುದು ಅಥವಾ ತನಗೆ ಇಷ್ಟಬಂದ ಗೆಜೆಟೆಡ್ ಅಧಿಕಾರಿಗೆ ಕೊಡುವುದು – ಈ ರೀತಿಯ ವರ್ತನೆಯಿಂದ ಎಲ್ಲಿ ನಮ್ಮ ಮೈಸೂರು ಸರ್ಕಾರ ಇಂದು ಪೊಲೀಸ್ ರಾಜ್ಯವನ್ನೇ ಸ್ಥಾಪಿಸಲು ಪ್ರಯತ್ನಪಡುತ್ತಿದೆಯೋ ಎಂಬ ಭೀತಿ ನಮ್ಮ ಮನಸ್ಸಿನಲ್ಲಿ ಹುಟ್ಟಲು ಕಾರಣವಾಗಿದೆ. ಅಷ್ಟೇ ಅಲ್ಲದೆ, ಪೊಲೀಸ್ ಅಧಿಕಾರಿಗಳಲ್ಲಿ ಕೇಂದ್ರೀಕೃತವಾಗುವ ಈ ಅಧಿಕಾರ ಇಂದು ಆಡಳಿತ ಸೂತ್ರ ವಹಿಸಿರುವ ರಾಜಕೀಯ ಪಕ್ಷದ ಪ್ರತಿಪಕ್ಷವನ್ನು ಸರ್ವ ನಾಶಮಾಡಲು ಅಸ್ಪದವಾಗುತ್ತದೆಂಬ ಭಯ ಜನರ ಮನಸ್ಸಿನಲ್ಲಿ ತಲೆದೋರಿದೆ. ಈ ಕಾರಣಗಳಿಂದ ಈ ಪೋಲಿಸ್ ತಿದ್ದುಪಡಿ ಮಸೂದೆಯನ್ನು ಸೆಲೆಕ್ಟ್ ಕಮಿಟಿಯವರು ಯಾವ ರೀತಿ ಬದಲಾವಣೆ ಮಾಡಿದ್ದಾರೆಯೋ ಆ ರೀತಿ ಒಪ್ಪಿಕೊಳ್ಳುವುದರಿಂದ ಜನರ ನೆಮ್ಮದಿಗೆ ಭಂಗ ಬಾರದೇ ಇರುವ ಹಾಗೆ ಕೆಲಸ ಮಾಡುವುದಕ್ಕೆ ಸಾಧ್ಯವಾದೀತು, ಸಾಮಾನ್ಯ ಪ್ರಜೆಯ ಹಕ್ಕನ್ನು ಸಹ ಉಳಿಸಿಕೊಳ್ಳುವುದಕ್ಕೆ ಅವಕಾಶವಾದೀತು, ಎಂದು ಹೇಳಿ ಶ್ರೀ ವೀರಬಸಪ್ಪನವರು ತಂದಿರತಕ್ಕಂಥ ತಿದ್ದುಪಡಿ ಉಚಿತವಲ್ಲ, ಸಕಾಲದಲ್ಲಿ ಎರಡು ನಮ್ರತೆಯಿಂದ ತಮ್ಮ ಮೂಲಕ ಪ್ರಾರ್ಥನೆ ಮಾಡುತ್ತೇನೆ.

## 2. 1961ರ ಪೊಲೀಸ್ ಕಾನೂನು ತಿದ್ದುಪಡಿ ಕುರಿತಂತೆ

**ಶ್ರೀ ಎಂ.ಪಿ.ಎಲ್. ಶಾಸ್ತ್ರಿ :–**

ಮಾನ್ಯ ಸಭಾಪತಿಗಳೇ, ಈ ತಿದ್ದುಪಡಿ ಸೂಚಿತವಾಗಿರತಕ್ಕದ್ದು 8ನೇ ಅಧ್ಯಾಯದ 99ನೇ ಅನುಚ್ಛೇದದಲ್ಲಿ powers and duties of officers in the matter of detection and investigation of offences ಅಂತಹೇಳಿ (a,b,c,d) ಕ್ಲಾಸ್‌ಗಳಲ್ಲಿ ಕಂಡುಬರತಕ್ಕ ಅಧಿಕಾರಕ್ಕೆ ಸಂಬಂಧಪಟ್ಟದ್ದು. ಈ ಅಧಿಕಾರಗಳೆಲ್ಲವೂ ಕೂಡ ವಿಶೇಷವಾದಂಥ ಅಧಿಕಾರಿಗಳು, ಇವುಗಳನ್ನು ಚಲಾಯಿಸಬೇಕಾಗಿದ್ದರೆ ಆ ಅಧಿಕಾರಿಗೆ ದಕ್ಷತೆ ಇದ್ದಿರಬೇಕು. ಯೋಗ್ಯತೆ ಇದ್ದಿರಬೇಕು, ಅನುಭವ

2. 1961ರ ಪೊಲೀಸ್ ಕಾನೂನು ತಿದ್ದುಪಡಿ ಕುರಿತಂತೆ 10.10.1961 ರಂದು ನಡೆದ ಚರ್ಚೆಯಲ್ಲಿ

ಇದ್ದಿರಬೇಕು. ಅದರ ಜೊತೆಗೆ ಸಾರ್ವಜನಿಕರ ನಂಬಿಕೆ ಗಳಿಸತಕ್ಕ ಅಧಿಕಾರಿ ಆ ಸ್ಥಾನದಲ್ಲಿ ಇದ್ದಿರಬೇಕು. ಈ ಅಧಿಕಾರಗಳನ್ನು ಪ್ರತಿಯೊಬ್ಬರಿಗೂ ಹಂಚತಕ್ಕ ಕಾಲದಲ್ಲೂ ಕೂಡ ರಾಜ್ಯದ ಸ್ಟೇಟ್ ಗವರ್ನರಿಗೆ ಇರತಕ್ಕ ಅಧಿಕಾರವನ್ನು ಈ ರೀತಿ ಜವಾನನಿಗೂ ಹಂಚತಕ್ಕ ಪ್ರಕಟಣೆ ಯಾವ ಕಾನೂನಿನಲ್ಲೂ ಕಂಡು ಬರುವುದಿಲ್ಲ. ಈ 99ನೇ ಅನುಚ್ಛೇದದಲ್ಲಿ ಮಾತ್ರ ಈ ಒಂದು ನೆರಳು ಕಂಡುಬರುತ್ತಿದೆ. ಅಧಿಕಾರ ಇರುವುದು ಯಾರ್‍ಯಾರಿಗೆ ಎಂಬುದನ್ನು ಇದರಲ್ಲಿ ಹೇಳುತ್ತಾರೆ. ಯಾವ ಸ್ಥಳಕ್ಕಾದರೂ, ಯಾವ ಕಾಲದಲ್ಲಾದರೂ ಹೋಗಬಹುದು. ಯಾವ ಸಾಮಾನನ್ನಾದರೂ ತೆಗೆದುಕೊಂಡು ಹೋಗಬಹುದು. ಅದಕ್ಕೆ ತಡೆ ಬಂದ ಪಕ್ಷದಲ್ಲಿ ಅವರನ್ನು ದೂರ ಮಾಡಲು ಕಾರ್ಯಕ್ರಮ ಕೈಕೊಳ್ಳಬಹುದು. ಅಂಥಾ ಅಧಿಕಾರ ಇದೆ. ಪ್ರೊಹಿಬಿಷನ್ ಕಮೀಷನರಿಗೆ ಈ ಅಧಿಕಾರ ಕೊಡುವುದು ಉಚಿತ ಎಂದು ಹೇಳುತ್ತಾರೆ ಒಪ್ಪಬೇಕು. The commissioner, the Deputy commissioner or any prohibition officer duly empowered in this behalf by the State Government ಎಂದು ಹೇಳುವ ಈ 3 ಅಧಿಕಾರಿಗಳನ್ನು ತೂಕದಲ್ಲಿ ಹಾಕಿ, ಪರೀಕ್ಷೆ ಮಾಡಿ, ತೂಕ ನೋಡಿ, ಇದಕ್ಕೆ ಸರಿಸಮಾನವಾದ ಇನ್ನೊಬ್ಬ ಅಧಿಕಾರಿಗೆ ಅಧಿಕಾರ ಕೊಟ್ಟಿದ್ದೀರಿ. Any police officer not below the rank of an officer incharge of a police station. ಯಾವುದಾದರೂ ಒಂದು ಪೋಲಿಸ್ ಸ್ಟೇಷನ್‌ನಲ್ಲಿ ಇರತಕ್ಕ ಅಧಿಕಾರಿಗೂ ಕೂಡ ಅದೇ ಅಧಿಕಾರವನ್ನು ಕೊಡುತ್ತೀರಿ. ಒಂದು ರೀತಿಯಿಂದ ಡೆಪ್ಯುಟಿಕಮೀಷನರಿಗೆ ಕಾನೂನಿನ ಉಪಯೋಗ ಮಾಡುವುದಕ್ಕೆ ವಿಶೇಷವಾದ ರೀತಿಯ ಅಧಿಕಾರಗಳಿವೆ. ಮತ್ತು ಡೆಲಿಗೇಷನ್ ಆಫ್ ಪವರ್ಸ್ ಪಡೆದಿರತಕ್ಕ ಪ್ರೊಹಿಬಿಷನ್ ಆಫೀಸರಿಗೂ ವಿಶೇಷವಾದ ಅಧಿಕಾರವಿದೆ. ಈ ಎಲ್ಲ ಅಧಿಕಾರವನ್ನೂ ಕೂಡ ಒಬ್ಬ ಪೋಲೀಸ್ ಕಾನ್‌ಸ್ಟೇಬಲ್ಲಿಗೆ ಕೊಡುವುದಕ್ಕೆ ಸಿದ್ಧವಾಗಿದ್ದೀರಿ. ಇದನ್ನು ನೋಡಿದರೆ ಕಾನೂನು ಮಾಡತಕ್ಕವರು ಸರಿಯಾದ ಮಾರ್ಗದಲ್ಲಿ ವಿವೇಕಯುತವಾದ ಆಲೋಚನೆ ಮಾಡಿದ್ದಾರೆಯೋ ಎಂದು ಸಂದೇಹ ಬರುತ್ತದೆ. ಸಾಧಾರಣವಾಗಿ incharge of the police station ಎಂದರೆ ಪೋಲಿಸ್ ಸ್ಟೇಷನ್‌ನ ಚಾರ್ಜ್‌ನಲ್ಲಿರತಕ್ಕವನು ಕಾನ್‌ಸ್ಟೇಬಲ್ಲು. ಪೋಲಿಸ್ ರೂಲ್ಸ್, ಪೋಲಿಸ್ ಮ್ಯಾನ್ಯುಯಲ್ ನೋಡಿದರ ಪಕ್ಷದಲ್ಲಿ ಲೋಯರ್ ಸೆಕೆಂಡರಿ ಪಾಸ್ ಮಾಡಿರತಕ್ಕವನು ಅಥವಾ ಪಾಸ್ ಮಾಡದಿದ್ದರೂ ಕೂಡ ಹೆಡ್‌ಕಾನ್‌ಸ್ಟೇಬರ್ ಆಗಿರುವುದಕ್ಕೆ ಅವಕಾಶವಿದೆ. ಅಂಥಾ ಜನ ಇದ್ದಾರೆ. ಈ ಮಸೂದೆ ಚರ್ಚೆ ಆಗುತ್ತಾ ಇದ್ದಂಥ ಕಾಲದಲ್ಲಿ ಏಕೆ ಈ ಪಾನನಿರೋಧ ಯೋಗ್ಯವಾದ ರೀತಿಯಲ್ಲಿ ಯಶಸ್ವಿಯಾಗಿಲ್ಲ ಎಂದರೆ ಯಾರು ಇದನ್ನು ಜಾರಿಗೆ ತರುವುದಕ್ಕೆ ಅಧಿಕಾರ ಪಡೆದಿದ್ದಾರೋ ಅವರಲ್ಲಿ ಯೋಗ್ಯತೆ ಇಲ್ಲ ಎಂದು ಹೇಳಿದ್ದಾರೆ. ಅನೇಕ ಜನರಿಗೆ ಈ ಪಾನನಿರೋಧದಲ್ಲಿ ನಂಬಿಕೆ ಇಲ್ಲ. ಆದ್ದರಿಂದಲೇ ಅವರು ಹೊಟ್ಟೆ ಹೊಂದುಕೊಳ್ಳುವುದಕ್ಕೆ ಸರ್ಕಾರದ ಕೆಲಸಕ್ಕೆ ಸೇರಿ, ಈ ಕೆಲಸ ಮಾಡಬೇಕಾಗಿದ್ದರೆ ಅವರೇ ಅಧಿಕಾರಿಗಳ ಕಣ್ಣಿಗೆ ಬೀಳದ ರೀತಿಯಲ್ಲಿ ಬೇರೆ ಬೇರೆ ರೀತಿಯಿಂದ ಕೆಲಸ ಮಾಡುತ್ತಾ ಇರುತ್ತಾರೆ. ಅವರೇ ಹೆಂಡ ಕುಡಿಯುತ್ತಾರೆ, ಲಂಚ ತೆಗೆದುಕೊಳ್ಳುತ್ತಾರೆ, ಇಲಿಸಿಟ್ ಡಿಸ್ಟಿಲೇಷನ್, ಲಿಕ್ಕರ್ ತಯಾರು ಮಾಡುವುದಕ್ಕೆ ಸಹಾಯ ಮಾಡುತ್ತಾ ಇದ್ದಾರೆ. ಆದ್ದರಿಂದ ಯಶಸ್ವಿಯಾಗಿಲ್ಲ ಎಂಥು ಹೇಳುತ್ತೀರಿ, ತಾವು ಅಂಥಾ ಒಂದು ಮಾತನ್ನು, ಆಪಾದನೆಯನ್ನು

ಮಾಡಿ ಈಗ ಅದೇ ಪೊಲೀಸರಿಗೆ ಅಧಿಕಾರ ಕೊಡಬೇಕೆಂದಿದ್ದೀರಿ. ಅವನೇ ಪೋಲಿಸ್ ಸ್ಟೇಷನ್‌ನಲ್ಲಿ ಚಾರ್ಜಿನಲ್ಲಿರತಕ್ಕವನು. ವಿದ್ಯೆಯಲ್ಲಾಗಲೀ, ಇತರ ವಿಧದಲ್ಲಾಗಲೀ ಯಾವ ರೀತಿಯಲ್ಲೂ ಅರ್ಹತೆ ಇಲ್ಲದ ಪೋಲಿಸ್ ಕಾನ್‌ಸ್ಟೇಬಲ್‌ಗೆ ಈ ಅಧಿಕಾರ ವಹಿಸುತ್ತೇವೆ ಎಂದರೆ ಬಹಳ ತಪ್ಪಾದೀತು. ಯಾವ ವಿಧವಾದ ಅಧಿಕಾರವನ್ನು ಕೊಟ್ಟಿರುತ್ತೀರಿ ಎಂಬುದನ್ನು ಕೂಡ ನೋಡಬೇಕು.

Any officer incharge of a police station may seize any intoxicant, hump, mohwra flowers and any still, intensilty, implement or apparatus and any other thing, which he has reason to believe to be liable to confiscation detain and search and if he thinks proper, arrest any person whom he has reason to believe to be guilty of any offence under this Act.

"Any police officer not below the rank of an officer incharge of a police station" ಎಂದು ಹೇಳುವಾಗ ಅವನ ಯೋಗ್ಯತೆಯೇನೆಂಬುದನ್ನು ಮರೆತಿದ್ದಾರೆ. 99ನೆಯ ಕ್ಲಾಸಿನ (c) ಭಾಗದಲ್ಲಿ ನಮೂದಿಸಿರುವ ಅಧಿಕಾರ, ವಿಶೇಷಾಧಿಕಾರ ಏನಿದೆ ಅದನ್ನು ನಮ್ಮ ದೇಶದ ಈಗಿನ ಪರಿಸ್ಥಿತಿಯಲ್ಲಿ ಪಾನ ನಿರೋಧ ಯಶಸ್ವಿಯಾಗ ಬೇಕಾದರೆ ಯೋಗ್ಯತೆ ಇದ್ದಿರುವವರಿಗೆ ಕೊಡಬೇಕು. ಅಧಿಕಾರ ವ್ಯಾಪ್ತಿಯೇನಿದೆ ಅದನ್ನು ಚಲಾಯಿಸುವ ಯೋಗ್ಯತೆಯಿರುವವನಿಗೆ, ಸರಿಯಾಗಿ ಸರ್ಕಾರಕ್ಕೆ ತೃಪ್ತಿಯನ್ನುಂಟು ಮಾಡುವಂತೆ ಚಲಾಯಿಸಲು ಸಾಮರ್ಥ್ಯವಿರುವವನಿಗೆ ಕೊಡಬೇಕು. ಕಾನ್‌ಸ್ಟೇಬಲ್‌ಗೆ ಪೊಲೀಸ್ ಮ್ಯಾನ್ಯುಯಲ್ ಪ್ರಕಾರ ಚಲಾಯಿಸಬೇಕಾದ ಅಧಿಕಾರವೇ ಸರಿಯಾಗಿ ಗೊತ್ತಿರುವುದಿಲ್ಲ. ಈಗ ಲಾ ಅಂಡ್ ಆರ್ಡರ್ ಮೈಂಟೈನ ಮಾಡುವುದನ್ನು ಟ್ರಾಕ್ ಕಂಟ್ರೋಲ್ ಮಾಡುವುದನ್ನು ಈಗಾಗಲೇ ವಹಿಸಲಾಗಿದೆ. ಈ ಕ್ಲಾಸಿನಲ್ಲಿರುವ ವಿಶೇಷಾಧಿಕಾರ ಚಲಾಯಿಸುವುದನ್ನು ಇನ್‌ಸ್ಟೆಕ್ಟರಿಗಿಂತ ಕಡಿಮೆ ದರ್ಜೆಯವರಿಗೆ ವಹಿಸಿದ ಪಕ್ಷದಲ್ಲಿ ಈ ಕಾನೂನು ಅವಹೇಳನವಾದೀತು, ಜನತೆ ಬಹಳ ತೊಂದರೆಗೆ ಈಡಾದೀತು, ಲಂಚರುಷುವತ್ತು ಹೆಚ್ಚಾದೀತು ಎಂಬ ಭಯದಿಂದ ಪಾನನಿರೋಧ ಯಶಸ್ವಿಯಾಗ ಬೇಕಾದರೆ ಈ ಅಧಿಕಾರವನ್ನು ಕೊನೆಯ ಪಕ್ಷ ಪೊಲೀಸ್ ಇನ್‌ಸ್ಟೆಕ್ಟರಾದರೂ ಕೊಡಬೇಕೆಂದು ಸೂಚಿಸಲಾಗಿದೆ. ಮಂತ್ರಿಗಳಾದ ಶ್ರೀಮಾನ್ ವೀರೇಂದ್ರ ಪಾಟೀಲರು ಈ ತಿದ್ದುಪಡಿಯನ್ನು ಓಪನ್ ಮೈಂಡ್‌ನಿಂದ ಪರಿಶೀಲಿಸಿ ಇದರ ರೀಸನೆಬಲ್ ಆಟಿಟ್ಯೂಡ್ ಗಮನಿಸಬೇಕು. ಶ್ರೀಮಾನ್ ರಾಮರಾಯರ ರಾಯರ ತಿದ್ದುಪಡಿಯೊಂದು ಈ ಸಂಬಂಧದಲ್ಲಿದೆ. ಅವರು ಮಾತಾನಾಡದ ಮೇಲೆ ಆ ವಿಚಾರದಲ್ಲಿ ಮಾತಾನಾಡುತ್ತೇನೆ. ಈ ಕ್ಲಾಜ್ ಪ್ರಕಾರ ಕೊಡುವ ಅಧಿಕಾರ ದುರುಪಯೋಗವಾಗಬಾರದೆಂಬುದೇ ಮುಖ್ಯ ಉದ್ದೇಶ. ಆ ದೃಷ್ಟಿಯಿಂದ ಈ ಕಲಮುವಿನ ಅಧಿಕಾರವನ್ನು ಕಾನ್‌ಸ್ಟೇಬಲ್‌ಗೆ ವಹಿಸಬಾರದು ಅಧಿಕಾರಗಳಾಗಿವವರಿಗೇ ವಹಿಸಬೇಕು ಎಂದು ವಿನಂತಿಮಾಡಿಕೊಂಡು ಸಭೆ ನನ್ನ ತಿದ್ದುಪಡಿಗೆ ಒಪ್ಪಿಗೆ ನೀಡಬೇಕೆಂದು ಪ್ರಾರ್ಥನೆ ಮಾಡುತ್ತೇನೆ.

– * –

# XI. ಆಕಳು ಸಂಬಂಧ ವಿಚಾರಗಳ ಕುರಿತಂತೆ ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು

## 1. ಆಕಳು ತಳಿಯನ್ನು ಅಭಿವೃದ್ಧಿಗೊಳಿಸುವ ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ) : ಸ್ವಾಮಿ, ಮಾನ್ಯ ಮಿತ್ರರಾದ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಈ ಸಭೆಯಲ್ಲಿ ಮಂಡಿಸಿರತಕ್ಕ ನಿರ್ಣಯಕ್ಕೆ ನನ್ನ ಪೂರ್ಣವಾದ ಬೆಂಬಲವನ್ನು ಕೊಡುವುದಕ್ಕೆ ನಾನು ನಿಂತಿದ್ದೇನೆ. ಶ್ರೀಮಾನ್ ರಾಮಸ್ವಾಮಯ್ಯಂಗಾರ್ಯರು ರಸಿಕ ಸಾಹಿತಿಗಳು. ಗ್ರಾಮಜೀವನದ ಸವಿಯನ್ನು ಸಂಪೂರ್ಣವಾಗಿ ಅನುಭವ ಮಾಡುತ್ತಿರುವವರು. ಅವರು ಮಾಡಿದ ಉಪನ್ಯಾಸ ಮತ್ತು ಕೊಟ್ಟ ಅಂಕಿಅಂಶಗಳನ್ನು ಬಹಳ ಸಾವಧಾನದಿಂದ ಕೇಳಿ ಸಂತೋಷಪಟ್ಟಿದ್ದೇನೆ. ಆದರೆ ಶ್ರೀಮಾನ್ ರಾಮಸ್ವಾಮಯ್ಯಂಗಾರ್ಯರು ಮಂಡಿಸಿರತಕ್ಕ ಈ ನಿರ್ಣಯದ ವ್ಯಾಪ್ತಿ ಸಂಕುಚಿತವಾಗಿದೆ. ಸಾಹಿತಿಯ ಮನಸ್ಸು ಎಷ್ಟಾದರೂ ಪ್ರಪಂಚವನ್ನು ಆವರಣಮಾಡಿಕೊಳ್ಳಬೇಕಾದ್ದು. ಇದು ಕೇವಲ ಹಾಲಿನ ಪೂರೈಕೆಗೆ ಬೇಕಾಗುವಂಥ ಆಕಳುಗಳ ತಳಿಯನ್ನು ಮಾತ್ರ ಅಭಿವೃದ್ಧಿಗೊಳಿಸತಕ್ಕ ನಿರ್ಣಯವಾಗಿದೆ.

ಆಕಳಿನ ಕೆಚ್ಚಲಿನಲ್ಲಿ ಬರುವುದು ಹಾಲು, ಇನ್ನೊಂದರಲ್ಲಿ ಅಂಗಾಂಗಗಳಲ್ಲಿ ಬರತಕ್ಕದ್ದು ಬೇರೆ. ಒಂದು ಭೋಗ್ಯವಸ್ತುವಾದರೆ ಇನ್ನೊಂದು ವರ್ಜ್ಯವಾಗುತ್ತದೆ. ಆಕಳು ಎಂದು ಹೇಳುವಾಗ ಎತ್ತನ್ನು ಸೇರಿಸಿದ್ದೇನೆಂದು ಹೇಳಬಹುದು. ಆದರೆ ಪಶುಸಂಪತ್ತನ್ನೆಲ್ಲ ಸೇರಿಸಿದ್ದೇನೆಂದು ಹೇಳಬಿಟ್ಟರೆ ಬಹಳ ಅನುಚಿತವಾಗುತ್ತದೆ. ನನ್ನ ದೃಷ್ಟಿಯಲ್ಲಾದರೂ ಕೂಡ ಇಂಥ ನಿರ್ಣಯ ಅತ್ಯಂತ ಯೋಗ್ಯವಾದದ್ದಾದರೂ, ಅದರ ವ್ಯಾಪ್ತಿಯನ್ನು ಹೆಚ್ಚು ಮಾಡಬೇಕಾಗಿತ್ತು ಎಂದು ನನ್ನ ಅಭಿಪ್ರಾಯ.

ನಮ್ಮ ದೇಶ ವ್ಯವಸಾಯ ದೇಶವಾಗಿರುವುದಲ್ಲದೆ ವ್ಯವಸಾಯ ಮುಖ್ಯವಾಗಿರುವ ದೇಶದಲ್ಲಿ ಹಾಲನ್ನು ಕೊಡತಕ್ಕ ಆಕಳುಗಳ ಅಭಿವೃದ್ಧಿ ಮಾತ್ರವಲ್ಲ ಇಡೀ ಪಶುಸಂಪತ್ತಿನ ಅಭಿವೃದ್ಧಿಯನ್ನೇ ಮಾಡಬೇಕಾದುದು ಯೋಗ್ಯ. ಈ ಪಶುಸಂಪತ್ತಿನಲ್ಲಿ ಕೇವಲ ವನ್ಯಸಂಪತ್ತು ಮಾತ್ರವಲ್ಲ. ಇನ್ನೂ ಮಿಕ್ಕ ಅನೇಕ ಜೀವರಾಶಿಗಳ ಬರುತ್ತವೆ. ಎಮ್ಮೆ ಮತ್ತು ಕುರಿಗಳೂ ಬರುತ್ತವೆ. ಉಳಿದ ಅನೇಕ ವಿಧವ ಪಶುಸಂಪತ್ತು ಬರುತ್ತದೆ. ನಮ್ಮ ದೇಶದಲ್ಲಿ ಸುಮಾರು 1,85,66,000–00 ಪಶುಸಂಪತ್ತಿದೆ. ಈ ಪಶುಸಂಪತ್ತಿನಲ್ಲಿ ಕೇವಲ 89,65,000 ದನಗಳು ಮಾತ್ರವಿವೆ. ದನಗಳು ಎಂದು ಹೇಳುವಾಗ ಶ್ರೀಮಾನ್ ರಾಮಸ್ವಾಮಯ್ಯಂಗಾರ್ಯರು ಮನಸ್ಸಿನಲ್ಲಿಟ್ಟುಕೊಂಡಿರತಕ್ಕ ಆಕಳುಗಳೂ, ಎತ್ತುಗಳು ಇವೆಲ್ಲ ಸೇರುತ್ತವೆ. ಆದುದರಿಂದ ಈ ನಿರ್ಣಯದ ವ್ಯಾಪ್ತಿ 1,85,66,000 ಪಶುಸಂಪತ್ತನ್ನು ಅಭಿವೃದ್ಧಿಗೊಳಿಸತಕ್ಕ ಯೋಜನೆಗೆ ಅನ್ವಯವಾಗಲಾರದು. ಅದು ಕೇವಲ 89,65,000 ಪ್ರಾಣಗಳಿಗೆ ಮಾತ್ರ ಅನ್ವಯವಾಗುತ್ತದೆ. ಸಾಮಾನ್ಯವಾಗಿ ಯಾವ ದೇಶದಲ್ಲಿಯೂ ಅಷ್ಟೇ ಮನುಷ್ಯನ ಜೀವನಸರಸವತ್ತಾಗಿ ನಿಲ್ಲಬೇಕಾಗಿದ್ದರು ಅವನು ಆರೋಗ್ಯ ದೃಢಕಾಯವಾಗಬೇಕಾಗಿದ್ದರು ಈ ಪಶುಸಂಪತ್ತಿಯ ಮಧ್ಯದಲ್ಲಿ ಮನುಷ್ಯನು ಜೀವಿಸಿಕೊಂಡು ಬರಬೇಕು.

1. ಆಕಳು ತಳಿಯನ್ನು ಅಭಿವೃದ್ಧಿಗೊಳಿಸುವ ಕುರಿತಂತೆ 16.4.1960ರಂದು ನಡೆದ ಚರ್ಚೆಯಲ್ಲಿ

ಈ ಪ್ರಪಂಚದ ದೃಷ್ಟಿಕ್ರಮದಲ್ಲಿ ಸಾಮಾನ್ಯವಾಗಿ ಅನೇಕ ಜೀವರಾಶಿಗಳು ಬಂದ ಮೇಲೆ ಮನುಷ್ಯ ಬಂದಿದ್ದಾರೆ. ಪಶುಸೃಷ್ಟಿಯಾದ ಮೇಲೆ ಮನುಷ್ಯನ ಸೃಷ್ಟಿಯಾಯಿತು. ಮನುಷ್ಯ ಚೆನ್ನಾಗಿ, ಜೀವಂತವಾಗಿ ಉಳಿಯಬೇಕಾಗಿದ್ದರೆ, ಉತ್ಕೃಷ್ಟವಾಗಿರತಕ್ಕ ಪಶುಸಂಪತ್ತಿಯ ಹಿನ್ನೆಲೆಯಲ್ಲಿ ಬೆಳೆದುಕೊಂಡು ಬರಬೇಕಾದದ್ದು ಅಗತ್ಯ. ಆ ದೃಷ್ಟಿಯಿಂದಲೇ, ಇಪ್ಪತ್ತನೆಯ ಶತಮಾನದಲ್ಲಿ atomic ಯುಗದಲ್ಲಿ ಕೂಡ ಪಶುಸಂಪತ್ತಿಗೆ ಸಂಪೂರ್ಣವಾದ ಗಮನವನ್ನು ಲಕ್ಷ್ಯವನ್ನು ಕೊಡತಕ್ಕದ್ದು ಎಲ್ಲ ನಾಗರಿಕ ಸರ್ಕಾರಗಳ ಆದ್ಯಕರ್ತವ್ಯವಾಗಿದೆ ಎಂದು ನಾನು ತಿಳಿದುಕೊಂಡಿದ್ದೇನೆ. ಈ ನಿರ್ಣಯ ಕೇವಲ ದನಸಂಪತ್ತನ್ನು ಅದರಲ್ಲಿರಯೂ ಕೂಡ ಹಾಲು ಕೊಡತಕ್ಕ ಆಕಳುಗಳ ಸಂಪತ್ತನ್ನು ಅಭಿವೃದ್ಧಿ ಮಾಡುವುದಕ್ಕೆ ಮಾತ್ರ ಅನ್ವಯವಾಗುವುದರಿಂದ ಅದು ಸಂಕುಚಿತವಾಗಿದೆ. ಅಷ್ಟು ಉಪಕಾರಿಯಾಗಿಲ್ಲ. ಆದುದರಿಂದ ನಿರ್ಣಯದ ಹಿಂದೆ ಇರುವ ದನಿಯನ್ನು ತಿಳಿದುಕೊಂಡು ಮಾನ್ಯ ಮಂತ್ರಿಗಳು ಇಡಿಯ ಪಶುಸಂಪತ್ತನ್ನು ಅಭಿವೃದ್ಧಿಗೊಳಿಸತಕ್ಕ ಪೂರ್ಣಯೋಜನೆಯನ್ನು ಹಾಕಿಕೊಳ್ಳಬೇಕೆಂದು ಮನವರಿಕೆ ಮಾಡಿಕೊಳ್ಳುತ್ತೇನೆ.

89ಲಕ್ಷ ಪಶುಸಂಪತ್ತಿನಲ್ಲಿ ಏಳು ಲಕ್ಷಕ್ಕೆ ಹೆಚ್ಚಾಗಿರತಕ್ಕ ಪಶುಸಂತತಿಯು ಬೆಂಗಳೂರು, ತುಮಕೂರು, ಗುಲ್ಬರ್ಗ ಮತ್ತು ಮೈಸೂರು ಈ ನಾಲ್ಕು ಜಿಲ್ಲೆಗಳಲ್ಲಿವೆ ಐದು ಲಕ್ಷಸಂಪತ್ತಿಗಿಂತ ಹೆಚ್ಚಾಗಿರುವ ಜಿಲ್ಲೆಗಳು ಹೊಸ ಮೈಸೂರು ರಾಜ್ಯದಲ್ಲಿ ಆರು ಇವೆ. ಅವು ಕೋಲಾರ ಶಿವಮೊಗ್ಗ, ಹಾಸನ, ಬಿಜಾಪುರ ಕಾರವಾರ ಮತ್ತು ಧಾರವಾಡ ಬಹಳ ಕನಿಷ್ಟ ಪ್ರಮಾಣದಲ್ಲಿ ನಮ್ಮಲ್ಲಿ ಪಶುಸಂಪತ್ತಿರುವುದು ಕೊಡಗು ಜಿಲ್ಲೆಯಲ್ಲಿ ಮಾತ್ರ. ಇಲ್ಲಿ 170000 ಪಶುಸಂಪತ್ತು ಮಾತ್ರವಿದೆ. ಈ ಎಲ್ಲ ಪಶುಸಂಪತ್ತನ್ನೂ ಅಭಿವೃದ್ಧಿ ಮಾಡುವುದಕ್ಕೆ ಅದರ ತಳಿಯನ್ನು ಉತ್ತಮಗೊಳಿಸುವುದಕ್ಕೆ ಒಂದು ಸಂಪೂರ್ಣವಾಗಿರತಕ್ಕ ಯೋಜನೆಯನ್ನು ಹಾಕಿಕೊಳ್ಳಬೇಕೆನ್ನುವುದೇ ಶ್ರೀಮಾನ್ ಗೋರೂರು ರಾಮಸಾಮಯ್ಯಂಗಾರ‍್ಯರು ಸಭೆಯ ಮುಂದೆ ಸೂಚಿಸಿರತಕ್ಕ ನಿರ್ಣಯದ ಉದ್ದೇಶವೆಂದು ನಾನು ತಿಳಿದುಕೊಂಡಿದ್ದೇನೆ.

ಸಾಮಾನ್ಯವಾಗಿ ಈ ಅಭಿವೃದ್ಧಿ ಕೆಲಸವಾಗಬೇಕಾಗಿದ್ದರೆ, ತಳಿಯನ್ನು ಉತ್ತಮಪಡಿಸಬೇಕಾಗಿದ್ದರೆ ಯೋಗ್ಯವಾದ ಎತ್ತುಗಳನ್ನು ಇತರ ಪ್ರದೇಶಗಳಿಂದ ತರಿಸಿ ತಳಿಯನ್ನು ಸಭಿವೃದ್ಧಿ ಮಾಡಿಕೊಳ್ಳುವುದು ಸಂಪ್ರದಾಯ. ಇತ್ತೀಚಿನ ದಿವಸದವರೆಗೂ ಕೆಲವು ಜಾತಿಯ ಪಶುಗಳ ಸಂಪತ್ತನ್ನು ಬೆಳೆಸಿಕೊಂಡು ಬರಲಾಗುತ್ತಿತ್ತು. ಅವುಗಳಲ್ಲಿ ಅಮೃತ ಹಲ್ಲು ಜಾರಿಯುಗಳು, ಹಳ್ಳಿಕಾರ ಜಾತಿಯವು, ಹಲ್ಲೂರು ಜಾತಿಯವು ಇಂತಹ ಯಾವುದಾದರೂ ಉತ್ತಮವಾದ ರಾಸುಗಳನ್ನು ಬೆಳೆಸಿಕೊಂಡು ಬರತಕ್ಕ ಸಂಪ್ರದಾಯ ಇದ್ದದ್ದು ಕಂಡುಬಂದಿದೆ. ಇತ್ತೀಚಿನ ವರ್ಷಗಳಲ್ಲಿ ಕಡಿಮೆಯಾಗಿ ಬಂದೂ ಕ್ರಾಸ್ ಬ್ರೀಡಿಂಗ್ ಹೆಚ್ಚಾಗುತ್ತಿದೆ. ನಾವು ಮನಸ್ಸಿನಲ್ಲಿಟ್ಟುಕೊಳ್ಳಬಹುದು. ಹಾಲುಗಳನ್ನು ಕೊಡುವ ಆಕಳು ಮಾತ್ರವಲ್ಲ ಹೆಚ್ಚು ಯೋಗ್ಯವಾದ ಬೇಸಾಯಕ್ಕೆ ಬೇಕಾದ ಕರುಗಳು ಅವಶ್ಯಕವಾಗಿವೆ. ತೋಟಗಳಲ್ಲಿ, ಹೊಲಗಳಲ್ಲಿ, ಗದ್ದೆಗಳಲ್ಲಿ, ಯೋಗ್ಯವಾಗಿ ಬೇಸಾಯ ಮಾಡುವುದಕ್ಕೆ ಎತ್ತುಗಳಾಗಿ ಹೂಡಿ ಕೆಲಸ ಮಾಡಬೇಕಾದ ಕರುಗಳು ಬೇಕಾಗಿದೆ ಎನ್ನುವುದನ್ನು ಇಲ್ಲಿ ನಾವು ಮರೆಯಬಾರದು. ಹಾಲುಗಳನ್ನು

ಕೊಡುವ ಹಸುಗಳನ್ನು ಅಭಿವೃದ್ಧಿ ಮಾಡಬೇಕು. ಉತ್ತಮವಾದ ಹಸುಗಳ ತಳಿಯನ್ನು ಅಭಿವೃದ್ಧಿ ಮಾಡಬೇಕಾಗಿದ್ದರೆ ಸಾಮಾನ್ಯವಾಗಿ ಎಂಟು ಸೂತ್ರಗಳನ್ನು ಅಧ್ಯಯನ ಮಾಡಬೇಕು ಎಂದು ಪಶುಪಾಲನಾ ವೃತ್ತಿಯಲ್ಲಿ ಪಶುಪಾಲನಾ ಸಂಪತ್ತನ್ನು ವಿಮರ್ಶಿಸಿದ ಎಲ್ಲ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅದರಲ್ಲೂ ಡೆನ್‌ಮಾರ್ಕಿನಲ್ಲಿ, ಅಮೇರಿಕದಲ್ಲಿ ಹೇಳುತ್ತಾರೆ. ಪ್ರಸೂತಿ ಕಾಲದಲ್ಲಿ ಅವನ್ನು ಹೊರಕ್ಕೆ ತೆಗೆದು ಅದನ್ನು ಬೆಳೆಸಿಕೊಂಡು ಹಾಲು ಕುಡಿಯುವ ಪ್ರಮಾಣದಲ್ಲಿ ಅವುಗಳಿಗೆ ತೊಂದರೆಯಾಗದಂತೆ ಯಾವ ಮಟ್ಟದಲ್ಲಿ ಬೆಳೆಸಬೇಕು ಎಂದು ಸ್ಟಾಟಿಟಿಕ್ಸ್‌ನಿಂದ ಇದನ್ನು ಮಾಡಿದ್ದಾರೆ. ಹಾಲು ಕರೆಯುವ ವಿಧಾನ ಒಂದು ಎಕ್ಸಪೆರಿಮೆಂಟ್ ಅನುಸರಿಸಬೇಕು. ಅದನ್ನು ಮಾಡಿಕೊಂಡಿದ್ದಾರೆ. ಸೂರ್ಯ ಹುಟ್ಟ ಸಂಜೆ ಮುಳುಗುವುದಾಗಿ 8–10 ಗಂಟೆಯೊಳಗೆ 35 ಪೌಂಡು ಹಾಲನ್ನು ಹೆಚ್ಚಾಗಿ ಕರೆಯಬಹುದು ಈ ದೇಶದೊಳಗೆ ಎರಡು ಸಾರಿ ಕರೆಯುವುದಕ್ಕೆ ಬದಲಾಗಿ ಮೂರು ಸಾರಿ ಕರೆಯುವಂತಹ ಆಕಳುಗಳನ್ನು ಬೆಳೆಸಿಕೊಂಡು ಬರಬಹುದು ಎಂಧು ಅಭಿವೃದ್ಧಿ ಮಾಡುತ್ತಾ ಬಂದಿದ್ದಾರೆ. ತಳಿಗಳನ್ನು ಅಭಿವೃದ್ಧಿ ಮಾಡುವಾಗ ಪರಿವರ್ತನೆಗೆ ಮುಖ್ಯವಾಗಿರತಕ್ಕ ಕೆಲಸಗಳನ್ನು ಅವರು ಪ್ರಸ್ತಾಪ ಮಾಡುವುದಾದರೆ, ಡೆನ್ಮಾರ್ಕ್ ಮತ್ತು ಅಮೆರಿಕ ಎರಡು ದೇಶಗಳಲ್ಲಿ ನಡೆದಿರತಕ್ಕ ಪ್ರಯೋಗಗಳನ್ನು ನಾನು ಮಾನ್ಯ ಸಭೆಯಲ್ಲಿ ಲಿಂಕ್ ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದೇನೆ. ಅವರು ಹೇಳುತ್ತಾರೆ ಶಾಸ್ತ್ರೀಯವಾದ ರೀತಿಯಲ್ಲಿ ಎತ್ತುಕೊಂಡು ಬೆಳೆಸಿಕೊಂಡು ಬರಬೇಕು. ಕೇವಲ ಅದರ ಬೆಳವಣಿಗೆ ನೋಡಿಕೊಂಡು ಯಾವುದೋ ಒಂದು ಭಾವನೆ ಮಾಡಿಕೊಂಡು ಕ್ರಾಸ್ ಮಾಡುವುದರಿಂದ ಇದರ ತಳಿ ಅಭಿವೃದ್ಧಿಯಾಗುತ್ತದೆ ಎಂದು ಹೇಳಿದರೆ ಅದು ಮೆಚ್ಚತಕ್ಕದ್ದಲ್ಲ. ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟನವರು 1946ರಲ್ಲಿ ಪ್ರಯೋಗಗಳನ್ನು ಮಾಡಿ ಒಂದೇ ಒಂದು ಜಾತಿಯ ಹೋರಿಯನ್ನು ಅಭಿವೃದ್ಧಿ ಮಾಡಿ ಎರಡೆರಡು ಹೋರಿ ಕರುಗಳಾಗುವಂತೆ ಮಾಡಿ, ಅಲ್ಲಿನ ಕರುಗಳ ರೇತಸ್ಸೇನಿದೆ, ಅದು ಒಂದು ಕರುವಿಗೆ ಹಿಂದೆ ಇದ್ದದ್ದು ಅದರ ಮೂರರಷ್ಟು ಹೆಚ್ಚಾಗುವಂತಹ ಕರುಗಳನ್ನು ಹೊರಗಡೆ ದೇಶದಿಂದ ತರಿಸಿ, ಅಗ್ರಿಕಲ್ಚರಲ್ ಡಿಪಾರ್ಟ್‌ಮೆಂಟಿನವರು ಆಕಳುಗಳ ತಳಿ ಅಭಿವೃದ್ಧಿಯಾಗುತ್ತದೆ – ಎಂದು ಅದನ್ನು ಶಾಸ್ತ್ರೀಯವಾಗಿ ಮಾಡಿ ತೋರಿಸಿದ್ದಾರೆ. ನಮ್ಮಲ್ಲಿಯೂ ಆ ಸಂಪ್ರದಾಯವನ್ನು ಪಾಲಿಸಲು ಮುಂದುವರಿದು ಈ ರೀತಿಯ ಪ್ರಯೋಗಗಳನ್ನು ನಡೆಸಬಹುದೆಂದು ಮಾನ್ಯ ಮಂತ್ರಿಗಳಲ್ಲಿ ವಿನಂತಿ ಮಾಡಿಕೊಳ್ಳುತ್ತೇನೆ. ಈ ಪ್ರಯೋಗಗಳನ್ನು ನಡೆಸಿದಾಗ ಹಾಲು ಹೆಚ್ಚಿಗೆ ಮಾಡತಕ್ಕ ಪ್ರಯೋಗ ಯಾವ ರೀತಿ ನಡೆಯಿತು, ಎಂದರೆ ಅಲ್ಲಿ High producing cows, Low producing cows ಎಂದು ಎರಡು ವಿಧವಾದ ಕರುಗಳ ಹಿಂಡುಗಳಿವೆ. ಒಂದು ತರದ ಹೋರಿ ಎಲ್ಲ ಆಕಳುಗಳನ್ನೂ cover ಮಾಡುವುದಿಲ್ಲ. "ಎ" ಮತ್ತು "ಬಿ" ಎಂದು ಎರಡು ವಿಧವಾದ ಹೋರಿಗಳಿವೆ ಎಂದು ಇಟ್ಟುಕೊಂಡರೆ, ಒಂದು ತರದ ಹೋರಿಯು 42 ಆಕಳುಗಳನ್ನು ಕವರ್ ಮಾಡಿದಾಗ ಅಂತಹ ಆಕಳುಗಳಿಂದ ಸುಮಾರು 223 ಪೌಂಡುಗಳಷ್ಟು ಬೆಣ್ಣೆಯ ಪ್ರಾಡಕ್ಟ್ ಬಂತು. ಇದು ಎಷ್ಟು ಬೆಲೆಬಾಳುತ್ತದೆ ಎಂದರೆ ಸುಮಾರು 77 ಡಾಲರ್ಸ್‌ಗಳಾಷ್ಟಾಯಿತು. ಇದಕ್ಕೆ ವೆಚ್ಚ ಮಾಡಿದ್ದು ಎಷ್ಟು ಎಂದರೆ ಸುಮಾರು 12 ಡಾಲರ್‌ಗಳಷ್ಟು ಆಗಿದೆ ಎಂದು ಹೇಳಿದ್ದಾರೆ.

ಇನ್ನೊಂದು ಹಿಂಡಿನಲ್ಲಿರುವ ಆಕಳುಗಳ ಮೇಲೆ ಪ್ರಯೋಗ ನಡೆಸಿದ ಹೋರಿಯಿಂದ 17 ಆಕಳುಗಳನ್ನು ಕವರ್ ಮಾಡಿದ್ದಾರೆ. ಇದರ ಬಟರ್ ಕಾಂಟೆಂಟ್ ಏನಿತ್ತು ಎಂದರೆ 357 ಪೌಂಡುಗಳಷ್ಟಿತ್ತು ಎಂದು ಹೇಳಿದ್ದಾರೆ. ಈ ಎರಡು ಹಿಂಡುಗಳಲ್ಲಿ 42 ಕರುಗಳಿರತಕ್ಕ ಒಂದು ಹಿಂಡಿನ ಮೇಲೆ ಪ್ರಯೋಗ ನಡೆಸಿದಾಗ ಬಟರ್ ಕಾಂಟೆಂಟ್ 222 ಪೌಂಡುಗಳಷ್ಟಾಯಿತು. ಇನ್ನೊಂದು 17 ಆಕಳುಗಳ ಮೇಲೆ ಪ್ರಯೋಗ ನಡೆಸಿದ ಒಂದೇ ತರದ ಹೋರಿಯಿಂದ ಬಟರ್ ಕಾಂಟೆಂಟ್ 357 ಪೌಂಡುಗಳಷ್ಟು ಆಯಿತು. ಹಿಂದೆ ಚಿಕ್ಕದೇವರಾಜಒಡೆಯರಿದ್ದ ಕಾಲದಲ್ಲಿ ಈ ರೀತಿಯಾದ ಅನೇಕ ನಿದರ್ಶನಗಳಿದ್ದು ದೇಶದ ಕಲ್ಯಾಣಕ್ಕೋಸ್ಕರ ಈ ರೀತಿಯ ಆಕಳುಗಳನ್ನು ಇಟ್ಟು ಕೊಂಡಿದ್ದರು ಎನ್ನತಕ್ಕದ್ದನ್ನು ಶ್ರೀಮಾನ್ ಗೊರೂರು ರಾಮಸ್ವಾಮಯ್ಯಂಗಾರ್ ಅವರು ಓದಿದ್ದಾರೆ ಎಂದು ನಾನು ಭಾವಿಸುತ್ತೇನೆ. ಇವರಲ್ಲಿ 1464ರಷ್ಟು ಡಾಲರುಗಳ ವೆಚ್ಚವಾಯಿತು. ಇವರಲ್ಲಿ 70 ಡಾಲರ್ಸ್‌ಗಳಷ್ಟು ನಫೆ ಬಂದಿತು. 17 ಆಕಳುಗಳನ್ನು ಅಭಿವೃದ್ಧಿ ಮಾಡುವಾಗ 70 ಡಾಲರುಗಳಷ್ಟು ಪ್ರಮಾಣದಲ್ಲಿ ಲಾಭ ಬಂದಿತೆಂದು ಹೇಳುತ್ತಾರೆ. ಇದನ್ನು ಶಾಸ್ತ್ರೀಯವಾಗಿ ಪ್ರಯೋಗಮಾಡಿ ಸ್ಟಾಟಿಸ್ಟಿಕ್ಸ್ ಮೇಂಟೇನ್ ಮಾಡಿ ಹಾಕಿರತಕ್ಕದ್ದು. ಈ ರೀತಿಯಾಗಿ "ರಿಟರ್ನ್" ಇಷ್ಟು ಜಾಸ್ತಿ ಬರಬೇಕಾಗಿದ್ದರೆ ಕಾರಣವೇನು ಎಂದರೆ, ಸಾಮಾನ್ಯವಾಗಿ ಒಂದೇ ತರದ ಹೋರಿಯನ್ನು ಎಲ್ಲ ಕರುಗಳ ಮೇಲೆ ಪ್ರಯೋಗ ಮಾಡಿದುದರ ಮತ್ತು ಆ ಕರುಗಳಲ್ಲಿರುವ ವಿಶಿಷ್ಟ ಗುಣಗಳೇ ಇದಕ್ಕೆ ಕಾರಣ. ಆದುದರಿಂದ ಶ್ರೀಮಾನ್ ರಾಮಸ್ವಾಮಯ್ಯಂಗಾರ್ರವರಾಗಲೀ, ಇನ್ನು ಯಾರಾದರೂ ಇತರರು ಒಂದು ಹೋರಿಯನ್ನು ಪ್ರಯೋಗ ಮಾಡಿಸಿದ ಪಕ್ಷದಲ್ಲಿ ಯೋಗ್ಯವಾಗಿರತಕ್ಕ ಸಂತತಿಯ ಡೆವಲಪ್‌ಮೆಂಟ್ ಬರುತ್ತದೆ ಎಂದು ತಿಳಿದುಕೊಂಡಿದ್ದರೆ ಅದು ಭ್ರಮೆಯಾದೀತು; ಇದನ್ನು ಡೆನ್‌ಮಾರ್ಕಿನಲ್ಲಿ ಪ್ರಯೋಗ ಮಾಡಿ ತೋರಿಸಿದ್ದಾರೆ.

ಪಶುಸಂಪತ್ತಿನ ವಿಷಯದ ಮೇಲೆ ಮಾತನಾಡುವಾಗ ಕನ್ನಡ ಭಾಷೆಯಲ್ಲಿ ಮಾತನಾಡುವುದೇ ಶ್ರೇಷ್ಠವಾದುದು. ನ್ಯಾಯವಾದುದು. ಇನ್ನು ಈ ಬಗ್ಗೆ ಮಾಡಿರತಕ್ಕ ಪ್ರಯೋಗಗಳು ಪಾಶ್ಚಾತ್ಯ ರಾಷ್ಟ್ರದಲ್ಲಿ ಯಾವ ರೀತಿ ನಡೆಯುತ್ತಿದೆ ಎಂಬುದಕ್ಕೆ ನಾವು ಪ್ರತಿ ಕ್ಷಣದಲ್ಲಿಯೂ ಗಮನಕೊಡಬೇಕಾದುದು ಅತ್ಯಗತ್ಯ. ಆದರೆ ಹಾಲು ಹೆಚ್ಚಾಗತಕ್ಕ ಒಂದು ತಳಿಯನ್ನು ಮಾತ್ರ ಅಭಿವೃದ್ಧಿಗೊಳಿಸುವುದೇ ಅಲ್ಲ, ಹಾಲಿನಲ್ಲಿರತಕ್ಕ ಕಂಟೆಂಟ್ಸ್‌ನ್ನು ಹೆಚ್ಚು ಮಾಡುವುದು ಅತ್ಯಗತ್ಯ. ಅಲ್ಲಿ ಅಂಥಾದ್ದನ್ನು ಹಾಲಿಸ್ಟೀನ್ ಬ್ರೀಡ್ ಎಂದು ಕರೆಯುತ್ತಾರೆ. ಅದನ್ನು ಯೋಚಿಸಿನೋಡಿ ಎಷ್ಟರಮಟ್ಟಿಗೆ ಪ್ರಯೋಗ ನಮ್ಮ ರಾಜ್ಯದಲ್ಲಿ ನಡೆಯುತ್ತದೆ, ಅಮೇರಿಕಾ ದೇಶದಲ್ಲಿ ಯಾವ ರೀತಿ ನಡೆಯುತ್ತಿದೆ ಅಂದರೆ ಮೊದಲನೆಯ ತಳಿ ಕೊಡತಕ್ಕ ಹಾಲಿನ ಪ್ರಮಾಣ ಹೆಚ್ಚಿರುತ್ತದೆ. ಅವರ ಮಕ್ಕಳು ಕೊಡತಕ್ಕ ಹಾಲಿನ ಪ್ರಮಾಣ ಕಡಿಮೆಯಾಗುತ್ತದೆ. ಆದುದರಿಂದ ಒಂದು ಶಾಸ್ತ್ರೀಯವಾಗಿ ನಡೆಯತಕ್ಕ ಯೋಜನೆಯನ್ನು ಹಾಕಿಕೊಳ್ಳಬೇಕು. ಯಾವುದೋ ಒಂದು ಶುದ್ಧವಾದ ಹೋರಿಯನ್ನು ಹೊರದೇಶದಿಂದ ತಂದು ಅದರ ಅಭಿವೃದ್ಧಿಮಾಡಿದ ಪಕ್ಷದಲ್ಲಿ ಉತ್ತಮ ತಳಿ ಆಗಿಬಿಡುತ್ತದೆ ಎಂದು ಭಾವನೆ ಮಾಡಬಾರದು. ಅಂದು ಒಂದು ಭ್ರಮೆ. ಏಕೆಂದರೆ ಆ ಬಗ್ಗೆ ಎಷ್ಟೋ ಸ್ಪೆಷಲ್ ಕಾರ್‌ಕ್ಟರಿಸ್ಟಿಕ್ ಅಂದರೆ ವಿಶಿಷ್ಟ ಗುಣಗಳು ಏನಿವೆ, ಅವು ಒಂದಕ್ಕೊಂದು ಬೇರೆಯಾಗುವಂತಾಗುತ್ತದೆ. ಹೋರಿಗಳನ್ನು ಹಾರಿಸುವಾಗ

ಅವು ಒಂದಕ್ಕೊಂದು ಸೇರು ಸಮಯದಲ್ಲಿ ಸ್ಪರ್ಮ್ಓವಮ–ಶುಕ್ಲ–ಶೋಣಿತಗಳ ಬಿಂದು ಒಂದಕ್ಕೊಂದು ಸೇರಿದಾಗ ಸಾಮಾನ್ಯವಾಗಿ ಗರ್ಭಧರಿಸುತ್ತದೆ. ಆ ರೀತಿ ಗರ್ಭಧರಿಸಿದ ಬಿಂದುವಿನಿಂದ ಹೋರಿಯು ವಿಶಿಷ್ಟ ಗುಣಗಳು ಕೆಲವು ವೇಳೆ ಬಾರದೇ ಇರಬಹುದು. ಇಂತಹ ಪ್ರಯೋಗಗಳನ್ನು ಅಲ್ಲಿಯವರು ಬಹಳ ಯಶಸ್ವಿಯಾಗಿ ಮಾಡಿದ್ದಾರೆ. ಅಲ್ಲಿನ ಅನೇಕ ಹೋರಿಗಳು ಬಹಳ ಯೋಗ್ಯವಾದವುಗಳಿವೆ. ಅಂಥಾದ್ದರಲ್ಲಿಯೂ ಹಾಲುಕೊಡತಕ್ಕ ತಳಿಗಳನ್ನು ಬೆಳೆಸುವುದಕ್ಕೆ ಈಗ ಸಾಧ್ಯವಿಲ್ಲ. ಈ ಏಕ ಬಿಂದುವಿನಿಂದ ಗರ್ಭಧಾರಣೆ ಮಾಡುವಾಗ ಈ ಬಿಂದುವಿನಲ್ಲಿ ವಿಶಿಷ್ಟ ಗುಣಗಳು ಇದರಲ್ಲಿ ಇದ್ದಿರಲಿಲ್ಲ. ಅಂದರೆ ಉತ್ತಮ ತಳಿಗಳನ್ನು ಬೆಳೆಸಲಿಕ್ಕೆ ಹೋರಿಗಳನ್ನು ಹೊರಗಡೆಯಿಂದ ತರಿಸುವುದು ಮಾತ್ರವೇ ಇಲ್ಲ. ಇರತಕ್ಕ ಆಕಳುಗಳನ್ನು ಉತ್ತಮಗೊಳಿಸುವುದು ಬ್ರೀಡ್ ಕ್ರಾಸ್‌ಗಳನ್ನು ಇಂಪ್ರೂವ್ ಮಾಡುವುದು ಅತ್ಯಗತ್ಯ. ಇದರಲ್ಲಿ ಎರಡು ವಿಧಗಳಿವೆ. ಒಂದು ಕೃತಕ ವೀರ್ಯದಿಂದ ಗರ್ಭಧಾರಣೆ ಮಾಡುವುದು, ಇನ್ನೊಂದು ಪ್ರಾಕೃತವಾಗಿ ನ್ಯಾಚುರಲ್ ಪ್ರೋಸೆಸ್‌ನ್ನು ಉಪಯೋಗಿಸಿ ಗರ್ಭಧಾರಣೆ ಮಾಡುವುದು. ವೀರ್ಯದಿಂದ ಅನೇಕ ಗುಣಗಳಿವೆ. ಯೋಗ್ಯವಾದ ಒಂದೊಂದು ಹೋರಿಯು ವೀರ್ಯವನ್ನು ಅನೇಕ ಕರುಗಳನ್ನು ಹಾಕುವುದಕ್ಕಾಗಿ ಉಪಯೋಗಿಸಲು ಸಾಧ್ಯ. ಅವರ ಜೊತೆಗೆ ವಯಃ ಪ್ರಮಾಣದಲ್ಲಿರತಕ್ಕಆಕಳ ಮೇಲೆ ಅಂಥಾದ್ದನ್ನು ಕವರ್ ಮಾಡಿಸುವುದಕ್ಕೆ ಬಹಳು ಸಾವಿರಾರು ಆಕಳುಗಳ ಮೇಲೆ ಕವರ್‌ಮಾಡಿ ಉಪಯೋಗಿಸುವುದರಿಂದ ಹೆಚ್ಚು ಮಟ್ಟಿಗೆ ಉಪಯೋಗವಾದೀತು. ಇಲ್ಲದಿದ್ದರೆ ತಳಿಯು ಅಭಿವೃದ್ಧಿಯಾವುದು ಕಡಿಮೆಯಾಗುತ್ತದೆ. ಆದುದರಿಂದ ಅಂತಹುಗಳ ವೀರ್ಯವನ್ನು ಉಪಯೋಗಿಸಿಕೊಂಡು ಉತ್ತಮ ತಳಿಯನ್ನು ಬೆಳೆಸಿಕೊಂಡು ಬರುವುದಕ್ಕಾಗಿ ಪಾಶ್ಚಿಮಾತ್ಯ ರಾಷ್ಟ್ರದವರು ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಒಂದೊಂದು ಸಾರಿ ಮೂರು ವರ್ಷಗಳವರೆಗೂ ಕವರ್‌ಮಾಡುವುದಿಲ್ಲ. ಮೂರು ವರ್ಷಗಳ ಮೊದಲೇ ರೇತಸ್ಸು, ಶುಕ್ಲ, ಶೋಣಿತಗಳ ಸಂಯೋಗವಾಗುವ ಪಕ್ಷದಲ್ಲಿ ಆಕಳು ಉತ್ತಮವಾದ ಕರುಗಳನ್ನು ಹಾಕುತ್ತವೆ ಎಂದು ಶ್ರೀಮಾನ ಗೋಪಾಲ ರಾಮಸ್ವಾಮಿಯ್ಯಂಗಾರ್ ಅವರು ಚೆನ್ನಾಗಿ ಎಲ್ಲರಿಗೂ ಮನವರಿಕೆಯಾಗುವ ಹಾಗೆ ಹೇಳಿದ್ದಾರೆ. ಆದರೆ ಇದರಲ್ಲಿ ಕೆಲವು ಲಿಮಿಟೇಷನ್ಸ್, ನ್ಯೂನತೆಗಳು ಮತ್ತು ಕುಂದಕಗಳಿವೆ. ಕೃತಕವೀರ್ಯದಿಂದ ಗರ್ಭಧಾರಣೆಮಾಡಿ ತಳಿಯನ್ನು ಅಭಿವೃದ್ಧಿ ಪಡಿಸಬೇಕಾದ ಆಕಳುಗಳ ಸಂಪತ್ತು ಹೆಚ್ಚು ಹೆಚ್ಚಾಗಿ ಇರಬೇಕು. ಆದರೆ ಇಂಡಿವಿಜುಯಲ್‌ಗಿಕ್ಯಾಟಲ್ ಓನರ್ ಇದನ್ನು ಪಡೆಯುವುದಕ್ಕೆ ಸಾಧ್ಯವಿಲ್ಲ. ಹೊರಗಡೆಯಿಂದ ಈ ಕೃತಕ ವೀರ್ಯವನ್ನು ತರಿಸಿಕೊಳ್ಳುವ ವಿಚಾರದ ಬಗ್ಗೆ ಏತಕ್ಕೆ ಸರಿಯಾದ ಫಲ ದೊರೆಯುವುದಿಲ್ಲ. ಇದು ಯಾವಾಗ ಸ್ವಾಭಾವಿಕವಲ್ಲವೋ ಅಂತಹ ಸ್ವಾಭಾವಿಕ ಅಲ್ಲದೇ ಇರತಕ್ಕ ಕೃತಕ ವೀರ್ಯ ಪ್ರಯೋಗದಿಂದ ಹುಟ್ಟತಕ್ಕ ಕರುಗಳು ಕಾಲಕ್ರಮದಲ್ಲಿ ಕ್ಷೀಣಿಸಬಹುದು. ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾಗ್ಯೂ ಅಗಸ್ತ್ಯರು ಹುಟ್ಟಿದರು ಎಂತಹ ಮಹರ್ಷಿಗಳ ಮಿತ್ರ ಮತ್ತು ವರುಣ ಇಬ್ಬರೂ ಸೇರಿದ್ದರಿಂದ ಅವು ಒಂದು ವೀರ್ಯಬಿಂದುವಿನಿಂದ ಅಗಸ್ತ್ಯರು ಹುಟ್ಟಿದರು. ಈ ಅಗಸ್ತ್ಯರ ಹಾಗೆ ಪ್ರತಿಯೊಂದನ್ನೂ ನಾವು ಮನಸ್ಸಿನಲ್ಲಿ ಯೋಚನೆ ಮಾಡುವುದಕ್ಕೆ ಸಾಧ್ಯವಿಲ್ಲ ಆ ರೀತಿ ಬೆಳೆಸಿಕೊಂಡು ಬರುವುದಕ್ಕೆ ಶ್ರೀಮಂತರಿಗೂ ರಾಜಾಧಿಕಾರಿಗೂ ಸಾಧ್ಯವಿಲ್ಲ ಅಷ್ಟು ಪ್ರಮಾಣದಲ್ಲಿ ಕೃತಕವೀರ್ಯದಿಂದ ಗರ್ಭದಾರಣೆ ಮಾಡುವುದಕ್ಕೆ ಈ ಸಂಪತ್ತಿಗೆ

ಅವಕಾಶ ಕೊಡಬೇಕು. ನ್ಯಾಚುರಲ್ ಪ್ರೋಸಸ್ ತೆಗೆಯಬೇಕು. ಅನಂತರ ಬ್ರೀಡ್ ಕರುಗಳನ್ನು ಡೆವಲ್‌ಪ್‌ಮೆಂಟ್ ಮಾಡಬೇಕು. ಸಾಮಾನ್ಯವಾಗಿ ಶೇಕಡ 10 ಹಸುಗಳು ನಮ್ಮಲ್ಲಿದ್ದರೆ ಈ ತರಹ ಆರ್ಟಿಫಿಷಿಯಲ್ ಇನ್‌ಸ್‌ಮಿನೇಷನ್ನಾಗಲೀ ನ್ಯಾಚುರಲ್ ಕವರಿಂದಾಗಲಿ ಆದಾಗ ಸುಮಾರು ಶೇಕಡ 75 ಕರುಗಳನ್ನು ಹಸುಗಳು ಕೊಡುತ್ತವೆಂದು ನಾನು ಹೇಳುತ್ತೇನೆ. ಈ ಬಗ್ಗೆ ಸ್ಟಾಟಿಸ್ಟಿಕ್‌ನ್ನೂ ಸಹ ಕೊಟ್ಟಿದ್ದಾರೆ. ನಮ್ಮಲ್ಲಿ 100 ಹಸುಗಳು ಇದ್ದರೆ ಅವನ್ನು ಕವರ್ ಮಾಡಿಸಿದ್ದಾಗ್ಗೆ. 100 ಹಸುಗಳೂ ಕೂಡ 100 ಆಕಳುಗಳ ಕರುಗಳನ್ನು ಕೊಡಬೇಕು. ಇಂತಹ ಪ್ರಯತ್ನದ ಕಡೆಗೆ ಸರ್ಕಾರ ಹೆಚ್ಚಿಗೆ ಗಮನ ಕೊಡಬೇಕು. ಮುಖ್ಯವಾಗಿ ಸಂಪೂರ್ಣ ಬಂಜಿ ಹಸುಗಳು ಒಂದು ವರ್ಷಕ್ಕೆ ಕರುಗಳನ್ನು ಹಾಕುವುದಕ್ಕೆ ಬದಲು ನಾಲ್ಕೈದು ವರ್ಷಗಳಿಗೊಮ್ಮೆ ಕರುಗಳನ್ನು ಹಾಕುತ್ತದೆ. ಅದಕ್ಕಾಗಿ ಅವುಗಳ ಮೇಲೆ ಸ್ಯಾಂಡೊ ಹೋರಿಗಳನ್ನು ಕವರ್ ಮಾಡಬೇಕಾಗುತ್ತದೆ. ಅಂದರೆ ಒಂದೊಂದು ವೇಳೆ ಅವುಗಳಿಂದ ವೀರ್ಯ ಉತ್ಪಾದನೆಯಾದರೂ ಅದಕ್ಕೆ ಗರ್ಭದಾರಣೆಯಾಗುವುದಿಲ್ಲ ಮತ್ತು ಆಕಳುಗಳ ಸೃಷ್ಟಿಗೆ ಸಹಾಯಕವಾಗಿರುವುದಿಲ್ಲ. ಆದುದರಿಂದ ಈ ಬುಲ್ಸ್ ಮತ್ತು ಬ್ರೀಡ್ ಕೌಸ್ ಇವುಗಳನ್ನು ತರಿಸುವುದರಲ್ಲಿ ಒಂದು ಶಾಸ್ತ್ರೀಯವಾದ ಯೋಜನೆಯನ್ನು ಹಾಕಿಕೊಳ್ಳುವುದು ಅಗತ್ಯ.

ಮಾನ್ಯ ಸಭಾಪತಿಗಳೇ, ಎಲ್ಲಕ್ಕಿಂತಲೂ ಹೆಚ್ಚಾಗಿ ಜನ ಯಾವಾಗಲೂ ಇಂತಹ ಕೆಲಸಕ್ಕೆ ಸರ್ಕಾರವನ್ನೇ ಎದುರು ನೋಡುತ್ತಿದ್ದಾರೆ. ಅದು ತಪ್ಪು ಮನೋಭಾವನೆ ಇದು ಖಂಡಿತವಾಗಿ ಪರಿಪೂರ್ಣವಾಗಿ ಫಲಪ್ರದವಾಗಿ ನಡೆಯುವುದಿಲ್ಲ. ಈ ಬಗ್ಗೆ ಸರ್ಕಾರದ ಸಹಾಯ ಹೆಚ್ಚಿಗೆ ಇರಬೇಕಾದುದೇನೋ ನಿಜ. ಆದರೆ ಪೂರ್ಣ ಆಸಕ್ತಿ. ಗೋ ಸಂಪತ್ತಿನಲ್ಲಿ ನಂಬಿಕೆ ಗ್ರಾಮಸ್ಥರಿಗೆ ವಿಶೇಷವಾಗಿರಬೇಕು. ತಳಿಯನ್ನು ಅಭಿವೃದ್ಧಿ ಪಡಿಸುವುದರಲ್ಲಿ ನಮ್ಮ ರಾಜ್ಯದ ಆರ್ಥಿಕ ಪರಿಸ್ಥಿತಿ ಇದರಿಂದ ಉತ್ತಮಗೊಳ್ಳುತ್ತದೆನ್ನುವ ಜನಗಳಿಗೆ ಇದರಲ್ಲಿ ತೀವ್ರಾಸಕ್ತಿ ಹೆಚ್ಚಿಗೆ ಬರಬೇಕು. ಅದು ಬಾರದೇ ಇದ್ದರೆ ಎಷ್ಟು ಸರ್ಕಾರ ಸಹಾಯ ಮಾಡಿದರೂ, ಎಷ್ಟು ಬುಲ್‌ಗಳನ್ನು ಹೊರ ದೇಶಗಳಿಂದ ತರಿಸಿದರೂ ಫಲಪ್ರದವಾಗುವುದಿಲ್ಲ. ಗೋವುಗಳನ್ನು ದೇವರನ್ನಾಗಿ ಭಾವಿಸಿಕೊಂಡು ಅವುಗಳನ್ನು ಬಹಳ ಮುತುವರ್ಜಿಯಿಂದ ಕಾಪಾಡಬೇಕೆಂದು ಅನೇಕರು ಹೇಳಿದ್ದಾರೆ. ಅದು ನಿಜ. ಬೆಂಗಳೂರಿನಲ್ಲಿ ಎರಡು ವರ್ಷಗಳ ಹಿಂದೆ ಕಳಾಸಿಪಾಳ್ಯದಲ್ಲಿ ಸಂಕ್ರಾಂತಿ ಹಬ್ಬದಲ್ಲಿ ಈ ಜಾನುವಾರುಗಳನ್ನು ಸಾಲು ಸಾಲಾಗಿ ಬೀದಿ ಬೀದಿಯಲ್ಲಿ ಮೆರವಣಿಗೆ ಮಾಡುತ್ತಿದ್ದರು. ಅಂತಹ ಸಮಾರಂಭ ಈಗಲೂ ಅನೇಕ ಕಡೆಗಳಲ್ಲಿ ನಡೆಯುತ್ತಿರಬಹುದು. ಆ ಸಂಭ್ರಮವನ್ನು ನೋಡುವುದೇ ಒಂದು ಆನಂದ. ನನಗೂ ಒಂದು ಸಾರಿ ಆ ಒಂದು ಸಮಾರಂಭಕ್ಕೆ ಭಾಗವಹಿಸಲು ಒಂದು ಆಹ್ವಾನ ಪತ್ರಿಕೆ ಬಂದಿತ್ತು. ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷರು ಅದರ ಪ್ರಾರಂಭೋತ್ಸವ ಮಾಡುತ್ತಾರೆಂದು ಆದರೆ ಆ ಸಂಕ್ರಾಂತಿ ಹಬ್ಬದ ದಿನ ಅಲ್ಲಿ ಆಕಳಿಗೆ ಒಂದು ಹುಲ್ಲುಕಡ್ಡಿಯನ್ನು ಹಾಕತಕ್ಕ ಕಾರ್ಯ ನಡೆಯಲಿಲ್ಲ. ಇಂತಹ ಸಮಾರಂಭ ಮಾಡುವ ಪರಿಸ್ಥಿತಿಯಲ್ಲಿ ನಾವು ಇದ್ದರೆ ನಮ್ಮ ದೇಶದ ಪಶುಸಂಪತ್ತು ಹೇಗೆ ಬೆಳೆಯುತ್ತದೆ. ಆದುದರಿಂದ ಪ್ರತಿ ವರ್ಷವೂ ಹೇಗೆ ಈ ಸಮಾರಂಭವಾಗುತ್ತದೆ? ಅದಕ್ಕಾಗಿ 200–300 ರೂಪಾಯಿಗಳ ವೆಚ್ಚವಾಗಿರಬೇಕು. ಎಷ್ಟೋ ದಿವಸಗಳಗಟ್ಟಲೆ ಹುಲ್ಲಿನ ಮುಖವನ್ನೇ ನೋಡದೇ

ಇರತಕ್ಕ ಹಸುಗಳು ನಮ್ಮ ರಾಜ್ಯದಲ್ಲಿ ಈಗಲೂ ಅನೇಕವಿದೆ. ಆ ವಿಷಯ ಶ್ರೀಮಾನ್ ಗೊರೂರ್ ರಾಮಸ್ವಾಮಯ್ಯಂಗಾರ್ ಅವರಿಗೆ ಗೊತ್ತಿಲ್ಲವೆಂದು ಕಾಣುತ್ತದೆ.

ಇಂಥ ಹಸುಗಳಿಗೆ ಕರುಗಳಿಗೆ ಕೊಂಚ ಅದರ ಮುಖ ತೋರಿಸಿದ್ದರೆ ಚೆನ್ನಾಗಿರುತ್ತಿತ್ತು. 200 ರೂಪಾಯಿಗಳನ್ನು ಇದಕ್ಕಾಗಿ ವೆಚ್ಚ ಮಾಡುತ್ತಿದ್ದೀರಿ. ನನಗೆ ಇದು ಸಂಕಟವಾಗುತ್ತದೆ. ಈ ಹೊತ್ತು ನಮ್ಮಗೋ ಸಂಪತ್ತು ಬೆಳೆಸಬೇಕು. ಗ್ರಾಸ ಭೂಯಿಷ್ಠವಾದ ರಾಜ್ಯ ಕಲ್ಪನೆ ಮಾಡಬೇಕೆಂದು ಏನು ಹೇಳುತ್ತಿದ್ದಾರೋ, ಅದರಲ್ಲಿ ಹತ್ತನೆಯ ಒಂದು ಭಾಗ ನಾವು ಕೆಲಸ ಮಾಡಿದರೆ ನಮ್ಮ ಗೋಸಂಪತ್ತು ಬೆಳೆದೀತು. ನಾವು ಈ ವಿಚಾರದಲ್ಲಿ ಎಷ್ಟೋ ಬರೆಯುತ್ತಿದ್ದೇವೆ. ಇದರಲ್ಲ ಕಾಲುಪಾಲು ಕಾರ್ಯತಃ ಪ್ರಯತ್ನ ನಡೆಸಿದರೋ ಎಷ್ಟೋ ನಮ್ಮ ಪಶುಸಂಪತ್ತು ಬೆಳೆದೀತು. ಯಾವತ್ತು ನಮ್ಮ ದೇಶದಲ್ಲಿ ಪಶುಸಂಪತ್ತು ಬೆಳೆಯುತ್ತದೆ ಆಗ್ಗೆ ಕೇವಲ ಹಾಲಿನ ಹೊಳೆಯು ನಮ್ಮ ದೇಶದಲ್ಲಿ ಹರಿಯುವುದಲ್ಲದೆ. ಆದುದರಿಂದ ತಳಿಯ ಅಭಿವೃದ್ಧಿ ಮಾಡಿ ಪಶುಸಂಪತ್ತನ್ನು ಉತ್ತಮಪಡಿಸುವ ಕಾರ್ಯವನ್ನು ಸರ್ಕಾರವೂ ಮಾಡಬೇಕು. ಅದಕ್ಕಿಂತ ಹೆಚ್ಚಾಗಿ ಜನರು ಮನಸ್ಸಿಟ್ಟು ಪ್ರಯತ್ನ ನಡೆಸಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ.

## 2. 1963ರ ಮೈಸೂರು ಕ್ಯಾಟಲ್ ಲೈಸ್‌ನ್ಸಿಂಗ್ ಬಿಲ್, ಕುರಿತಂತೆ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ, ಸ್ವಾಮಿ ಈ ಮೈಸೂರು ಕ್ಯಾಟಲ್ ಲೈಸ್‌ನ್ಸಿಂಗ್ ಬಿಲ್, 1963ನೇ ಇಸವೀದು ಏನಿದೆ, ಅದು ತತ್ವತಃ ಎಷ್ಟೋ ಸಾಧುವಾದರೂ ಇದು ಅಕಾಲಿಕವಾಗಿದೆಯೆಂದು ಸ್ಪಷ್ಟವಾಗಿ ಹೇಳಬಹುದು. ಈ ಹೊತ್ತು ಬೆಂಗಳೂರು, ಮೈಸೂರು ಮೊದಲಾದ ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಪೋಲಿದನಗಳು, ಪೋಲಿ ಜನರ ಜೊತೆಗೆ ರಸ್ತೆಗಳಲ್ಲಿ ಓಡಾಡಿ ಸಂಚಾರಕ್ಕೆ ಅಡ್ಡಿಪಡಿಸುತ್ತಿರುವುದರಿಂದ, ಇದನ್ನು ಕೊಂಚಎದುರಿಸಬೇಕಾಗಿದೆ. ಒಂದು ಕಡೆ ಪಶುಗಳಿಗೆ ವಸತಿ ನಿರ್ಮಾಣ ಮಾಡತಕ್ಕಂಥ ಕಾನೂನನ್ನು ಮಾಡಿಕೊಂಡು ಆ ಒಂದು ಸೌಕರ್ಯವನ್ನು ಸರ್ಕಾರಕ್ಕೆ ಒದಗಿಸುವುದಕ್ಕಾಗಲಿ ಅಥವಾ ಏರ್ಪಾಡು ಮಾಡುವುದಕ್ಕಾಗಲಿ ಯೋಗ್ಯತೆ, ಅವಕಾಶವಿದೆಯೇ ಎಂಬುದನ್ನು ಪರೀಕ್ಷೆ ಮಾಡಬೇಕಾಗಿದೆ. ಬೆಂಗಳೂರಿನಲ್ಲಿ ಮೂರು ಲಕ್ಷ ಜನಗಳು ವಾಸ ಮಾಡುವುದಕ್ಕೋಸ್ಕರ ಸಿವಿಲ್ ಅಮಿನಿಟೀಸ್ ಇದ್ದದ್ದು, ರಸ್ತೆ ಸೌಕರ್ಯ, ದೀಪದ ಸೌಕರ್ಯ, ನೀರಿನ ಸೌಕರ್ಯ, ವಾಹನ ಸೌಕರ್ಯ ಇದ್ದದ್ದು, ಇವತ್ತು 15 ಲಕ್ಷ ಪ್ರಜಾಸಂಖ್ಯೆ ಇರತಕ್ಕಂಥ ಪರಿಸ್ಥಿತಿಯಲ್ಲಿ ಬಹಳ ತೊಂದರೆ ಉಂಟಾಗುತ್ತಿದೆ. ಈ ನಗರದಲ್ಲಿ ಮನುಷ್ಯನಿಗೆ ವಾಸ ಮಾಡುವುದಕ್ಕೇ ಅವಕಾಶವಿಲ್ಲದೆ ಬೀದಿಯಲ್ಲಿ, ರಸ್ತೆಗಳಲ್ಲಿ, ಮಾರ್ಕೆಟ್ ಅಂಗಡಿಗಳ ಮುಂದೆ ಮಲಗುತ್ತಾ ಇರುವಾಗ, ರಸ್ತೆಗಳಲ್ಲಿ ಪಶುಗಳಂತೆ ವಾಸ ಮಾಡಿಕೊಂಡಿರುವ ಕಾಲದಲ್ಲಿ, ದನಗಳನ್ನು ಇಡುವುದಕ್ಕೆ ಅವುಗಳಿಗೆ ವಸತಿ ನಿರ್ಮಾಣ ಮಾಡುವುದಕ್ಕೆ ಲೈಸ್‌ನ್ಸು ಪಡೆಯಬೇಕು. ಲೈಸೆನ್ಸ್‌ನ್ನು ತೆಗೆದುಕೊಳ್ಳದೆ ಹೋದ ಪಕ್ಷದಲ್ಲಿ ಶಿಕ್ಷೆ ವಿಧಿಸಲಾಗುತ್ತದೆ. ಈ ಸೌಕರ್ಯ ಒಂದನ್ನು ಕಲ್ಪನೆ ಮಾಡದೆ, ಕಲ್ಪನೆ ಮಾಡುವುದಕ್ಕೆ ಅವಕಾಶವಿಲ್ಲದೆ ಇರುವ ಪರಿಸ್ಥಿತಿಯಲ್ಲಿ ಇದು ಯೋಗ್ಯವಾದುದಲ್ಲ. ಸಾಧ್ಯವಾದುದಲ್ಲ, ಸಾಧುವಾದುದಲ್ಲ ಎಂದು ತಮ್ಮಲ್ಲಿ ಪ್ರಾರ್ಥನೆ ಮಾಡುತ್ತಿದ್ದೇನೆ. ಗೋಸಂಪತ್ತನ್ನು, ಪಶುಸಂಪತ್ತನ್ನು ಅಭಿವೃದ್ಧಿ ಮಾಡಲು, ತಳಿ ಚೆನ್ನಾಗಿ ಉಳಿಯುವಂತೆ ಮಾಡಲು

---

2. 1963ರ ಮೈಸೂರು ಕ್ಯಾಟಲ್ ಲೈಸ್ ಲೈಸ್‌ನ್ಸಿಂಗ್ ಬಿಲ್ ಕುರಿತಂತೆ 26.3.1964ರಂದು ನಡೆದ ಚರ್ಚೆಯಲ್ಲಿ

ಅವು ಅವರ ಹಾಗೆಯೇ ದಪ್ಪವಾಗಿ, ದೃಢ ಕಾಯವಾಗಿ ಇರುವಂತೆ ಮಾಡಲು ದನಗಳನ್ನು ನೋಡಿಕೊಳ್ಳುವ ಬಗ್ಗೆ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತನ್ನು ಹೇಳಿದರೂ ಇದನ್ನು ಮಾಡಿದ ಪಕ್ಷದಲ್ಲಿ ಸಾಮಾನ್ಯ ವರ್ಗಕ್ಕೆ ಮಧ್ಯಮ ವರ್ಗಕ್ಕೆ ಸೇರಿದ ಕುಟುಂಬಗಳಿಗೆ, ಸಂಸಾರಕ್ಕೆ ತೊಂದರೆಯಾಗುತ್ತದೆ. ಏಕೆಂದರೆ ಅವರು ಒಂದು ಹಸುವನ್ನು ಕಟ್ಟಿಕೊಂಡು ಅವರ ಮನೆಗೆ ಆಗುವಷ್ಟು ಹಾಲನ್ನು ಸಂಪಾದನೆ ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿರುತ್ತಾರೆ. ಇಂಥ ಜನ ಕೂಡ ಲೈಸೆನ್ಸ್ ತೆಗೆದುಕೊಳ್ಳಬೇಕೆಂದರೆ, ಲೈಸೆನ್ಸ್ ಪಡೆಯುವ ಸ್ಥಳದಲ್ಲಿ ವೇಳೆಯಲ್ಲಿ ಭ್ರಷ್ಟಾಚಾರಗಳಿಗೆ ಒಳಗಾಗಬೇಕಾಗುತ್ತದೆ. ಯಾವಾಗ ನಾವು ಲೈಸೆನ್ಸ್ ತೆಗೆದುಕೊಳ್ಳಬೇಕು. ಪರ್ಮಿಶನ ಪಡೆಯಲು ಎಂದು ಮಾಡುತ್ತೇವೆಯೋ, ಅಲ್ಲಿ ತಾನಾಗಿಯೇ ಗಂಗೋತ್ರಿ ಉದ್ಭವವಾಗುತ್ತದೆ. ಭ್ರಷ್ಟಾಚಾರ ಗಂಗೋತ್ರಿಯ ಲೈಸೆನ್ಸಿಂಗ್ ಬ್ರಹ್ಮಸೃಷ್ಟಿಯಾಗುತ್ತಾನೆ; ಲೈಸನ್ಸ್ ಪಡೆಯಬೇಕೆಂದರೆ ಭ್ರಷ್ಟಾಚಾರಕ್ಕೆ ಅವಕಾಶಕೊಡುವ ಪರಿಸ್ಥಿತಿಯನ್ನು ಉಂಟು ಮಾಡುತ್ತೀರ. ಆದ್ದರಿಂದ ಆಗಿನ ಸ್ಥಿತಿಯಲ್ಲಿ ಇದು ಅಕಾಲಿಕವಾಗಿದೆ. ತತ್ವ ಬಹಳ ಯೋಗ್ಯವಾದುದು. ನಾಲ್ಕು ಹಸು ಕಟ್ಟುವ ಕಡೆ, 20 ಹಸುಗಳನ್ನು ಕಟ್ಟುವುದರಿಂದ ಅವುಗಳ ಗಂಜಲ ಮಲಮೂತ್ರಗಳಿಂದ ಬಹಳ ಅಶುದ್ಧಿ ಉಂಟಾಗಿ ಅಕ್ಕಪಕ್ಕದ ಪ್ರದೇಶಗಳಲ್ಲಿರುವ ಜನರಿಗೆ ತೊಂದರೆಯಾಗುತ್ತದೆ. ಇದೆಲ್ಲಾ ಒಪ್ಪಬೇಕಾದುದೇ. ಈ ಕಾನೂನನ್ನು ಎಲ್ಲಿ ಮಾಡಬೇಕು ಅನ್ನುವುದನ್ನು ಯೋಚನೆ ಮಾಡಬೇಕು. ಜನಗಳಿಗೇ ವಸತಿ ಸೌಕರ್ಯ ಇಲ್ಲದಿರುವ ಪರಿಸ್ಥಿತಿ ಇದೆ. ಹಸುಗಳನ್ನೂ ಗೋಸಂಪತ್ತನ್ನೂ ಪೋಷಿಸಿ. ಬೆಳೆಸುವುದಕ್ಕೆ ಅವಕಾಶವಿರುವ ಪ್ರದೇಶಗಳಲ್ಲಿ ಇಂಥ ಕಾನೂನು ಯೋಗ್ಯವಾದುದು, ಉಚಿತವಾದುದು, ಮಾಡಬೇಕಾದುದು. ಆದರೆ ಬೆಂಗಳೂರು ಒಂದು ದೊಡ್ಡ ಪಟ್ಟಣ ಮೈಸೂರಿನ ಪರಿಸ್ಥಿತಿ ಬೇರೆ. ಬೆಂಗಳೂರಿನಲ್ಲಿ ಇದು ಸಾಧ್ಯವಾದೀತ ಅನ್ನುವುದನ್ನು ನೋಡಬೇಕು.

ರಿಸ್ಟ್ರಿಕ್ಟಿಂಗ್ ಪವರ್ ಇದೆ. ನಗರಗಳಿಗೆ ಯಾವಾಗ ಹೆಚ್ಚಾಗಿ ಸೌಕರ್ಯಗಳು ಬರುತ್ತವೆಯೋ, ಆವಾಗ ಅಂಥ ಪ್ರದೇಶಗಳನ್ನು ಚೊಕ್ಕಟವಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಅಂಥ ಪ್ರದೇಶಗಳನ್ನು ಬಿಟ್ಟು ಎಕ್ಸ್‌ಟೆನ್‌ಶನ್‌ಗಳಿಗೆ ಬರಬೇಕಾಗುತ್ತದೆ. ಅದು ಆಗುತ್ತಾ ಇಲ್ಲ. ಆರ್ಕಾಟ್ ಶ್ರೀನಿವಾಸಾಚಾರ್ ಸ್ಟ್ರೀಟ್ ದೊಡ್ಡದು ಮಾಡಿದ್ದು ಅದೇ ದೃಷ್ಟಿಯಿಂದ.

ನ್ಯೂಯಾರ್ಕ್ ಸಿಟಿಯಲ್ಲಿ ಲಂಡನ್ನಿನಲ್ಲಿ, ನಾವು ದನಗಳನ್ನು ನೋಡುವುದಿಲ್ಲ. ಅದು ಶ್ರೀಮಂತರ ಊರು. ಅವರು ಅವುಗಳನ್ನು ಬೇರೆ ಕಡೆ ಇಟ್ಟುಕೊಂಡಿದ್ದಾರೆ ಅವರು ಕೈನಿಂದ ಹಾಲು ಕರೆಯುವುದಿಲ್ಲ. ಹಾಲು ಕರೆಯದೆ ಇರುವ ಹಸುಗಳನ್ನು ನಾಶಮಾಡಿಬಿಡುತ್ತಾರೆ. ನಮ್ಮಲ್ಲಿ ಪಶು ಸಂಪತ್ತಿಗೆ ಮನುಷ್ಯ ಸಂಪತ್ತಿಗಿಂತ ಹೆಚ್ಚು ಪ್ರಾಧಾನ್ಯ ಕೊಟ್ಟು ಕೊಂಡುಬಂದಿದ್ದಾರೆ. ಶ್ರೀಮಾನ್ ಮಲ್ಲಾರಾಧ್ಯರು ಅಪ್ಪಣೆ ಕೊಡಿಸಿದರು, ಅನಾಚಾರ ಮಾಡಿದ್ದರೆ, ಅಪಚಾರ ಮಾಡಿದ್ದರೆ, ಅದರಿಂದ ಶುದ್ಧವಾಗುವುದಕ್ಕೋಸ್ಕರ ಪವಿತ್ರವಾಗುವುದಕ್ಕೋಸ್ಕರ ಪಂಚಗವ್ಯ ತೆಗೆದುಕೊಳ್ಳುವ ಪದ್ಧತಿ ನಮ್ಮಲ್ಲಿದೆ. ಆಯುರ್ವೇದ ದೃಷ್ಟಿಯಿಂದ ಅದು ಒಳ್ಳೆಯದು ಅಂತಲೂ ಹೇಳುತ್ತಾರೆ. ಅದು ಬೇರೆ ಮಾತು. ಅದನ್ನು ತಜ್ಞರಿಗೆ ಶ್ರೀ ಎಂ.ಪಿ. ಕೃಷ್ಣಪ್ಪನವರಿಗೆ ಬಿಡಬಹುದು.

ಸಾಮಾನ್ಯವಾಗಿ ಒಂದು ಸಂಸಾರ, ತಮ್ಮ ಮನೆಯ ಹಿತಕ್ಕೋಸ್ಕರವಾಗಿ ಹಾಲು ಮೊಸರು, ಬೆಣ್ಣೆ ಇತ್ಯಾದಿಗಳಿಗೋಸ್ಕರವಾಗಿ ಕಟ್ಟಿಕೊಳ್ಳತಕ್ಕಂಥವರು, ಲೈಸನ್ಸು ತೆಗೆದುಕೊಳ್ಳಬೇಕು. ಹಾಲನ್ನು ಮಾರಾಟ ಮಾಡತಕ್ಕಂಥ ಜನ ಹತ್ತಾರು ಹಸುಗಳನ್ನು ಕಟ್ಟಿಕೊಂಡು, ಎಮ್ಮೆಗಳನ್ನು ಕಟ್ಟಿಕೊಂಡು, ಹಸು ಎಮ್ಮೆಗಳಿಂದ ಬರತಕ್ಕ ಹಾಲುಮೊಸರು ಏನಿದೆ, ಅದನ್ನು ಮಾರಾಟ ಮಾಡಿ ಜೀವನ ಮಾಡತಕ್ಕಂಥ ಜನ ಇನ್ನೊಂದು ಕೆಟಿಗೆರೆಯಲ್ಲಿ ಬರಬಹುದು. ಆತರಹ ಹಾಕಲಿಲ್ಲ.

ಈ ವಿಧಿಯನ್ನು ಮಾಡಿದ ರೀತಿ ನೋಡಿದರೆ ಎಲ್ಲೋ ಬಹಳ ಅಜಾಗರೂಕತೆಯಿಂದ ಮಾಡಿರುವ ಹಾಗಿದೆ. ನಮ್ಮಲ್ಲಿ ಇದುವರೆಗೆ ಬಂದಿರತಕ್ಕಂಥ ಕಾನೂನಿನಲ್ಲಿ ಎಷ್ಟು ತಪ್ಪುಗಳಿದ್ದವು, ಅವು ಇದರ ಮಟ್ಟಕ್ಕೆ ಬರುವ ಹಾಗಿಲ್ಲ. ಇದು ಸ್ಪಷ್ಟ. ಜನಕ್ಕೆ ಇದರಿಂದ ಸೌಕರ್ಯ ಉಂಟಾಗಬೇಕು. ಪಶು ಸಂಪತ್ತು ಬೆಳೆಯಬೇಕು, ವ್ಯಾಧಿಗಳು ಜನಕ್ಕೆ ಅಂಟಿಕೊಳ್ಳಬಾರದು. ಈ ದೃಷ್ಟಿಯಿಂದ, ಆರೋಗ್ಯ ದೃಷ್ಟಿಯಿಂದ ಜನರ ಹಿತದೃಷ್ಟಿಯಿಂದ ಕಾನೂನು ಮಾಡಬೇಕಾದುದು ಯೋಗ್ಯ. ಅದರ ಕಾನೂನು ಹೇಗೆ ಆಗುತ್ತಾ ಇದೆಯೆಂದರೆ ಯಾರು ಪಶುಸಂಪತ್ತನ್ನು ಇಟ್ಟುಕೊಳ್ಳಬೇಕೋ, ರಕ್ಷಣೆ ಮಾಡಬೇಕೋ, ಆರೋಗ್ಯವನ್ನು ಉಳಿಸಿಕೊಳ್ಳಬೇಕೋ ಅವರಿಗೆ ತೊಂದರೆ ಉಂಟುಮಾಡುವ ರೀತಿಯಲ್ಲಿ ಆಗುತ್ತ ಇದೆ. ಜನವು ವಾಸಮಾಡತಕ್ಕಂಥ ಮನೆಯಲ್ಲಾಗಲಿ ಅಥವಾ ಸಂಸಾರವಿರುವ ಮನೆಯ ಮಧ್ಯಭಾಗದಲ್ಲಾಗಲೀ ಹಸುವಿನ ಕೊಠಡಿ ಇದ್ದರೆ ಅನಾರೋಗ್ಯ. ಇದರ ಮೇಲೆ ನಿಯಂತ್ರಣ ಇಟ್ಟುಕೊಳ್ಳಬೇಕಾದ್ದು ಅಗತ್ಯ. ಆದರೆ 1–2–3 ಹಸುಗಳನ್ನು ಕಟ್ಟಿಕೊಂಡಿರತಕ್ಕ ಜನ ಏನಿದ್ದಾರೆ. ಅವರಿಗೆ ಏನಾದರೂ ಸ್ವಂತಕ್ಕೆ ಉಳಿಸಿಕೊಂಡಮೇಲೆ ಆರು ಲೀಟರ್ ಉಳಿದ ಪಕ್ಷದಲ್ಲಿ, ಅದನ್ನು ಮಾರಾಟ ಮಾಡಬಹುದು ಎಂದು ಇದರಲ್ಲಿ ಹೇಳಿದರೆ, ವ್ಯಾಪಾರ ಮಾಡುವ ಒಬ್ಬನಿಗೆ ಕೊಡುವ ಲೈಸನ್ಸು, ಮನೆಗೋಸ್ಕರ ಉಪಯೋಗಿಸಿ ಕೊಳ್ಳುವವನಿಗೆ ಕೊಡುವ ಲೈಸೆನ್ಸು ಒಂದೇ ಆದಹಾಗಾಯಿತು ಇವರಿಬ್ಬರನ್ನು ಬೇರೆ ಬೇರೆ ರೀತಿಯಲ್ಲಿ ಕಾಣಬೇಕಾಗಿತ್ತು.

ಪ್ರಾಥಮಿಕವಾಗಿ (ಪ್ರೈಮರಿಯಾಗಿ) ಸಂಸಾರಕ್ಕೆ ಆಗಿ ಉಳಿದ ಹಾಲನ್ನು ಮಾರಿಕೊಳ್ಳಬೇಕು. ಇನ್ನೊಂದು ಗುಂಪು ಯಾವುದು? ಹಸು ಎಮ್ಮೆಗಳನ್ನು ಕಟ್ಟಿಕೊಳ್ಳತಕ್ಕವರು ಲೈಸೆನ್ಸ್ ಪಡೆದುಕೊಳ್ಳಬೇಕಾಗುತ್ತದೆ. ಅವರಿಗೂ ಇವರಿಗೂ ವ್ಯತ್ಯಾಸವನ್ನು ಉಂಟು ಮಾಡಬೇಕಾಗುತ್ತದೆ. ಈಗ ತಾವು ವಿಧೇಯಕ ಮಾಡಿರುವ ರೀತಿಯಲ್ಲಿ ತೊಂದರೆ ಉಂಟಾಗಿದೆ. ಯಾರೂ ಕೂಡ ಹಸು ಮತ್ತು ಎಮ್ಮೆಗಳನ್ನು ತಾವು ಹೇಳಿರತಕ್ಕ ರೀತಿಯಲ್ಲಿ ಸಾಕಲಿಕ್ಕೆ ಸಾಧ್ಯವಿಲ್ಲ. (ಎ) ಮತ್ತು (ಬಿ) ಲೈಸೆನ್ಸ್‌ದಾರರಿಗೆ ಒಂದೇ ವಿಧವಾದ ಪೆನಾಲ್ಟಿಯನ್ನು ಹಾಕುತ್ತೀರಿ. 10ನೇ ಅನುಚ್ಛೇದದಲ್ಲಿ ಹೇಳಿರುವ ಪ್ರಕಾರ ಒಂದು ಸಾವಿರ ರೂಪಾಯಿಗಳನ್ನು ಅಪಚಾರ ಮಾಡಿರತಕ್ಕ ಜನ ಭ್ರಷ್ಟಾಚಾರ ಮಾಡಿರತಕ್ಕ ಜನ, ತಪ್ಪನ್ನು ಮಾಡಿರತಕ್ಕ ಜನ ಕೊಡಬೇಕಾಗುತ್ತದೆ. ಈ ಒಂದು ಸಾವಿರ ರೂಪಾಯಿ ಅನ್ನುವುದು ಐ.ಪಿ.ಸಿ. ಪ್ರಕಾರ ಶಿಕ್ಷೆಗೆ ಅರ್ಹರಾದವರಿಗೆ ವಿಧಿಸತಕ್ಕದ್ದು. ಎರಡನೆಯ ಅಂಶ ಎಂದರೆ ಈ ಹಸು, ಎಮ್ಮೆಗಳನ್ನು ಫರ್‌ಫೀಟ್ ಮಾಡಿಕೊಳ್ಳುತ್ತೇವೆ ಎಂದು ಹೇಳುತ್ತೀರಿ. ಜನಗಳನ್ನೇ ಇಟ್ಟುಕೊಂಡು ನಿಭಾಯಿಸುತ್ತೇವೆ ಎನ್ನುವ ಸ್ಥಿತಿಯಲ್ಲಿ ನೀವು ಇಲ್ಲ. ಇನ್ನು ದನಗಳನ್ನು ಕಟ್ಟಿಕೊಂಡು ಏನು

ಮಾಡುತ್ತೀರಿ? ಯಾವನಾದರೂ ಕಂದಾಯ ಕೊಡದೇ ಇರುವವನು ಇದ್ದರೆ, ಅವನು ಎಷ್ಟು ಕಂದಾಯ ಕೊಡಬೇಕೋ ಅಷ್ಟು ಹಣಕ್ಕೆ ಆಗುವಷ್ಟು ಸಾಮಾನುಗಳನ್ನು ಹರಾಜು ಹಾಕಿ ಬಾಕಿಯದನ್ನು ಬಿಟ್ಟು ಬಿಡಿ ಎಂದು ಹೇಳುವ ಸಮಯದಲ್ಲಿ ತಾವು ಈ ಫರ್‌ಫೀಟ್ ಎಂದು ಹಾಕಿರತಕ್ಕ ವಿಧಿ ಯೋಗ್ಯವೇ, ಇದು ಶಾಸ್ತ್ರಬದ್ಧವಾಗಿ ವಿವೇಚನೆಯಿಂದ ತಯಾರಾಗಿದೆಯೇ ಎಂಬುದನ್ನು ತಾವು ನೋಡಬೇಕು. ಕಾನೂನನ್ನು ನಾವು ಪಾಸ್ ಮಾಡುತ್ತೇವೆ. ಇದರ ಅನುಕೂಲ ಎಲ್ಲರಿಗೂ ಆಗುತ್ತದೆ ಎಂದರೆ ಚಿಂತೆ ಇಲ್ಲ. ಇದನ್ನು ಇತರ ನಾಗರಿಕ ರಾಷ್ಟ್ರಗಳ ಜೊತೆಗೆ ಎಂದರೆ ಅಮೇರಿಕಾ, ಇಂಗ್ಲೆಂಡ್ ಮುಂತಾದ ಮುಂದುವರಿದ ರಾಷ್ಟ್ರಗಳ ಜೊತೆಗೆ ಹೋಲಿಸಿ ನೋಡುವುದಾದರೆ, ಅಲ್ಲಿನ ಪರಿಸ್ಥಿತಿಯೇ ಬೇರೆ. ಅಲ್ಲಿ 20–30 ಮೈಲಿ ಪಾರಂಗೆ ಹೋಗುವುದಕ್ಕೆ ಅವಕಾಶವಿದೆ. ನಮ್ಮಲ್ಲಿ ಇಲ್ಲ. ಆ ತರಹದ ಸೌಕರ್ಯ ನಮ್ಮಲ್ಲಿ ಕಲ್ಪನೆಯಾಗಿಲ್ಲ. ದೂರ ದೂರದಲ್ಲಿ ಕಮ್ಯುನಿಟಿ ಷೆಡ್ಡುಗಳನ್ನು ಕಟ್ಟಬೇಕು ಎಂಬುದನ್ನು ಇಟ್ಟುಕೊಂಡರೆ ಬಹಳ ಜನಗಳಿಗೆ ತೊಂದರೆಯನ್ನುಂಟುಮಾಡುತ್ತದೆ. ಆದ್ದರಿಂದ ಈ 10ನೆಯ ವಿಧಿ ಏನಿದೆ ಈ ಶಿಕ್ಷೆ ಇದು ಊಹೆಗೂ ಕೂಡ ಮೀರಿದ, ಹುಡುಗಾಟಿಕೆಯಿಂದ ಮಾಡಿದ ವಿಧಿ ಕಾನೂನು ಎಂದು ಜನ ಅಂದುಕೊಳ್ಳುತ್ತಾರೆ. ಆದ್ದರಿಂದ ಇದನ್ನು ಪುನಃ ಪರ್ಯಾಲೋಚನೆ ಮಾಡಿದರೂ ಕೂಡ ತಪ್ಪಾಗುವುದಿಲ್ಲ ಎಂದು ಹೇಳುತ್ತೇನೆ. ಸರಿಯಾದ ಕಾನೂನು ಮಾಡಬೇಕು, ಜನಗಳಿಗೆ ಉಪಕಾರವಾಗಬೇಕು, ಕಾನೂನು ತಂದಿದ್ದೇ ಇದನ್ನು ಪಾಸ್ ಮಾಡಿಸಿಯೇ ತೀರಬೇಕು ಎಂಬ ಒಂದು ಪ್ರೆಸ್ಟೀಜ್ ಮೇಲೆ ನಿಂತುಕೊಳ್ಳಬೇಡಿ. ಯುಕ್ತಾ ಯುಕ್ತತೆಯನ್ನು ವಿವೇಚನೆ ಮಾಡಿ ಯಾವುದು ಸಾಧ್ಯ, ಯಾವುದು ಅಸಾಧ್ಯ, ಯಾವುದು ಜನಕ್ಕೆ ಉಪಕಾರವಾಗುತ್ತದೆ ಎಂಬುದನ್ನು ಆಲೋಚನೆ ಮಾಡಿ, ಈ ಸಭೆಯವರು ಯಾವ ಕಾನೂನನ್ನು ಮಾಡಿದರೂ ಕೂಡ ನೂರು ಜನರಲ್ಲಿ 80 ಜನ ಯಾರು ಶಾಸನಬದ್ಧರಾದ ಜನ ಇದ್ದಾರೆ ಅವರಿಗೆ ಬರೇ ಬೀಳುವುದಿಲ್ಲ ಅಂತಹ ಕಾನೂನು ಮಾಡಬೇಕು. ಅದಕ್ಕೆ ವಿರುದ್ಧವಾದ ಕಾನೂನನ್ನು ಮಾಡುವುದು ಯೋಗ್ಯವಲ್ಲ ಎಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ, ಯಾವ ತೆರಿಗೆಯನ್ನು ಹಾಕಿದರೂ ಕೂಡ ಅದು ಯೋಗ್ಯವಾದದ್ದು ಎಂದು ಹತ್ತು ಜನರು ಬಾಯಲ್ಲಿ ಬರಬೇಕು. ಆ ದೃಷ್ಟಿಯಿಂದ ಯಾವ ಕಾನೂನನ್ನೇನಾದರೂ ಮಾಡಿದರೆ ಅದು ಯಶಸ್ವಿಯಾಗುತ್ತದೆಯೇ ಹೊರತು ಇಲ್ಲದೇ ಇದ್ದರೆ ಅದು ಕೇವಲ ಕಾನೂನು ಆಗಿ ಅದರ ಫಲ ಅಥವಾ ಅದರ ಉದ್ದೇಶ ಸಾಧನೆಯಾಗುವುದಿಲ್ಲ. ಅನೇಕರಿಗೆ ಅದರಿಂದ ಹಿಂಸೆಯಾಗುತ್ತದೆ, ತೊಂದರೆಯಾಗುತ್ತದೆ ಎಂದು ಹೇಳುತ್ತೇನೆ.

ಇನ್ನು ಕಮ್ಯುನಿಟಿ ಕ್ಯಾಟಲ್ ಷೆಡ್ಸ್ ಎಂದು ತಂದಿದ್ದ ಪಕ್ಷದಲ್ಲಿ ಅಥವಾ ಅದನ್ನು ಡಿಫೈನ್ ಮಾಡಿದ್ದ ಪಕ್ಷದಲ್ಲಿ ಚೆನ್ನಾಗಿತ್ತು. ಅದು ಯಾವುದನ್ನೂ ಕೂಡ ಮಾಡಿಲ್ಲ.

ಈ ಶಾಸನ ಈಗ ತರದಿದ್ದರೆ ಏನೂ ಅನಾಹುತವಾಗುತ್ತಿರಲಿಲ್ಲ. ಕಮ್ಯುನಿಟಿ ಷೆಡ್ ಕಟ್ಟಿದ್ದೇವೆ, ಅವು ಬಹಳ ಚೆನ್ನಾಗಿದೆ ಎಂದು ಶ್ರೀ ರಾಮಚಂದ್ರರವರು ಹೇಳಿದರು. ಒಳ್ಳೆಯದು ಆದರೆ ಈ ವಿಧೇಯಕವನ್ನೇಕೆ ತರಬೇಕಾಗಿತ್ತು? ಯಾರಾದರೂ ಒಬ್ಬರು ತಮ್ಮ ಕುಟುಂಬದ ಅವಶ್ಯಕತೆಗಾಗಿ ಹಾಲು ಮೊಸರಿಗಾಗಿ ಒಂದು ಹಸು ಅಥವಾ ಎಮ್ಮೆ ಕಟ್ಟಿಕೊಂಡರೆ ಅವನು ಲೈಸೆನ್ಸ್ ತೆಗೆದುಕೊಳ್ಳಬೇಕು.

ಹೀಗಾದರೆ ಹೇಗೆ? ಈ ಮಸೂದೆ ಜಾರಿಗೆ ಬಂದಮೇಲೆ ಕಮ್ಯೂನಿಟಿ ಕ್ಯಾಟಲ್ ಷೆಡ್‌ನಲ್ಲಿ ಆ ರಾಸುಗಳನ್ನಿಡಬೇಕು, ಬೇರೆ ಕಡೆ ಇಡಬಾರದು ಎಂದು ಹೇಳಿದರೆ ಹಾಗಿಡಲುಸಾಧ್ಯವೆ? ಹಾಗೆ ಹೇಳುವುದು ಸರಿಯೆ ಎಂದು ಕೇಳುತ್ತೇನೆ. ಕಮ್ಯುನಿಟಿ ಸೆಂಟರ್ ಎಂದು ಮಾಡುವುದು ಅಷ್ಟು ಚೆನ್ನಾಗಿ ನಡೆಯುವುದಿಲ್ಲ. ಜನರು ಸಮಾಜದ ಧರ್ಮ ಬಿಟ್ಟು ಈ ಷೆಡ್ಸ್‌ನಲ್ಲಿ, ಕೇಂದ್ರಗಳಲ್ಲಿ ತಮ್ಮ ರಾಸುಗಳನ್ನು ಇಡಲು ಒಪ್ಪುವುದು ಕಷ್ಟ. ಅದಕ್ಕೆ ಇನ್ನೂ ಬಹಳ ಕಾಲ ಬೇಕು. ಆದುದರಿಂದ ಹೆಚ್ಚು ಕಾಲ ತೆಗೆದುಕೊಳ್ಳದೆ ಇಷ್ಟು ಮಾತ್ರ ಹೇಳುತ್ತೇನೆ. ಈ ವಿಧೇಯಕ ಹೆಚ್ಚು ತೊಂದರೆ ಮಾಡುತ್ತದೆ. ಹಾಲು ಮೊಸರು ಕುಡಿದು ಆರೋಗ್ಯ ಬೆಳೆಸಿಕೊಳ್ಳಬೇಕೆಂಬ ಸರ್ಕಾರದ ಉದ್ದೇಶವೇನಿದೆ ಅದಕ್ಕೆ ಈ ವಿಧೇಯಕ ಭಂಗ ಬರುತ್ತದೆ. ಎರಡನೆಯದಾಗಿ ಮಧ್ಯಮ ವರ್ಗದವರು ಹಾಲು ಮೊಸರಿಗಾಗಿ ಮನೆಯ ಬಳಕೆಗಾಗಿ ಇಟ್ಟುಕೊಳ್ಳುವುದಕ್ಕೆ ತೊಂದರೆಯಾಗುತ್ತದೆ. ಮೂರನೆಯದಾಗಿ ಈ ಶಾಸನವೇನಿದೆ ಅದು ಯೋಗ್ಯ ರೀತಿಯಿಂದ ವಿವೇಚನೆ ಮಾಡಿ ರಚಿಸಿರುವುದಿಲ್ಲ. ಈ ದೃಷ್ಟಿಯಿಂದ ಮತ್ತು 10ನೆಯ ಕ್ಲಾಜಿನಲ್ಲಿರುವ ಒಂದು ಸಾವಿರ ರೂಪಾಯಿಗಳ ಜುಲ್ಮಾನೆ ವಿಧಿಸುವುದು ಮತ್ತು ಎಲ್ಲಾ ಪಶು ಸಂಪತ್ತನ್ನೂ ಸರ್ಕಾರ ತೆಗೆದುಕೊಳ್ಳುವುದು ಊಹೆಗೆ ಮೀರಿದ್ದು. ಇಂತಹ ಶಾಸನ ಮಾಡಿದರೆ ಜನರೇನು ಸರ್ಕಾರದಲ್ಲಿ ಅಭಿಮಾನ ಇಟ್ಟುಕೊಂಡಿದ್ದಾರೆ ಅದನ್ನು ಕಳೆದುಕೊಳ್ಳುತ್ತದೆ. ಸರ್ಕಾರಕ್ಕೆ ಇರುವ ಬೆಲೆ, ಗೌರವ ಕಡಿಮೆಯಾಗುತ್ತದೆ. ಶಾಸನ ಮಾಡಿದ ಮೇಲೆ ಜನರು ಅದನ್ನು ವೇದವಾಕ್ಯದಂತೆ ಪರಿಪಾಲನೆ ಮಾಡಬೇಕು. ಆಶಾಭಾವನೆ ಜನರಲ್ಲಿ ಬೆಳೆಯುವಂತಿರಬೇಕು. ಹಾಗಿಲ್ಲದಿರುವುದರಿಂದ ಈ ವಿಧೇಯಕವನ್ನು ಜಾರಿಗೆ ತಂದರೆ ಅನಾಹುತವಾಗುತ್ತದೆ, ಪ್ರಜಾ ಪ್ರಭುತ್ವ ನಡೆಯಲು ಕಷ್ಟವಾಗುತ್ತದೆ. ಜನರು ಶಾಸನವನ್ನು ವಿಫಲಗೊಳಿಸಲು ಪ್ರಯತ್ನಿಸುತ್ತಾರೆ. ಆದುದರಿಂದ ಈ ಮಸೂದೆಯನ್ನು ಬದಲಾಯಿಸಿ ಸಭೆಯಲ್ಲಿ ಜನರು ಹೇಳುವ ಅಭಿಪ್ರಾಯವನ್ನು ಗಮನಿಸಿ ಪುನಃ ಅಸೆಂಬ್ಲಿಗೆ ತೆಗೆದುಕೊಂಡು ಹೋಗಿ ತಿದ್ದುಪಡಿ ಮಾಡಿ ತರುವುದು ಸೂಕ್ತ, ಈಗ ತಂದಿರುವುದರ ಉದ್ದೇಶ ಯೋಗ್ಯವಾದರೂ ಕೂಡ ಬಹಳ ಅಸಹ್ಯವಾಗಿದೆ ಎಂದು ಇಷ್ಟು ಮಾತ್ರ ಹೇಳುತ್ತೇನೆ.

– * –

# XII. ಇತರೆ ವಿಷಯಗಳ ಕುರಿತಂತೆ ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರ ಭಾಷಣಗಳು:

## 1. ಕಲೆಯನ್ನು ಪ್ರೋತ್ಸಾಹಿಸುವ ಕುರಿತು

ಶ್ರೀ ಎಂ.ಪಿ.ಎಲ್. ಶಾಸ್ತ್ರಿ (ಉಪಾಧ್ಯಾಯರ ಕ್ಷೇತ್ರ) – ಮಾನ್ಯ ಸಭಾಪತಿಗಳೇ ನನ್ನ ನಿರ್ಣಯ ಈ ರೀತಿ ಇದೆ. "This Council is of the opinion that Government should arrange for giving an honorarium of Rs. 100 per mensem to the artistes in the State, namely musicians, dancers, painters, actors, and writers, twenty-five in number to be selected by a committee specially appointed for the purpose".

ಇದನ್ನು ಮಾನ್ಯ ಸಭಾಪತಿಗಳ ಅನುಮತಿ ಪಡೆದು ನಾನು ಮೊನ್ನೆಯ ದಿವಸ ಮಂಡಿಸಿದ್ದೇನೆ. ಆದರೆ ಈ ವಿಷಯವಾಗಿ ಈ ದಿನ ಈ ಮಾನ್ಯ ಸಭೆಯಲ್ಲಿ ನಾಲ್ಕು ಮಾತುಗಳನ್ನು ಆಡಬೇಕೆಂದು ಈ ಸಂದರ್ಭದಲ್ಲಿ ತಮ್ಮ ಅಪ್ಪಣೆಯನ್ನು ಬೇಡುತ್ತೇನೆ. ಈ ರೀತಿ ಅಪ್ಪಣೆಯನ್ನು ಪಡೆಯುವುದಕ್ಕೆ ಮೊದಲು ಕನ್ನಡದಲ್ಲಿ ಅಚ್ಚಾಗಿರತಕ್ಕ ನಿರ್ಣಯದ ಪರಿವರ್ತನೆ ಏನಿದೆ ಅದನ್ನು ಬದಲಾವಣೆ ಮಾಡಬೇಕೆಂದು ನಾನು ತಮ್ಮಲ್ಲಿ ಪ್ರಾರ್ಥನೆ ಮಾಡುತ್ತಿದ್ದೇನೆ. ಈ ರಾಜ್ಯವಿಸ್ತಾರವಾಗಿ ಕನ್ನಡ ಜನ ಒಂದಾದ ಮೇಲೆ ಅಧಿಕೃತ ಕನ್ನಡ ಭಾಷೆ ವಿಚಿತ್ರವಾಗಿ ಪರಿಣಮಿಸಿದೆ. ಆದುದರಿಂದ ಇಂತಹ ಒಂದು ಪರಿಸ್ಥಿತಿಯಿಂದ ರಕ್ಷಣೆ ಮಾಡುವುದು ತಮ್ಮ ಕರ್ತವ್ಯ. ತಾವು ಅಚ್ಚಗನ್ನಡಿಗರು. ನಮ್ಮ ಕನ್ನಡ ಭಾಷೆಯನ್ನು ಇಂತಹ ಅಭಾಸ ಪರಿವರ್ತನೆಯಿಂದ ಕಾಪಾಡಬೇಕು ಎಂದು ನಾನು ಪ್ರಾರ್ಥನೆ ಮಾಡುತ್ತೇನೆ.

ಮಾನ್ಯ ಸಭಾಪತಿಗಳೇ, ಈ ನಿರ್ಣಯದ ಉದ್ದೇಶವಾದರೂ ದ್ವಿಮುಖವಾದುದು. ಐದು ಗುಂಪುಗಳಿಗೆ ಸೇರಿದಂಥ ವಿದ್ವಾಂಸರಿಗೆ ವಿಶೇಷ ಸಂಭಾವನೆ ಕೊಡಬೇಕು. ಮೊಟ್ಟಮೊದಲು ಆ ಗುಂಪುಗಳಿಗೆ ಸೇರಿದ 25ಜನ ವಿದ್ವಾಂಸರನ್ನು ಆರಿಸಿಕೊಳ್ಳಬೇಕು. ಅದಕ್ಕೋಸ್ಕರ ಒಂದು ಸಮಿತಿಯನ್ನು ನಿರ್ಮಾಣ ಮಾಡಬೇಕು ಎಂಬ ನಿರ್ಣಯದಲ್ಲಿ ದ್ವಿಮುಖವಾದ ಉದ್ದೇಶವಿದೆ. ಮೊದಲನೆಯದಾಗಿ ನಮ್ಮದು ಕಲೆಗೆ ಜರೂರಾಗಿ ಬೆಳೆದುಕೊಂಡು ಬಂದರತಕ್ಕ ದೇಶ. ಈ ರಾಜ್ಯದಲ್ಲಿ ಕಲೆಗೆ ಬಹಳ ಮಟ್ಟಿಗೆ ಪ್ರೋತ್ಸಾಹ ಕೊಡಬೇಕು ಎನ್ನುವುದೇ, ಈ ನಿರ್ಣಯದ ಮೊದಲನೆಯ ಉದ್ದೇಶ. ಎರಡನೆಯ ಉದ್ದೇಶ ಕಲೆಯ ಸೇವೆಯನ್ನು ಯಾರು ಹತ್ತಾರು ವರ್ಷಗಳು ಮಾಡಿ ಕಲೆಗಾಗಿ ತಮ್ಮ ದೇಹವನ್ನು ಶ್ರಮಿಸಿದ್ದಾರೋ, ಅದರ ಬೆಳವಣಿಗೆಗೆ ಕಾರಣವಾಗಿದ್ದಾರೋ, ಅವರ ಜೀವನ ಸೌಕರ್ಯಕ್ಕಾಗಿಯಾದರೂ ಮಾಸಿಕ ಸಂಭಾವನೆ ಕೊಡಬೇಕು ಎನ್ನುವುದು. ಈ ನಿರ್ಣಯದಲ್ಲಿ ಐದು ಕ್ಷೇತ್ರದಲ್ಲಿ ಕೆಲಸ ಮಾಡತಕ್ಕ ಕಲಾವಿದರಿಗೆ ಸನ್ಮಾನವನ್ನು ಮತ್ತು ಪುರಸ್ಕಾರವನ್ನು ಕೊಡಬೇಕು ಎಂದು ಮನವಿ ಮಾಡಿದೆ. ಸಂಗೀತ, ನೃತ್ಯ ಚಿತ್ರ, ನಾಟಕ, ಸಾಹಿತ್ಯ ಕಲೆಗಳಲ್ಲಿ ನುರಿತವರಾದಂತಹ ಮತ್ತು ಅಂತಹ ಕಲೆಗಳ ಅಭಿವೃದ್ಧಿಗಾಗಿ ಕೆಲಸ ಮಾಡಿದಂತಹವರನ್ನು ಪುರಸ್ಕಾರ ಮಾಡಬೇಕು ಮತ್ತು ಅಂತಹವರ ಜೀವನ ಸೌಕರ್ಯಕ್ಕೆ ಸಹಾಯ ಮಾಡುವುದು ಈಗ ಬಹಳ ಅತ್ಯಗತ್ಯವೆಂದು

1. ಕಲೆಯನ್ನು ಪ್ರೋತ್ಸಾಹಿಸುವ ಕುರಿತು 18.4.1960ರಂದು ನಡೆದ ಚರ್ಚೆಯಲ್ಲಿ

ನಾನು ಭಾವಿಸಿದ್ದೇನೆ. ಮುಂದೆ ನಮ್ಮ ಮೈಸೂರು ರಾಜ್ಯದಲ್ಲಿ ಅದರಲ್ಲೂ ಕನ್ನಡ ದೇಶಗಳಿಗೆ ತಿಲಕಪ್ರಾಯವಾದಂಥ ನಮ್ಮ ದೇಶದಲ್ಲಿ ಎಂಥೆಂಥ ಚಿತ್ರಕಾರರು, ವರ್ಣಕಾರರು, ನಟರು ಹಾಗೂ ಲೇಖಕರು ಇದ್ದರು ಅವರಿಗೆ ನಮ್ಮ ರಾಜ್ಯದಲ್ಲಿ ಎಂತಹ ಪ್ರೋತ್ಸಾಹ ದೊರೆಯುತ್ತಿತ್ತು ಎಂಬುದನ್ನು ಈಗ ಹೋಲಿಸಿ ನೋಡಿದರೆ ಅದು ವಿಚಿತ್ರ ಪರಿವರ್ತನೆಯಾಗಿದೆ. ಕಲಾವಿದರಿಗೆ ಸನ್ಮಾನ ಮಾಡುವಾಗ ಒಂದು ಪದ್ಧತಿ, ಒಂದು ಸಂಪ್ರದಾಯ ನಮ್ಮ ಮೈಸೂರು ರಾಜ್ಯಕ್ಕೇನೂ ಹೊಸದೇನಲ್ಲ. ಮೈಸೂರು ಅನೇಕ ಶತಮಾನಗಳಿಂದ ಕಲೆಗೆ ತವರೂರು ಆಗಿರುವುದೇ ಅಲ್ಲದೆ ಮೈಸೂರು ರಾಜರ ಆಸ್ಥಾನದಲ್ಲಿ ಅನೇಕ ಪ್ರಸಿದ್ಧ ವಿದ್ವಾಂಸರಿಗೆ, ಅವರಲ್ಲೂ ಮುಖ್ಯವಾಗಿ ಸಂಗೀತ, ನಾಟಕ, ನೃತ್ಯ ಚಿತ್ರ ಹಾಗೂ ಲೇಖಕರು ಇತ್ಯಾದಿ ವಿದ್ವಾಂಸರಿಗೆ ವಿಶೇಷ ಸನ್ಮಾನ ಪ್ರೋತ್ಸಾಹವನ್ನು ತೋರಿಸಿಕೊಂಡು ಬಂದಿದೆ. ಅದರಿಂದಲೇ ಈ ಚೀಚೆಗೆ ಈ ಮೈಸೂರು ರಾಜ್ಯದಲ್ಲಿ ಅನೇಕ ಕಲೆಗಳು ದಿನ ದಿನಕ್ಕೇ ಹೆಚ್ಚಿಗೆ ಬೆಳೆಯುಕೊಂಡು ಬಂದಿದೆ. ಅವು ಅನೇಕ ಜನರಿಗೆ ಸಂತೋಷವನ್ನು ಉಂಟು ಮಾಡುವ ರೀತಿಯಲ್ಲಿವೆ.

ನಮ್ಮ ದೇಶದಲ್ಲಿ ಇಡಿಯ ಭಾರತ ಖಂಡಕ್ಕೇ ಕೀರ್ತಿಪ್ರಾಯರಾದ ವೀಣೆಶೇಷಣ್ಣ ಬಿಡಾರದ ಕೃಷ್ಣಪ್ಪ, ಸದಾಶಿವರಾಯರು, ಸಂಗೀತರತ್ನ ಚೌಡಯ್ಯನವರೇ ಮುಂತಾದ ಶ್ರೇಷ್ಠ ಸಂಗೀತಗಾರರು ಹುಟ್ಟಿ ಬೆಳೆದಿದ್ದಾರೆ. ಭರತಖಂಡದ ದಿಗ್ದಿಗಂತಗಳೆಲ್ಲೆಲ್ಲಾ ಅವರ ಹೆಸರು ಪ್ರಸಿದ್ಧವಾಗಿದೆ. ಇದಕ್ಕೆ ರಾಜಾಶ್ರಯವಲ್ಲಿ ರಾಜಾಸ್ಥಾನದಲ್ಲಿ ಇವರುಗಳಿಗೆ ದೊರೆಯುತ್ತಿದ್ದ ಪ್ರೋತ್ಸಾಹವೇ ಕಾರಣವೆಂದು ನಾನು ಭಾವಿಸಿದ್ದೇನೆ. ಹೀಗೆಯೇ ನಮ್ಮ ಮೈಸೂರು ರಾಜ್ಯದಲ್ಲಿ ನೃತ್ಯ ಕಲೆ ಬೆಳೆದು ಬಂದಿದೆ. ತಮ್ಮ ಇಡಿಯ ಆಯುಷ್ಯವನ್ನೇ ನೃತ್ಯ ಕಲೆಗಾಗಿ ಮುಡುಪಾಗಿಟ್ಟ ಶಾಮರಾಯರು, ಪುಟ್ಟಮ್ಮ ಇವರುಗಳಿಂದ, ಅವರಿಂದಾಗಿ ಅದರ ಭಂಗಿ ಜನತೆಯಲ್ಲಿ ಹಳೆಯುತ್ತಿತ್ತು. ಒಂದು ವಿಧದಲ್ಲಿ ನೃತ್ಯ ನಮ್ಮ ದೇಶದಲ್ಲಿ ಉಳಿಯುವಂಥ ಮಾಡಿದ ಮಹಾ ವ್ಯಕ್ತಿಗಳೇ ಇವರುಗಳೆಂದರೆ ಹೆಚ್ಚಲ್ಲ. ಅಂತೆಯೇ ಚಿತ್ರಕಲೆಗೆ ವಿಶ್ವವಿಖ್ಯಾತವಾದ ರವಿವರ್ಮನು ಕೇರಳ ದೇಶದವನಾದರೂ ಮೈಸೂರು ದೇಶದಲ್ಲಿ ರಾಜಮನ್ನಣೆಯನ್ನು ಪಡೆದು ಹೊಸದಾದ ಅನೇಕ ಚಿತ್ರಗಳನ್ನು ಚಿತ್ರಿಸಿದನೆಂದು ಹೇಳುತ್ತಾರೆ. ಅರಮನೆಯ ಶಿಲ್ಪಿ ವೆಂಕಟಪ್ಪನವರ ಚಿತ್ರಗಳನ್ನು ಪ್ರಚಾರ ಮಾಡುವುದಕ್ಕೆ ಮೈಸೂರಿನ ಮಹಾರಾಜರೇ ಕಾರಣರಾಗಿದ್ದರು ಎಂಬುದು ಸರ್ವವಿಧಿತವಾಗಿದೆ. ಹೀಗೆಯೇ ಅನೇಕ ಹೆಸರಾಂತ ನಟರಿದ್ದಾರೆ. ದಿವಂಗತ ವರದಾಚಾರ್ಯರು, ನಾಟಕ ಶಿರೋಮಣಿ ವೀರಣ್ಣನವರು, ಮರಿರಾಯರು, ನಾಗೇಶ್ವರರಾಯರು ಮುಂತಾದ ಅನೇಕ ಕಲಾವಿದರಿಗೆ ಆಶ್ರಯಕೊಟ್ಟಂಥ ರಾಜಾಸ್ಥಾನ ಇಂದು ಇಲ್ಲದಂತಾಗಿದೆ. ಈಗ ರಾಜಾಶ್ರಯವನ್ನು ಪಡೆಯುತ್ತಿದ್ದಂಥ ಆ ಜನ ಪ್ರಜೆಗಳ ಪ್ರತಿನಿಧಿಗಳಾಗಿ ಬಂದಿರುವ ಸರ್ಕಾರದ ಆಶ್ರಯವನ್ನು ಇದಿರು ನೋಡುತ್ತಿದ್ದಾರೆ. ಅದರಲ್ಲೂ ಅಣ್ಣಾರಾಯರ ಆಶ್ರಯವನ್ನು ಬೇಡುತ್ತಿದ್ದಾರೆ. ಆದುದರಿಂದ ಪ್ರಜಾ ಪ್ರತಿನಿಧಿ ಸರ್ಕಾರ ಇಂದು ಈ ಕೆಲಸವನ್ನು ಮಾಡಬೇಕಾದುದು ಯೋಗ್ಯ ಮತ್ತು ಉಚಿತ. ಕಲೆಯನ್ನು ಬೆಳೆಸುವುದಕ್ಕೆ ಏನು ಅವಶ್ಯಕತೆಯಿದೆ, ಏಕೆ ಬೆಳೆಸಬೇಕು ಎಂಬ ವಿಷಯವನ್ನು ಇಲ್ಲಿ ಉಲ್ಲೇಖ ಮಾಡಬೇಕಾಗಿಲ್ಲ. ಇದು ಒಂದು ಜನತೆಗೆ ಅತ್ಯಗತ್ಯ. ಯಾವ ರಾಜ್ಯದಲ್ಲೇ ಆಗಲಿ, ಯಾವ ದೇಶದಲ್ಲಿಯೇ ಆಗಲಿ, ಕಲೆ ಅದರ ನಾಗರೀಕತೆಯ

ಚಿಹ್ನೆ ಎಂದು ಜನರು ಭಾವಿಸಿದ್ದಾರೆ. ಸಾವಿರಾರು ವರ್ಷಗಳಿಂದ ಕಲೆಯು ದೇಶದ ನಾಗರಿಕತೆಯ ಚಿಹ್ನೆಯೆಂದು ಮಾತ್ರ ಪರಿಗಣಿಸಲ್ಪಟ್ಟಿದೆಯಲ್ಲದೆ, ಸಂಗೀತವೇ ಆಗಲಿ, ಸಾಹಿತ್ಯವೇ ಆಗಲಿ ಶಿಲ್ಪವಾಗಲೀ ಚಿತ್ರವಾಗಲಿ – ಇವೆಲ್ಲ ಮನುಷ್ಯನ ಜೀವನವನ್ನು ಹಸನು ಮಾಡುವಂಥವುಗಳಾಗಿವೆ. ಅದರಲ್ಲೂ ಪ್ರಜಾಪ್ರಭುತ್ವದ ಕಾಲದಲ್ಲಿ ಮನುಷ್ಯನ ಮನಸ್ಸನ್ನು ರಾಗದ್ವೇಷಗಳಿಂದ ದೂರವಾಗಿ, ಸ್ಥಿಮಿತ ಬುದ್ಧಿ ಬಂದು ವಿಶ್ವದ ಶ್ರೇಯಸ್ಸನ್ನು ಸಾಧಿಸಬೇಕಾದರೆ, ಕಲೆಗಿಂತ ಅತ್ಯುತ್ತಮವಾದ ಸಾಮಗ್ರಿ ಬೇರೆ ಯಾವುದು ಇಲ್ಲವೆಂದು ಭಾವಿಸಿದ್ದೇವೆ. ನಮ್ಮ ಪ್ರಖ್ಯಾತ ವಿದ್ವಾಂಸರಾದ ಹಾಗೂ ರಾಷ್ಟ್ರದ ಉಪಕುಲಪತಿಗಳಾದ ಡಾಕ್ಟರ್ ರಾಧಾಕೃಷ್ಣನ್ ಅವರು ಈಗ ಮೂರು ವರ್ಷಗಳ ಹಿಂದೆ ಡೆಲ್ಲಿಯಲ್ಲಿ ಸಾಹಿತ್ಯ ಅಕಾಡೆಮಿಯ ಪ್ರಾರಂಭೋತ್ಸವವನ್ನು ನೆರವೇರಿಸಿದಾಗ ಆಡಿದ ಮಾತುಗಳು ಅರ್ಥಗರ್ಭಿತವಾಗಿವೆ.

ಮನುಷ್ಯನ ಮನಸ್ಸಿನಲ್ಲಿರತಕ್ಕ ಸಹಜವಾಗಿ ಕಷಾಯವನ್ನುಂಟು ಮಾಡುವ ರಾಗದ್ವೇಷಗಳನ್ನು ತುಳಿದು ಹಾಕಿ ಭದ್ರವಾಗಿ ಸಮಾಜವನ್ನು ಬೆಳೆಸಬೇಕಾದರೆ ಕಲೆಯನ್ನು ಕಲಿಸುವುದು ಒಂದು ಮುಖ್ಯವಾದ ಸಾಧನ ಎಂದು ಹೇಳಿದ್ದಾರೆ. ಸಾವಿರಾರು ವರ್ಷಗಳ ಹಿಂದೆ ನಮ್ಮ ಭರತನಾಟ್ಯ ಶಾಸ್ತ್ರದಲ್ಲಿಯೂ ಇದನ್ನೇ ಹೇಳಿದ್ದಾರೆ.

ಅದರ ಅರ್ಥ ಕಲೆಗಳೂ ಅವುಗಳ ಹೆಚ್ಚು ಹೆಚ್ಚಿನ ಉಪಾಸನೆಯಿಂದ ಸತತ ಅಧ್ಯಯನ ಮತ್ತು ಅಭ್ಯಾಸದಿಂದ ಮನುಷ್ಯನ ಅತ್ಮ ಸಂಸ್ಕಾರವಾಗಿ ಆತ ಸಿದ್ಧಿಪಡೆಯುತ್ತಾರೆ. ಎಂದು ಜನ ಹೇಳುತ್ತಾರೆ. ಆದ್ದರಿಂದ ಈ ಹೊತ್ತು ಇದು ಸರ್ಕಾರ ಮಾಡಬೇಕಾದ ಕೆಲಸವಲ್ಲ ಎಂದು ಹೇಳಿದರೆ ಅದು ಅನುಚಿತವೆಂದು ಭಾವಿಸುತ್ತೇನೆ. ಈ ದೃಷ್ಟಿಯಿಂದ ಕಲಾವಿದರಿಗೆ ಹಾಗೂ ಲಲಿತ ಕಲೆಗಳ ಬೆಳವಣಿಗೆಗೆ ಬೇಕಾದ ವಾತಾವರಣವನ್ನು ಈಗಿನ ಸರ್ಕಾರ ಕಲ್ಪಿಸಬೇಕಾದ್ದು ಯೋಗ್ಯ ಮತ್ತು ಅಗತ್ಯ. ಇಂದು ಈ ಐದು ಕ್ಷೇತ್ರಗಳಲ್ಲಿ ದುಡಿದ ಜನ ನಮ್ಮಲ್ಲಿ ಅನೇಕರಿದ್ದಾರೆ. ಹತ್ತಾರು ದಶಕಗಳು ಕೆಲಸ ಮಾಡಿದವರಿದ್ದಾರೆ. ಅಂಥವರು ಇಂದು ನಿರ್ಗತಿಕರಾಗಿ ಜೀವನ ನಡೆಸುತ್ತಿದ್ದಾರೆ. ಆದರೂ ಕಲೆಯ ಉಪಾಸನೆಯನ್ನು ತಪಸ್ಸನ್ನು ಅವರು ಮಾಡಿಕೊಂಡು ಬರಬೇಕಾಗಿದೆ. ಹೀಗಾಗಿ ನಿರಾತಂಕ ಜೀವನಕ್ಕೆ ಸಹಾಯ ಮಾಡಬಲ್ಲ ಜನರಿಲ್ಲದೆ ಅವರು ಕಲೆಯನ್ನು ಬಳಸಿಕೊಂಡು ಬರುವ ಕೆಲಸ ಮೊಟಕಾಗಿದೆ. ಆದುದರಿಂದ ಅವರು ಈ ರೀತಿ ಮೊಟಕು ಮಾಡದೆ ಕಲೆಯನ್ನು ಬೆಳೆಸುವ ದೃಷ್ಟಿಯಿಂದ ನಾನಾ ಕಲಾ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಕಲಾವಿದರಿಗೆ ವರ್ಷಂ ಪ್ರತಿ ಅಥವಾ ಮಾಸಿಕ ಸಂಭಾವನೆ ಕೊಡುವುದು ಅವಶ್ಯಕ. ಕಲೋಪಾಸನೆ ಮಾಡುವುದಕ್ಕೆ ಜನ ಮುಂದೆ ಬರುವುದಕ್ಕೆ ಇದು ಅನುಕೂಲವಾಗುತ್ತದೆ. ಕಲೆಯನ್ನು ಅಭ್ಯಾಸಮಾಡಿ ಜನರಿಗೆ ಮುಕ್ತಿ ದೊರೆಯುವಂತೆ ಈ ಜನ ಮಾಡಬಲ್ಲರು. ಆದಕಾರಣ ಕಲಾಭಿವೃದ್ಧಿಯ ದೃಷ್ಟಿಯಿಂದ ಕಲೋಪಾಸಕರ ಜೀವನವನ್ನು ನಿರಾತಂಕವಾಗಿರುವಂತೆ ಮಾಡಬೇಕೆಂದು ನಾನು ಮಾನ್ಯ ಸಚಿವರನ್ನು ಆಗ್ರಹಪೂರ್ವಕವಾಗಿ ಬೇಡಿಕೊಳ್ಳುತ್ತೇನೆ. ಫ್ರಾನ್ಸ್ ದೇಶದ ಆ ಅನಭಿಷಕ್ತ ಸಾಮ್ರಾಟ್ ನಪೋಲಿಯನ್ನನೂ ಸಹ ಕಲೆಯ ವಿಷಯದಲ್ಲಿ ಹೀಗೆ ಹೇಳಿದ್ದಾನೆ.

ಫ್ರಾನ್ಸ್ ರಾಜ್ಯದಲ್ಲಿ ಶ್ರೇಷ್ಠವರ್ಗಕ್ಕೆ ಸೇರಿದ ಕವಿಗಳನ್ನು ಆತ ಕೇಳಿದ. ನಮ್ಮ ಒಳಾಡಳಿತ ಸಚಿವರು ಏನು ಮಾಡುತ್ತಿದ್ದಾರೆ ಎಂದು ಕೇಳಿದನಂತೆ. ಅಂದರೆ ತೀವ್ರವಾದ ಆಸಕ್ತಿ ಎನ್ನುವುದು ಕೇವಲ ಭರತಖಂಡದಲ್ಲಿ ಮಾತ್ರವಲ್ಲ ಯಾವ ಯಾವ ರಾಜ್ಯ ಕಲೆಯಲ್ಲಿ ಮೇಲ್ಮಟ್ಟದಲ್ಲಿ ನಿಂತಿತ್ತೋ, ಯಾವ ಯಾವ ರಾಜ್ಯ, ನಾಗರಿಕತೆಯನ್ನು ಬೆಳೆಸಬೇಕೆಂದು ಪ್ರಯತ್ನಪಟ್ಟಿತು. ಆ ರಾಜ್ಯಗಳೆಲ್ಲವು ಲಲಿತ ಕಲೆಗಳಿಗೆ ವಿಶೇಷ ಸ್ಥಾನವನ್ನು ಕೊಟ್ಟಿವೆ. ನಮ್ಮ ಈ ಮೈಸೂರು ರಾಜ್ಯದಲ್ಲಿ ಕಲಾಭಿಮಾನಿಗಳು ಅನೇಕ ಮಂದಿ ಇದ್ದಾರೆ. ಪ್ರತಿಭಾವಂತರಾದ ಯೋಗ್ಯರಾದ ಯುವಕ ಸಾಹಿತಿಗಳು ಯಾರಿದ್ದಾರೋ, ಅವರ ಜೀವನ ನಿರಾತಂಕವಾಗಿ ನಡೆಯದೆ, ಜೀವನೋಪಾಯಕ್ಕಾಗಿ ಅಶ್ಲೀಲ ಸಾಹಿತ್ಯಕ್ಕೆ ಕಾಲಿಟ್ಟು ಸಾಹಿತ್ಯ ದೃಷ್ಟಿಯಲ್ಲಿ ಸಮಾಜ ದ್ರೋಹ ಮಾಡುತ್ತಿದ್ದಾರೆ. ಆದುದರಿಂದ ನಮ್ಮಲ್ಲಿರುವ ಪ್ರತಿಭೆಯನ್ನು ಉಳಿಸಿಕೊಂಡು ನಾವು ಭದ್ರವಾದ ಸಮಾಜವನ್ನು ಕಟ್ಟಬೇಕಾದರೆ ಉತ್ತಮವಾದ ಸಮಾಜವನ್ನು ಸೃಷ್ಟಿಸಬೇಕಾದರೆ ಈ ತೆರನಾದ ಘೋಷಣೆ ಈ ಹೊತ್ತು ಸರ್ಕಾರದಿಂದ ಬರಬೇಕಾದ್ದು ಅಗತ್ಯವೆಂದು ನಾನು ಭಾವಿಸಿದ್ದೇನೆ.

ಮಾನ್ಯ ಸಭಾಪತಿಗಳೇ, ನನಗಿಂತ ತಮಗೆ ಹೆಚ್ಚಾಗಿ ಮೈಸೂರು ರಾಜ್ಯದಲ್ಲಿರತಕ್ಕ ಈ ಕಲಾವಿದರ ವಿಷಯ ಗೊತ್ತಿದೆ. ಹತ್ತಾರು ವರುಷಗಳು ಭಕ್ತಿಯಿಂದ ದುಡಿದು ಕಲಾ ಸೇವೆಗೈದ ಜನರು ಇಂದು ನಿರ್ಗತಿಕರಾಗಿ ಯಾವ ರೀತಿ ಬೀದಿಯಲ್ಲಿ ಅಲೆಯುತ್ತಿದ್ದಾರೆ ಎಂಬುದು ತಮಗೇ ಗೊತ್ತಿದೆ. ವರದಾಚಾರ್ಯ, ನಾಗೇಶರಾಯರು ಹೇಗೆ ತಮ್ಮ ಕಲಾ ಕೌಶಲ್ಯತೆಯಿಂದ ಸಾವಿರಾರು ಜನರ ಮನಸ್ಸನ್ನು ಮೋಹಗೊಳಿಸುತ್ತಿದ್ದರು ಎಂಬುದೂ ಗೊತ್ತಿದೆ. ಅಂಥಾ ನಾಗೇಶರಾಯರು ಜೀವನಕ್ಕೂ ಸಹ ಮಾರ್ಗವಿಲ್ಲದೆ ಈಗ್ಗೆ ಕೆಲವು ದಿವಸಗಳ ಹಿಂದೆ ಕಾಲವಾದರು. ಅದೇ ಸ್ಥಿತಿಯಲ್ಲಿ ಅನೇಕ ಕಲಾವಿದರು, ನಾಟಕ ಮಂಡಲಿಯವರು ದುರ್ಭರ ಜೀವನ ನಡೆಸಿಕೊಂಡು ಹೋಗುತ್ತಿದ್ದಾರೆ. ಅವರನ್ನು ರಕ್ಷಣೆ ಮಾಡುವುದು ಸಮಾಜದ ಆದ್ಯ ಕರ್ತವ್ಯ. ಹಾಗೂ ರಾಜ್ಯ ಸರ್ಕಾರದ ಪ್ರಥಮ ಕರ್ತವ್ಯ. ಇದನ್ನು ನೆರವೇರಿಸಿಕೊಡಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ. ಪ್ರಸಿದ್ಧ ಸಂಗೀತ ವಿದ್ವಾಂಸರಾಗಿ ಯಾರು ಅದೃಷ್ಟವಂತರಾಗಿದ್ದರೋ ಆ ಕೆಲವರು ಹತ್ತಾರು ವರುಷಗಳು ಜನರಿಂದ ದುಡ್ಡು ಪಡೆದು ಸುಖದಿಂದ ಜೀವನ ನಡೆಸಲು ಸಾಧ್ಯವಾಗಿರಬಹುದು. ಇನ್ನು ಕೆಲವರು ಅಷ್ಟೇ ಸಾಮರ್ಥ್ಯ ಪಡೆದವರಾಗಿದ್ದರೂ ವಿದ್ವತ್ ಸಾಹಿತ್ಯವುಳ್ಳವರಾಗಿದ್ದರೂ ಬಹಳ ಕಷ್ಟ ಸ್ಥಿತಿಯಲ್ಲಿದ್ದಾರೆ. ನಮ್ಮ ದಕ್ಷಿಣಾತ್ಯ ಸಂಗೀತಗಾರರಲ್ಲಿ ಕೊಳಲು ಬಾರಿಸುವುದರಲ್ಲಿ ಕೊಳಲು ಪುಟ್ಟಣ್ಣನವರು ಹೆಸರಾಂತರಾಗಿದ್ದರು. ಪಲ್ಲಡಂ ಸಂಜೀವರಾಯರು ಹೆಸರು ದಿಗಂತವಾಗಿತ್ತು. ವೀಣ ವಾದನಕ್ಕೆ ಮೈಸೂರು ದೇಶದ ಶ್ರೀ ಎ.ಕೆ. ಸುಬ್ಬರಾಯರು ಹೆಸರು ವಾಸಿಗಳಾಗಿದ್ದರೂ ಇಂದು ಅವರು ಅಲ್ಲಿ ಇಲ್ಲಿ ಬಾಲಕರಿಗೆ ನಿತ್ಯ ಪಾಠಹೇಳಿಕೊಂಡು ಜೀವನ ನಡೆಸಬೇಕಾಗಿ ಬಂದಿದೆ.

ಹಾಗೆ ಮಾಡದೆ ಇದ್ದಿದ್ದರೆ ಈ ವಿದ್ವತ್ತುಗಳೊಂದೂ ಈ ದಿವಸ ಇರುತ್ತಿರಲಿಲ್ಲ. ಈ ವಿದ್ವತ್ತುಗಳು ಉಳಿಯಬೇಕಾಗಿದ್ದರೆ ಈ ಬಾಬಿನಲ್ಲಿ ನಾವು ಪ್ರಗತಿ ಸಾಧಿಸಬೇಕಾಗಿದ್ದರೆ ದೊಡ್ಡ ದೊಡ್ಡ ಸಂಗೀತಗಾರರನ್ನು ಕಲೆಗಾರರನ್ನು ನಾವು ತಯಾರಿಸಬೇಕಾಗಿದೆ. ಅದಕ್ಕೆ ಸರ್ಕಾರದವರ ಪ್ರೋತ್ಸಾಹ

ಅತ್ಯಾವಶ್ಯಕ. ಆದರೆ ಈಗ ಈ ಸಂಗೀತ ವಿದ್ವಾಂಸರುಗಳಿಗೆ ಸರ್ಕಾರದ ಆಶ್ರಯವಿಲ್ಲದೆ ಅವರು ಕೇವಲ ಆ ಒಂದು ಪರಾಶ್ರಯದ ಮೇಲೆ ತಮ್ಮ ಹಸಿವನ್ನು ನೀಗುವಂಥ ಅವಕಾಶವನ್ನುಂಟುಮಾಡಬಾರದು. ನಮ್ಮಲ್ಲಿ ಈ ಕಲೆಗಾರರನ್ನು ಹೆಚ್ಚು ಹೆಚ್ಚಾಗಿ ಬೆಳೆಸಬೇಕಾಗಿದೆ. ಈ ಹಿಂದೆ ನಮ್ಮ ನಾಡಿನಲ್ಲಿ ಸಹಸ್ರಾರು ಮಂದಿ ಹೆಸರಾದ ಸಂಗೀತಗಾರರು ಕಲೆಗಾರರು ಇದ್ದರು. ಆದರೆ ಈಗೀಗ ಅವರ ಸಂಖ್ಯೆ ನಶಿಸುತ್ತಾ ಬರುತ್ತಿದೆ. ಇದಕ್ಕೆ ಸರ್ಕಾರದವರು ಅವಕಾಶ ಕೊಡಬಾರದು. ಈ ದಿವಸ ಆ ಮರಿರಾವ್, ಚಿಂತನದಲ್ಲಿ ವೆಂಕಟರಾವ್ ಇಂಥ ಉತ್ತಮ ದರ್ಜೆಯ ಉನ್ನತ ದರ್ಜೆಯ ಕಲೆಗಾರರು ನಮ್ಮಲ್ಲಿ ಎಷ್ಟೋ ಜನರಿದ್ದಾರೆ. ಈ ಹಿಂದೆ ಇವರುಗಳಿಗೆಲ್ಲ ಸರ್ಕಾರದವರ ಪುರಸ್ಕಾರವಿತ್ತು; ಗೌರವವಿತ್ತು, ಇವರಿಗೆ ಸಂಭಾವನಾ ರೂಪದಲ್ಲಿ ಸಂಬಳ ರೂಪದಲ್ಲಿ ಸಾವಿರಾರು ರೂಪಾಯಿಗಳ ಸಂಪಾದನೆಯಿತ್ತು. ದೊಡ್ಡ ದೊಡ್ಡ ಸಂಗೀತಗಾರರು ರಂಗಭೂಮಿಯ ಮೇಲೆ ಒಂದೊಂದು ರಾಗ ಹಾಡಿದರೆ ಸಾಕು, ಸಹಸ್ರಾರು ಜನರು ಸಂಗೀತ ಸಾಮ್ರಾಜ್ಯದ ಆನಂದ ಸಾಗರದಲ್ಲಿ ಮುಳುಗಿ ತೇಲುತ್ತಿದ್ದರು. ಸಹಸ್ರಾರು ಜನರ ಮನಸ್ಸನ್ನು ಸೂರೆಗೊಳ್ಳುತ್ತಿದ್ದರು. ಆದರೆ ಈ ಹೊತ್ತು ಮೈಸೂರಿನಲ್ಲಿ ಅಂಥ ಸಂಗೀತ ವಿದ್ಯೆಯನ್ನು ಕಲಿಯತಕ್ಕ ಜನರೂ ಇಲ್ಲ. ಕಲಿಸತಕ್ಕಂಥ ಜನರೂ ಸಹ ಅಪರೂಪವಾಗುತ್ತಿದ್ದಾರೆ. ಆದರೆ ಈ ದಿವಸ ಹುರುಪಿನಿಂದ ಈ ಸಂಗೀತ ಶಾಸ್ತ್ರದಲ್ಲಿ ಕಾಲಿಡಲು ಬರತಕ್ಕ ಚಿಕ್ಕ ಚಿಕ್ಕಮಕ್ಕಳು, ರಂಗಭೂಮಿಗೆ ಬರತಕ್ಕಂಥ ಮಕ್ಕಳು ಇಲ್ಲಿ ಯಾವ ವಿಧವಾದ ಪ್ರೋತ್ಸಾಹವೂ ಸಿಕ್ಕದೆ ಇರುವುದರಿಂದ ಅವರು ದಿನೇ ದಿನೇ ಆ ಸಿನಿಮಾ ಪ್ರಪಂಚದ ಕಡೆಗೆ ನುಗ್ಗುತ್ತಿದ್ದಾರೆ. ಹೀಗಾಗಿ ಈ ದಿವಸ ಈ ಕಲೆಗಳೆಲ್ಲ ದೇಶದಲ್ಲಿ ಮಾಯವಾಗುತ್ತಿವೆ. ಹಿಂದೆಲ್ಲ ನಮ್ಮ ಈ ಮೈಸೂರು ರಾಜ್ಯ ಕಲೆಗೆ ಮಾತ್ರ ಸ್ಥಾನವಾಗಿತ್ತು. ಈ ಕಲೆಯಿಂದ ವಿಶೇಷವರಮಾನವೂ ಇತ್ತು. ಈ ದಿವಸ ಅದೆಲ್ಲವೂ ಸಂಪೂರ್ಣವಾಗಿ ನಿಂತುಹೋಗಿದೆ. ಆದಕಾರಣ ಅದನ್ನೀಗ ಉಳಿಸಸಕ್ಕ ಸನ್ನಿವೇಶ ಒದಗಿದೆ. ಆದುದರಿಂದ ಸರ್ಕಾರದವರು ಈ ಕಲೆಗಾರರಿಗೆ ಹೆಚ್ಚಿನ ಪ್ರೋತ್ಸಾಹ ನೀಡಬೇಕು ಮತ್ತು ನಮ್ಮ ಹಿಂದಿನವರು ಬೆಳೆಸಿಕೊಂಡು ಬಂದಿರುವ ಕೀರ್ತಿಯನ್ನು ಉಳಿಸಬೇಕಾದ ಜವಾಬ್ದಾರಿ ಈ ದಿವಸ ಸರ್ಕಾರದವರ ಮೇಲೆ ಬಿದ್ದಿದೆ. ಆದರೆ ಈಗ ಈ ವಿಚಾರದಲ್ಲಿ ಪ್ರಾಂತ ಸರ್ಕಾರದವರು ಮತ್ತು ಕೇಂದ್ರ ಸರ್ಕಾರದವರೂ ಈ ಕಲೆಗಳಿಗೆ ಪ್ರೋತ್ಸಾಹ ನೀಡುತ್ತಿದ್ದಾರೆ. ಈ ಪ್ರೋತ್ಸಾಹದ ಅಂಗವಾಗಿಯೇ ಈಗ ಮೈಸೂರಿನಲ್ಲಿ ಒಂದು ಸಂಗೀತ ನಾಟಕ ಅಕಾಡೆಮಿ ಎಂಬುದಿದೆ. ಇದಕ್ಕೆ ಸರ್ಕಾರದವರು ಗ್ರಾಂಟನ್ನು ಕೊಟ್ಟು ಪ್ರೋತ್ಸಾಹ ನೀಡುತ್ತಿದ್ದಾರೆ. ಈ ಒಂದು ವ್ಯವಸ್ಥೆಯಿಂದ ಯಾರು ಹತ್ತಾರು ವರ್ಷಗಳ ಕಾಲ ಈ ಕಲೆಗಳಿಗಾಗಿ ತಮ್ಮ ಸರ್ವಸ್ವವನ್ನೂ ವಿನಿಯೋಗ ಮಾಡಿ ದೊಡ್ಡ ದೊಡ್ಡ ವಿದ್ವಾಂಸರಾಗಿರುತ್ತಾರೋ ಅಂಥವರಿಗೆ ಇದರಿಂದ ಒಂದು ತಮ್ಮ ಉದರಂಭರಣ ಮಾಡಿ ಕೊಳ್ಳಲು ಅನುಕೂಲವಾಗಿದೆ. ಇಷ್ಟೇ ಅಲ್ಲದೆ ಸಾಹಿತ್ಯದಲ್ಲಿ ಒಳ್ಳೆಯ ಪುಸ್ತಕಗಳನ್ನು ಬರೆಯತಕ್ಕವರಿಗೂ ಸಹ ಪ್ರೋತ್ಸಾಹ ನೀಡಲು ಸರ್ಕಾರದವರು ಒಂದು ಯೋಜನೆಯನ್ನು ಮಾಡಿರುತ್ತಾರೆ. ಈ ಯೋಜನೆಯಲ್ಲಿ ಪ್ರತಿ ವರ್ಷವೂ 30 ಉತ್ತಮ ಸಾಹಿತ್ಯವುಳ್ಳ ಪುಸ್ತಕಗಳಿಗೆ ಪುಸ್ತಕವೊಂದಕ್ಕೆ 150 ರೂಪಾಯಿಗಳಂತೆ ಬಹುಮಾನ ಕೊಡುವುದರ ಮುಖೇನ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಲಾಗುತ್ತಿದೆ. ಸಂಭಾವನೆಗಾಗಿ ಕೇಂದ್ರ ಸರ್ಕಾರದವರು 5 ಸಾವಿರ ರೂಪಾಯಿಗಳನ್ನು ಕೊಡುತ್ತಿದ್ದಾರೆ. ಈ ಸಂಭಾವನೆಯು ನಾನಾಗಲೇ

ಹೇಳಿದಂತೆ ಶ್ರೇಷ್ಠ ಕೃತಿಗಳಿಗೆ ಕೊಡಲಾಗುತ್ತಿದೆ. ಆದರೆ ಈಗ ಈ ಸಂಗೀತ ಸಾಹಿತ್ಯಕ್ಕೆ ಆ ರೀತಿ ಸಂಭಾವನೆಗಳನ್ನು ಕೊಡದೆ ಕೇವಲ ಪ್ರಶಸ್ತಿಗಳನ್ನು ಮಾತ್ರ ಕೊಡಲಾಗುತ್ತಿದೆ. ಕಳೆದ ಸಾಲಿನಲ್ಲಿ ಕೇಂದ್ರ ಸರ್ಕಾರದಿಂದ ನಮ್ಮ ಮೈಸೂರಿನ ಸಂಗೀತಗಾರರೊಬ್ಬರಿಗೆ ಮಾತ್ರ ಅಂಥ ಒಂದು ಪ್ರಶಸ್ತಿ ದೊರೆತಿರುತ್ತದೆ. ಆದರೆ ಈ ಒಂದು ಪ್ರೋತ್ಸಾಹವನ್ನಾದರೂ ಅವರು ಒಬ್ಬಿಬ್ಬರಿಗೆ ಮಾತ್ರ ನಿಗದಿ ಮಾಡದೆ ಇನ್ನೂ ಹತ್ತಾರು ಜನ ವಿದ್ವಾಂಸರಿಗೆ ಲಭಿಸುವಂತೆ ಉದಾರ ಭಾವನೆಯನ್ನು ತೋರಿಸಬೇಕು. ಅಂಥ ದೊಡ್ಡ ದೊಡ್ಡ ಸಂಗೀತ ವಿದ್ವಾಂಸರುಗಳಿಗೆ, ಕಲಾವಿದರುಗಳಿಗೆ ಸರ್ಕಾರದ ಪ್ರೋತ್ಸಾಹ ದೊರೆಯುವಂತಾಗಬೇಕೆಂಬ ಉದ್ದೇಶದಿಂದಲೇ ನಾನೀಗ ಈ ಒಂದು ನಿರ್ಣಯವನ್ನು ತಂದಿದ್ದೇನೆ. ನಾನೀಗ ಈ ನಿರ್ಣಯದಲ್ಲಿ 100 ರೂಪಾಯಿಗಳ ಇಪ್ಪತ್ತು ಬಹುಮಾನಗಳನ್ನು ಯಾರು ಸ್ಪರ್ಧೆಯಲ್ಲಿ ಗೆದ್ದುಬರುತ್ತಾರೋ ಅಂಥ ಉತ್ತಮ ಕಲೆಗಾರರಿಗೆ ಕೊಡಬೇಕೆಂದು ಸೂಚಿಸಿದ್ದೇನೆ. ಆದುದರಿಂದ ಈಗ ಈ ನಿರ್ಣಯದ ಹಿಂದೆ ಅಡಕವಾಗಿರುವ ತತ್ವವನ್ನು ಮಾನ್ಯ ವಿದ್ಯಾಮಂತ್ರಿಗಳಾದ ಶ್ರೀ ಅಣ್ಣಾರಾಯರು ಅನುಮೋದಿಸಿ. ಇದಕ್ಕೆ ಹೆಚ್ಚಿನ ಪುರಸ್ಕಾರ ನೀಡುತ್ತಾರೆಂಬ ನಂಬಿಕೆ ನನಗಿದೆ. ನಾನೀಗ ಈ ಒಂದು ಬಾಬಿನಿಂದ ಸರ್ಕಾರದ ಮೇಲೆ ಹೆಚ್ಚಿನ ಹಣಕಾಸಿನ ಭಾರ ಬೀಳದಿರಲೆಂಬ ಉದ್ದೇಶದಿಂದ ಕೇವಲ 25 ಜನ ಕಲಾವಿದರಿಗೆ ತಲಾ ಮಾಹೆಯಾನ ಒಂದು ನೂರು ರೂಪಾಯಿಗಳ ಸಂಭಾವನೆ ಸಲ್ಲಿಸಬೇಕೆಂದು ಹೇಳಿದ್ದೇನೆ. ಈ ದಿವಸ ನಮ್ಮ ಸರ್ಕಾರ ವಿದ್ಯಾ ಬಾಬ್ತಿಗಾಗಿ 64 ಕೋಟಿ ರೂಪಾಯಿಗಳನ್ನು ವೆಚ್ಚ ಮಾಡುತ್ತಿದೆ. ಈ ಬಾಬಿಗೆ ಈ ಶಿಕ್ಷಣ ಖಾತೆಯವರು 14ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡುತ್ತಿರಬಹುದು. ಇದರ ಜೊತೆಗೀಗ ಇನ್ನು 30 ಸಾವಿರ ರೂಪಾಯಿಗಳನ್ನು ಹೆಚ್ಚಾಗಿ ತೆಗೆದಿಟ್ಟರೆ ಅವರಿಂದ ಅಂಥಾ ಬಾಧಕವೇನೂ ಆಗಲಾರದೆಂದು ಕಾಣುತ್ತಿದೆ. ಮುಂದೆ ಈ ವೆಚ್ಚವನ್ನು ಒಂದು ಲಕ್ಷ ರೂಪಾಯಿಗಳವರೆಗೆ ಹೆಚ್ಚಿಸಬೇಕಾಗಿರಬಹುದು. ಪ್ರಸಕ್ತ ಸಾಲಿನಲ್ಲಿ 5 ಜನರಿಗೆ ವೆಚ್ಚ ಮಾಡಿದರೆ ಅದರ ಮಾರನೆಯ ವರ್ಷ 10 ಜನರಿಗೆ ಅನಂತರ ಹೀಗೆ ಹೆಚ್ಚಿಸುತ್ತ ಒಂದು ಲಕ್ಷದವರೆಗೆ ಸಂಭಾವನೆ ಕೊಟ್ಟರೆ ಅಲ್ಲಿಗೆ ಹೆಚ್ಚಾಯಿತು. ಹೀಗೆ, ಈ ಬಾಬಿನಿಂದ ಸರ್ಕಾರಕ್ಕೆ ಒಂದು ಲಕ್ಷಕ್ಕಿಂತ ಹೆಚ್ಚಿನ ವೆಚ್ಚ ಬರುವುದಿಲ್ಲವೆಂದು ನನಗೆ ಅನಿಸುತ್ತದೆ. ಈ ಒಂದು ಯೋಜನೆಯಿಂದ ಈ ಕಲೆಗಾಗಿ ಜೀವನವನ್ನೇ ಮುಡುಪಾಗಿಟ್ಟಿರತಕ್ಕ ಜನರಿಗೆ ಒಂದು ತೃಪ್ತಿ ಉಂಟಾಗುವುದೇ ಅಲ್ಲದೆ ಅವರಿಗೆ ದೇಶದಲ್ಲಿ ಈ ಕಲೆಗಳನ್ನು ಬೆಳೆಸುವುದಕ್ಕೊಂದು ಪ್ರೋತ್ಸಾಹವನ್ನೂ ಸಹ ನೀಡಿದಂತಾಗುತ್ತದೆ. ಈ ಒಂದು ಪ್ರೋತ್ಸಾಹದಿಂದ ಈ ಕಲೆಗಳು ದೇಶದ ಮೂಲೆ ಮೂಲೆಗಳಲ್ಲೆಲ್ಲಾ ಬೆಳೆದು ಅಭಿವೃದ್ಧಿ ಹೊಂದುವಂತಾಗಲೆಂದು ನಾನು ಆಶಿಸಿದ್ದೇನೆ. ಆ ದೃಷ್ಟಿಯಿಂದ ಈ ಸಭೆಯ ಸರ್ವ ಸದಸ್ಯರು ಈ ನಿರ್ಣಯಕ್ಕೆ ತಮ್ಮೆಲ್ಲರ ಸಂಪೂರ್ಣ ಬೆಂಬಲ ನೀಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ನಾನಿನ್ನು ಎರಡು ಮಾತುಗಳನ್ನು ಹೇಳಿ ನನ್ನ ಭಾಷಣವನ್ನು ಮುಗಿಸುವುದಕ್ಕೆ ಮುಂಚೆ ಎರಡು ಮುಖ್ಯ ವಿಚಾರಗಳನ್ನು ಈ ಮಾನ್ಯ ಸಭೆಯ ಗಮನಕ್ಕೆ ತರಲಿಚ್ಛಿಸುತ್ತೇನೆ. ನಮ್ಮ ಮುಖ್ಯ ಮಂತ್ರಿಗಳಾಗಿರತಕ್ಕ ಶ್ರೀಮಾನ್ ಜತ್ತಿಯವರು ಮೊನ್ನೆ ತಾನೆ ನಡೆದ ಒಂದು ಕವಿಗೋಷ್ಠಿಯನ್ನು ಉದ್ಘಾಟನೆ ಮಾಡತಕ್ಕ ಕಾಲದಲ್ಲಿ ಅವರು ತಮ್ಮ ಮೊದಲನೆಯ ಭಾಷಣದಲ್ಲಿ ಈ ರೀತಿಯಾಗಿ ಹೇಳಿದ್ದಾರೆ. ಈ ವಿಚಾರ ಮಾನ್ಯ ಸಭಾ ನಾಯಕರಿಗೂ ಸಹ ನೆನಪಿರಬಹುದು. ಅದೇನೆಂದರೆ ಯಾರು ಒಂದು ಕಾವ್ಯರಸದ

ಇಂಪಿಗೆ ತಲೆದೂಗುವುದಿಲ್ಲವೋ, ಯಾರು ಸಂಗೀತದ ಇಂಪಿಗೆ ಮನ ಸೋಲುವುದಿಲ್ಲವೋ ಯಾರು ಉತ್ತಮ ನೃತ್ಯಗಾನ ಕಲೆಗಳ ರಸಸ್ವಾದನೆ ಮಾಡುವುದಿಲ್ಲವೋ ಅಂಥವರ ವರ್ಗಕ್ಕೆ ನಾನು ಸೇರದವನಾಗಿರಬೇಕೆಂಬುದೇ ನನ್ನ ಆಸೆ ಎಂಬುದೇ ಈ ವಾಕ್ಯದ ಅರ್ಥ. ಈ ಒಂದು ಅಭಿಮಾನ ದೃಷ್ಟಿಯು ಅವರಲ್ಲಿರುವುದರಿಂದ ನಾನೀಗ ಈ ನಿರ್ಣಯದಲ್ಲಿ ಸೂಚಿಸಿರುವ ಪ್ರಕಾರ 25ಜನರಿಗೆ ಈ ಸಂಭಾವನೆ ಬಹುಮಾನಗಳನ್ನು ಕೊಡುವುದಕ್ಕೆ ಪ್ರಯತ್ನ ಮಾಡಿದರೆ ನಮ್ಮ ನಾಡಿನ ಕಲಾವಿದರಿಗೆ ಬಹಳ ಅನುಕೂಲವಾಗುತ್ತದೆ ಮತ್ತು ನಾನು ಈ ಒಂದು ನಿರ್ಣಯವನ್ನು ತಂದುದಕ್ಕೆ ಒಂದು ಸಫಲವಾದಂತಾಗುತ್ತದೆ. ಮೊನ್ನೆ ತಾನೇ ಕಳೆದ ಈ ಹಿಂದಿನ ಸೋಮವಾರದ ದಿವಸ ಆಲ್ ಇಂಡಿಯಾ ರೇಡಿಯೋ ಸಪ್ತಾಹದ ಸಮಾರಂಭ ಕಾಲದಲ್ಲಿ ನಮ್ಮ ಮಾನ್ಯ ಶಿಕ್ಷಣ ಸಚಿವರಾದ ಶ್ರೀ ಅಣ್ಣಾರಾಯರವರು ಒಂದು ಮಾತನ್ನು ಹೇಳಿದ್ದಾರೆ. "ಯಾವ ರಾಜ್ಯದಲ್ಲಿ ಕಲೆಗಳಿಗೆ ಸ್ಥಾನವಿರುವುದಿಲ್ಲವೋ ಅಂಥಾ ರಾಜ್ಯ ಅಂಥಾ ದೇಶ ಯಾವುದೊಂದು ಪ್ರಶಸ್ತಿಯನ್ನೂ ಗಳಿಸಲಾರದು. ಎಂಬುದಾಗಿ ಹೇಳಿದ್ದಾರೆ. ಮಾನ್ಯ ಮಂತ್ರಿಗಳು ಆ ದಿವಸ ಏನು ಹೇಳಿರುತ್ತಾರೋ ಅದನ್ನೇ ನಾನೀಗ ಈ ನನ್ನ ನಿರ್ಣಯದಲ್ಲಿ ಅಳವಡಿಸಿರುತ್ತೇನೆ. ಈ ಎಲ್ಲ ಕಾರಣಗಳಿಂದಲೂ ನಮ್ಮ ನಾಡಿನ ಕಲೆಗಳಿಗೂ ಕಲೆಗಾರರಿಗೂ ಅಭಿವೃದ್ಧಿ ಹೊಂದುವಂಥ ಒಂದು ಅವಕಾಶವನ್ನು ನಮ್ಮ ಸರ್ಕಾರದವರು ಉಂಟುಮಾಡಿಕೊಡಬೇಕೆಂದು ನಾನು ಅವರಲ್ಲಿ ಬಹಳ ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಂಡು ಈ ಮಾನ್ಯ ಸಭೆಯ ಸರ್ವಸದಸ್ಯರೂ ಈ ನನ್ನ ನಿರ್ಣಯದ ಬಗ್ಗೆ ಸಂಪೂರ್ಣ ಸಹಾನುಭೂತಿಯನ್ನು ತೋರಿಸಿ ಈ ನಿರ್ಣಯಕ್ಕೆ ಎಲ್ಲರೂ ಬೆಂಬಲ ನೀಡಬೇಕೆಂದು ಕೇಳಿಕೊಂಡು ನನ್ನ ಈ ಎರಡು ಮಾತುಗಳನ್ನು ಮುಗಿಸುತ್ತೇನೆ.

## 2. 1962ರ ಚೈನಾ-ಯುದ್ಧ ಕುರಿತಂತೆ ತಮ್ಮ ಭಾಷಣದಲ್ಲಿ

ಶ್ರೀ ಎಂ.ಪಿ.ಎಲ್. ಶಾಸ್ತ್ರಿ – ಮಾನ್ಯ ಸಭಾಧ್ಯಕ್ಷಣೆಯವರೇ, ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀಮಾನ್ ಎಸ್ ನಿಜಲಿಂಗಪ್ಪನವರು ಈ ಸಭೆಯ ಮುಂದೆ ಮಂಡಿಸಿರತಕ್ಕ ಈ ಸರಕಾರಿ ನಿರ್ಣಯಕ್ಕೆ ಈ ಮಹಾಸಭೆಯ ಸಂಪೂರ್ಣ ಬೆಂಬಲವಿರುವುದು ಮಾತ್ರವಲ್ಲದೆ ಇಡೀ ರಾಜ್ಯದ ಇಡೀ ರಾಷ್ಟ್ರದ ಬೆಂಬಲವಿದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಚೀನಾ ದುರಾಕ್ರಮಣದಿಂದ ಭರತಖಂಡಕ್ಕೆ ವಿಷಾದಕರವಾದ ವಿಪತ್ತು ಒದಗಿದೆ. ಭಾರತಕ್ಕೆ ಇದೊಂದು ಪರ್ವಕಾಲವಾಗಿದೆ. ನಮ್ಮ ದೇಶವು ಸ್ವಾತಂತ್ರ್ಯ ಪಡೆದು 15 ವರ್ಷಗಳ ಕಾಲದಲ್ಲಿ ಭರತಖಂಡವನ್ನು ಸಂಪತ್‌ಭರಿತವನ್ನಾಗಿ ಮಾಡಿ ಯೋಗ್ಯ ರೀತಿಯಲ್ಲಿ ಸತ್ಪ್ರಜೆಗಳ ನಿರ್ಮಾಣ ಮಾಡುವ ಕಾರ್ಯದಲ್ಲಿ ನಾವು ತೊಡಗಿರುವಾಗ್ಗೆ ಈ ವಿಪತ್ತು ಒದಗಿದೆ. ಈ ವಿಪತ್ತಿನಿಂದ ಪಾರು ಮಾಡಿ ನಾವು ಪಡೆದಿರುವ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಎಲ್ಲಾ ನಾಗರೀಕ ರಾಷ್ಟ್ರಗಳಿಗೂ ಹೆಚ್ಚು ಕೀರ್ತಿ ತರತಕ್ಕಂಥ ಕಾಲದಲ್ಲಿದ್ದೇವೆ. ಇಂಥಾ ಪರ್ವಕಾಲದಲ್ಲಿ ಒದಗಿದ ವಿಪತ್ತನ್ನು ಎದುರಿಸಲು ಜನರು ಒಗ್ಗಟ್ಟಿನಿಂದ ನಡೆದುಕೊಂಡು ಜನರು ತ್ಯಾಗ ಮಾಡುವುದಕ್ಕೂ ಸೇವೆ ಸಲ್ಲಿಸುವುದಕ್ಕೂ ಅಗತ್ಯವಾದ ಕಾರ್ಯ ನಡೆಯುತ್ತಿದೆ. ಈ ನಮ್ಮ ಭರತಖಂಡದ

---

2. 1962ರ ಚೈನಾ ಯುದ್ಧ ಕುರಿತಂತೆ 3.12.1962ರಂದು ನಡೆದ ಚರ್ಚೆಯಲ್ಲಿ

ಐದು ಸಾವಿರ ವರ್ಷಗಳ ಚರಿತ್ರೆಯಲ್ಲಿ ಮೊಟ್ಟಮೊದಲೇ ಸಾರಿ ಇಂಥ ವಿಪತ್ತು ನಮ್ಮ ರಾಷ್ಟ್ರಕ್ಕೆ ಒದಗಿದೆ. ಕಳೆದ ಎರಡು ಸಾವಿರ ವರ್ಷಗಳಲ್ಲಿ ನಡೆದಂಥ ಯುದ್ಧಗಳು ಸಣ್ಣ ಪುಟ್ಟ ರಾಜ್ಯಗಳ ನಡುವೆ ಸಣ್ಣ ಪುಟ್ಟ ನಾಯಕರುಗಳ ನಡುವೆ ಪಾಳೆಯಗಾರರ ನಡುವೆ ಹೊರಗಿನಿಂದ ಬಂದವರೊಡನೆ ನಡೆದ ಯುದ್ಧಗಳು ಮಾತ್ರ ಆಗಿದ್ದುವು. ಆ ಖಂಡ ಭಾರತದ 46 ಕೋಟಿ ಪ್ರಜೆಗಳಿಗೆ ದ್ರೋಹ ಬಗೆದು, ಮಿತ್ರರಾಷ್ಟ್ರದ ಮೇಲೆ ದಾಳಿ ಮಾಡಿರುವುದು ಚೈನಾಕ್ಕೆ ಕೆಟ್ಟ ಹೆಸರು, ತರತಕ್ಕಂಥಾದು. ಇದೊಂದು ಬ್ಲ್ಯಾಕ್‌ಚಾಪ್ಟರ್ ಎಂದು ಕರೆಯಬಹುದು.

ಸುಮಾರು ಐದು ಸಾವಿರ ವರ್ಷಗಳ ಭಾರತಖಂಡದ ಇತಿಹಾಸದಲ್ಲಿ ಮೊಟ್ಟ ಮೊದಲನೆಯ ಬಾರಿ ಸ್ವತಂತ್ರ್ಯ ಭಾರತ ತನ್ನ ರಾಷ್ಟ್ರದ ಸಮರವನ್ನೂ ಯುದ್ಧಸಮರವನ್ನೂ ಕೈಗೊಳ್ಳತಕ್ಕ ಪ್ರಸಂಗದಲ್ಲಿ ನಾವು ಇದ್ದೇವೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ನೋಡಿದಲ್ಲಿ ಈ ಭರತಖಂಡದಲ್ಲಿ ಪಕ್ಷ ಪರೀಕ್ಷೆ ಆಗಿರತಕ್ಕದ್ದು ಹಿಮವತ್ಪರ್ವತದ ತಪ್ಪಲುಗಳಲ್ಲಿ.

ಹಿಮವತ್ಪರ್ವತ ಸಾಮಾನ್ಯವಾಗಿ ವೇದ ಉಪನಿಷತ್ತುಗಳ ಕಾಲದಿಂದಲೂ ಕೂಡ ಭರತಖಂಡದಲ್ಲಿರುವ ಪ್ರಜಾಸ್ತೋಮಕ್ಕೆ ಅದ್ಯಪವಿತ್ರವಾಗಿರುವ ಪ್ರದೇಶವಾಗಿದೆ. ಈ ಜಗತ್ತಿಗೆ ಸೃಷ್ಟಿಕರ್ತರಾದ ಶಿವಪಾರ್ವತಿಯರ ಲೀಲಾಸ್ಥಾನವೆಂದು ನಮ್ಮ ಜನ ಭಾವಿಸಿಕೊಂಡು ಬಂದಿದ್ದಾರೆ. ಅವರ ಪ್ರಣಯ ಪರೀಕ್ಷೆ ನಡೆದ ಮಹಾಪ್ರಧಾನ ಸ್ಥಾನವೆಂದು ಭಾವಿಸಿಕೊಂಡು ಬಂದಿದ್ದಾರೆ. ಆ ಮಾನಸ ಸರೋವರವಾಗಲಿ, ಕೈಲಾಸವಾಗಲಿ, ಹಿಮವತ್ಪರ್ವತವಾದ ಏಳನೆಯ ಶಿಖರವಾಗಲಿ, ಗೌರಿಶಂಕರವಾಗಲೀ ಇವೆಲ್ಲವು ಭರತ ಖಂಡದ ಪ್ರಜೆಗೆ ಉತ್ತರ ಭಾರತಕ್ಕೆ ಮಾತ್ರವಲ್ಲ, ಪಂಜಾಬಿಗೆ ಮಾತ್ರವಲ್ಲ ಅಸ್ಸಾಮಿಗೆ ಮಾತ್ರವಲ್ಲ, ಗುಜರಾತಿಗಳಿಗೆ ಮಾತ್ರವಲ್ಲ, ಪರಂಗೀಯರಿಗೆ ಮಾತ್ರವಲ್ಲ ದಕ್ಷಿಣದ ಕೊಟ್ಟಕೊನೆಯಲ್ಲಿರತಕ್ಕ ಕೇರಳ, ಕರ್ನಾಟಕ, ತಮಿಳುನಾಡು ಪ್ರಾಂತಗಳಿಗೂ ಕೂಡ ಇದು ಪವಿತ್ರ ಭೂಮಿಯಾಗಿದೆ. ಈ ಪವಿತ್ರ ಭೂಮಿಯಲ್ಲಿ ಭರತಖಂಡದ ಆಳ್ವಿಕೆಯನ್ನು ವಹಿಸಿಕೊಂಡ ಶೌರ್ಯವಂತರಾದ ಅರಸರ ಸತ್ವಪರೀಕ್ಷೆಯಾದದ್ದು ಇಲ್ಲಿಯೇ ಎಂದು ನಮ್ಮ ಚರಿತ್ರೆ ಹೇಳುತ್ತದೆ. ನಮ್ಮ ಇತಿಹಾಸ ಹೇಳುತ್ತದೆ. ನಮ್ಮ ಕಾವ್ಯ ಹೇಳುತ್ತದೆ. ಸಾಹಿತ್ಯ ಹೇಳುತ್ತದೆ. ಈ ಹೊತ್ತು ಭರತಖಂಡದ ಸತ್ವಪರೀಕ್ಷೆ ಸಾಮಾನ್ಯವಾಗಿ ಅಖಂಡವಾದ ರಾಷ್ಟ್ರವಾಗಿರತಕ್ಕ ಸ್ವಾತಂತ್ರ್ಯವನ್ನು ಪಡೆದಿರತಕ್ಕ ಭರತಖಂಡತ ಸತ್ವಪರೀಕ್ಷೆ ಹಿತವತ್ಪರ್ವದ ತಪ್ಪಲೊಳಗೆ ನಡೆಯುತ್ತಿರತಕ್ಕ ಒಂದು ಪರಂಪರೆಯನ್ನು ನಡೆಸಿಕೊಂಡು ಬಂದಿದೆಯೋ ಅನ್ನಿಸುತ್ತದೆ. ಅದೇ ಸಮಯದಲ್ಲಿ ಇದು ವಿಪತ್ತುಗಳ ಕಾಲವಾದರೂ, ಪರ್ವಕಾಲವಾದರೂ ಹಿಂದೆ ಯುಗಯುಗಾಂತರಗಳಲ್ಲಿ ಶತಮಾನಗಳಲ್ಲಿ ಹೀಗೆಯೇ ಬಂದಿದ್ದಾರೆ. ಅವರ ಸತ್ವ ಪರೀಕ್ಷೆಯ ಕಾಲದಲ್ಲಿ ಆತ್ಮೋದ್ಧಾರ ಕಾರ್ಯಗಳನ್ನು ಮಾಡಿ ಕೀರ್ತಿ ಪಡೆದ ಭರತಖಂಡದ ಹಿಮವರ್ತ್ಪತದ ತಪ್ಪಲಲ್ಲಿ ಭಾರತ ಸ್ವತಂತ್ರವಾಗಿರತಕ್ಕ ಭಾರತ, ಈ ಹಿಮವತ್ಪರ್ವತದ ಪ್ರದೇಶದಲ್ಲಿ ನಡೆದಿರತಕ್ಕ ಯುದ್ಧದಲ್ಲಿ ಕೀರ್ತಿಯನ್ನು ವಿಜಯವನ್ನೂ ಪಡೆಯುತ್ತದೆ. ಇದಕ್ಕೆ ಭಾರಿ ಪ್ರಯತ್ನವಾಗಬೇಕು. ಭರತಖಂಡದ ಜನಸ್ತೋಮ, ಆ ಜನರು ತೋರಿಸುತ್ತಿರುವ ಆದರಣ, ಆಸಕ್ತಿ

ಅಭಿಮಾನಗಳು ಸ್ವಾಗತಾರ್ಹವಾಗಿವೆ. ಯಾರನ್ನು ನಮ್ಮ ಮಿತ್ರರೆಂದು ಭಾವಿಸಿದ್ದೆವೋ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅವರನ್ನು ದೂರವಿಡಬೇಕು ಎಂಬ ಪ್ರಯತ್ನಪಡುತ್ತಿದ್ದ ಕಾಲದಲ್ಲಿ ಅಂತರರಾಷ್ಟ್ರೀಯ ಸ್ಥಾನವನ್ನು ಕಲ್ಪನೆಮಾಡಿಕೊಡುವುದಕ್ಕೆ ಯಾವ ರಾಷ್ಟ್ರಕ್ಕಾಗಿ ಭಾರತಪ್ರಯತ್ನ ಮಾಡಿತೋ ಅಂಥ ಚೈನಾ ರಾಷ್ಟ್ರ ಈ ಹೊತ್ತು ಭರತಖಂಡದ ಮೇಲೆ ಗದೆ ಎತ್ತಿದೆ. ಹಿಮವತ್ಪರ್ವತದ ಕಣಿವೆಗಳಲ್ಲಿ ತಪ್ಪಲುಗಳಲ್ಲಿ ಚೀಣಾ ರಾಜ್ಯದ ಸಂತರು ಸಾಧುಗಳು ಸಾವಿರಾರು ವರ್ಷಗಳ ಹಿಂದೆ ಒಂದು ಧರ್ಮ ದೀವಿಗೆಗಾಗಿ ಭರತಖಂಡಕ್ಕೆ ಇದೇ ಮಾರ್ಗವಾಗಿ ಬಂದಿದ್ದಾರೆ. ಲೋಕಕ್ಕೆ ಗುರುವಾದ ಬುದ್ಧನ ಜನ್ಮಸ್ಥಾನಕ್ಕೆ ಬಂದು ನಂದಾದೀವಿಗೆಯನ್ನು ನೋಡಿಕೊಂಡು ಬಂದ ಮೇಲೆ ಈ ಪರ್ವತದ ಪ್ರದೇಶಗಳಲ್ಲಿ ಚೀಣದ ಸಂತರು, ಸಾಧುಗಳು ಭಾರತವನ್ನು ಮಾತೆಯನ್ನಾಗಿ ಪರಿಗ್ರಹ ಮಾಡಿ ಹೊರಟು ಹೋದರೋ ಪವಿತ್ರವನ್ನಾಗಿ ಮಾಡಿಹೋದರೋ ಅಂಥ ಕಡೆ ನೆತ್ತರನ್ನೂ ಸುರಿಸತಕ್ಕ ದುಷ್ಟತಮವನ್ನೂ ಅಸುರೀ ಪ್ರವೃತ್ತಿಯನ್ನೂ ಚೀಣಾ ದೇಶದ ಸಂಬಂಧದ ದೃಷ್ಟಿಯಿಂದ ಇದು ವಿಪರೀತವಾಗಿರತಕ್ಕ ಪರಿಸ್ಥಿತಿ, ಈ ಹೊತ್ತು ಭರತಖಂಡ ಸ್ವಾತಂತ್ರ್ಯವನ್ನು ಉಳಿಸಿಕೊಂಡ ಮಾತ್ರಕ್ಕೆ ನಮ್ಮ ರಾಷ್ಟ್ರದ 16 ಕೋಟಿ ಪ್ರಜೆಗೆ ಸುಖವಾಗಿರುತ್ತದೆಂದಲ್ಲ. ಎಲ್ಲೆಲ್ಲಿ ಪ್ರಜಾಸತ್ತಾತ್ಮಕವಾದ ರಾಜ್ಯಪದ್ಧತಿ ಇದೆಯೋ ಆ ಪ್ರದ್ಧತಿ ಡೆಮಾಕ್ರಸಿ ಅಲ್ಲಿ ಉಳಿಯಬೇಕಾದಿದ್ದರೆ, ಭಾರತ ಯುದ್ಧದಲ್ಲಿ ಗೆಲುವನ್ನು ಪಡೆಯಬೇಕು. ಕೀರ್ತಿಯನ್ನೂ ಪಡೆಯಬೇಕು. ಆಗ ಮಾತ್ರ ಪ್ರಪಂಚದ ಇತರ ಪ್ರದೇಶಗಳಲ್ಲಿ ಪ್ರಜಾಪ್ರಭುತ್ವ ಸ್ಥಿರವಾಗಿ ನಡೆದುಕೊಂಡು ಹೋಗುವುದಕ್ಕೆ ಅವಕಾಶ ದೊರೆಯುತ್ತದೆಂದು ಜನ ತಿಳಿಯಬೇಕು. ಈ ದೃಷ್ಟಿಯಿಂದ ಹೊರಗಿರತಕ್ಕ ರಾಷ್ಟ್ರಗಳು, ಪ್ರಜಾಪ್ರಭುತ್ವದಲ್ಲಿ ನಂಬಿಕೆಯನ್ನು ಹೊಂದಿರತಕ್ಕ ರಾಷ್ಟ್ರಗಳು, ಅಮೇರಿಕದ ಸಂಯುಕ್ತ ಸಂಸ್ಥೆಗಳು, ಫ್ರಾನ್ಸ್, ವೆಸ್ಟ್ ಜರ್ಮನಿ ಯುನೈಟೆಡ್‌ಕಿಂಗಡಮ್ ಭಾರತದ ವಿಷಯದಲ್ಲಿ ವಿಶೇಷವಾದ ಆಸಕ್ತಿಯನ್ನು ಹಿಂದೆ ಹೆಚ್ಚಿಗೆ ತೋರಿಸದೆ ಇದ್ದ ರಾಷ್ಟ್ರಗಳು ಕೂಡ ಪ್ರಜಾಸತ್ತಾತ್ಮಕವಾಗಿರತಕ್ಕ ಪದ್ಧತಿ ಲೋಕದಲ್ಲಿ ಉಳಿಯಬೇಕು ಎನ್ನುವುದಕ್ಕೋಸ್ಕರವಾಗಿ ಭಾರತಕ್ಕೆ ಸಹಾಯವನ್ನು ಮಾಡತಕ್ಕ ಕೆಲಸದಲ್ಲಿ ತೊಡಗಿವೆ. ಇದಕ್ಕೆ ಪಂಡಿತ ಜವಹರ್‌ಲಾಲ್ ನೆಹರೂರವರು ತಮ್ಮ ಕೃತಜ್ಞತೆಯನ್ನು ತೋರಿಸಿದ್ದಾರೆ.

ಇವೊತ್ತು ನಮ್ಮ ದೇಶದಲ್ಲಿ ವಿಶೇಷವಾದ ಕೆಲಸವಾಗಬೇಕಾಗಿದೆ. ಜನರ ಅಭಿಮಾನ ವಿಶೇಷವಾಗಿದೆ. ರಾಷ್ಟ್ರದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಬೇಕು ಎನ್ನುವುದಕ್ಕೆ ಹಳ್ಳಿಹಳ್ಳಿಗಳಲ್ಲಿರುವ ಅಕ್ಷರಸ್ಥಜನ – ಅನಕ್ಷರಸ್ಥ ಜನ, ಶ್ರೀಮಂತರು ಬಡವರು, ವಿದ್ಯಾವಂತರು, ಅವಿದ್ಯಾವಂತರು, ಎಲ್ಲರೂ ಕೂಡ ಏಕ ಮುಖವಾಗಿ ಬಯಸುತ್ತಿದ್ದಾರೆ. ಕಳೆದ ಬಾರಿ ಇಂಡಿಯಾ ದೇಶ ಯುದ್ಧವನ್ನು ಸಾರಿದಾಗ ಅದು ಪರಾಧೀನವಾಗಿತ್ತು. ಇವೊತ್ತು ಅದು ಸ್ವಾತಂತ್ರ್ಯವನ್ನು ಪಡೆದಿದೆ. ಈಗಿನ ಯುದ್ಧ ಭರತ ಖಂಡದ ಪ್ರತಿಯೊಬ್ಬ ಪ್ರಜೆಯೂ ಮಾಡತಕ್ಕ ಯುದ್ಧವಾಗಿದೆ. ಇದಕ್ಕಾಗಿ ಸಮರ ಕ್ಷೇತ್ರಕ್ಕೆ ನುಗ್ಗಿ ಯೋಧರಾಗಿ ನಿಲ್ಲಬೇಕಾಗಿದೆ. ಹಳ್ಳಿಗಳಲ್ಲಿ ನಗರ ಪ್ರದೇಶಗಳಲ್ಲಿ ಜನಜೀವನ ಯೋಗ್ಯವಾಗಿ ನಡೆದುಕೊಂಡು ಹೋಗಿ, ಯುದ್ಧವನ್ನು ಯಶಸ್ವಿಯಾಗಿ ನಡೆಸುವುದಕ್ಕೆ ಸಹಾಯ ಮಾಡತಕ್ಕ ಜನಬೇಕಾಗಿದೆ. ಇವೆಲ್ಲದರ ಜೊತೆಗೆ ಅಂತಶ್ಶತ್ರುಗಳನ್ನು ಮೆಟ್ಟಿ ಈ ಯುದ್ಧವನ್ನು ಗೆಲ್ಲಬೇಕಾಗಿದೆ.

ಹೊರಗಿನ ಶತ್ರುವನ್ನು ಗೆಲ್ಲುವುದು ಸುಲಭ. ಶತ್ರುಗಳು ಯಾರು ಎಂದು ನಮಗೆ ಗೊತ್ತಾಗುತ್ತದೆ. ಮಿತ್ರರ ಹಾಗೆ ವರ್ತಿಸಿ ಶತ್ರುಗಳ ರೀತಿಯಲ್ಲಿ ನಡೆಯತಕ್ಕ ಜನ ಅಲ್ಲಿ ಇಲ್ಲಿ ಇದ್ದ ಪಕ್ಷದಲ್ಲಿ ಅದನ್ನು ಸರ್ಕಾರ ಗಮನಿಸಬೇಕು. ಸಮಾಜ ಗಮನಿಸಬೇಕಾದಂಥ ಕಾಲದಲ್ಲಿದ್ದೇವೆ. ಇಂಥಾ ಅಂತಶ್ಶತ್ರುಗಳು ಕೇವಲ ಒಂದು ರಾಜಕೀಯ ಪಕ್ಷಕ್ಕೆ ಸೇರುವವರು ಮಾತ್ರವಲ್ಲ ಈ ಪರ್ವಕಾಲದಲ್ಲಿ, ವಿಪತ್ಕಾಲದಲ್ಲಿ ದೇಶದಲ್ಲಿ ಹೆಚ್ಚು ಉತ್ಪಾದನೆಯನ್ನು ಯಾರು ಮಾಡುವುದಿಲ್ಲವೋ ಅವರೂ ಶತ್ರುಗಳಾಗುತ್ತಾರೆ. ಯಾರು ಅಪಪ್ರಚಾರ ಕಾರ್ಯಗಳಲ್ಲಿ ನಿರತರಾಗುತ್ತಾರೆಯೋ ಅವರೂ ಶತ್ರುಗಳಾಗುತ್ತಾರೆ. ಸಣ್ಣಪುಟ್ಟ ಕೆಲಸಗಳನ್ನಾದರೂ ಮಾಡಿ ಯುದ್ಧದಲ್ಲಿ ಪಾಲುಗೊಳ್ಳದೆ ಹೋಗುವವರೂ ಶತ್ರುಗಳಾಗುತ್ತಾರೆ. ಯಾರು ಸಮರ ಕ್ಷೇತ್ರಕ್ಕೆ ಹೋಗುವುದಕ್ಕೆ ಅರ್ಹತೆಯನ್ನು ಪಡೆದೂ ಹೋಗುವುದಿಲ್ಲವೋ ಅವರೂ ಶತ್ರುಗಳಾಗುತ್ತಾರೆ. ಇಂಥ ಶತ್ರುಗಳ ಸಂಖ್ಯೆ ವಿಶೇಷ ಕಡಿಮೆ ಮಟ್ಟದಲ್ಲಿರುವುದು ನಿಜ. ಆದರೆ ಅದು ಕೂಡ ಕಡಿಮೆಯಾಗಿ ಏಕ ಮುಖವಾದ ಭಾರತ ಈ ಯುದ್ಧದಲ್ಲಿ ಗೆಲ್ಲಬೇಕಾದ ಅಗತ್ಯ ವಿಶೇಷವಾಗಿದೆ.

ಕಳೆದ ಬಾರಿ ಯುದ್ಧ ನಡೆದಾಗ ಆಗಿನ ಸರ್ಕಾರ ಸಾವಿರಾರು ರೂಪಾಯಿಗಳನ್ನೂ ಕೋಟ್ಯಾಂತರ ರೂಪಾಯಿಗಳನ್ನೂ ವೆಚ್ಚ ಮಾಡಿ ಆಹಾರ ಸಾಮಾಗ್ರಿಗಳನ್ನೂ ತರಿಸಿತು. ಈ ಆಹಾರ ಸಾಮಾಗ್ರಿಗಳನ್ನು ತರಿಸಿ ಸೊಸೈಟಿಗಳ ಮೂಲಕ ಕೆಲವು ಕಡೆ ಬಿಕರಿ ಮಾಡಿತು. ಕೆಲವು ಕಡೆ ವ್ಯಾಪಾರಿಗಳಿಗೆ ಕೊಟ್ಟಿದ್ದು ಅನೇಕ ವ್ಯಾಪಾರಿಗಳು ಯೋಗ್ಯವಾದ ರೀತಿಯಲ್ಲಿ ವರ್ತನೆ ಮಾಡಿಕೊಂಡದ್ದು ನಿಜ. ಈ ಹೊತ್ತು ಆ ಪ್ರಕರಣ, ಪರಿಸ್ಥಿತಿ ಬರುವುದಿಲ್ಲ. ಆ ಹೊತ್ತಿನ ಯುದ್ಧದ ಪ್ರಕರಣವೇ ಬೇರೆ. ಸರ್ಕಾರ ಹಣವನ್ನು ವೆಚ್ಚ ಮಾಡಿ ಆಹಾರ ಸಾಮಗ್ರಿಗಳನ್ನು ಸರ್ಕಾರದ ಮೂಲಕ ಮತ್ತು ಖಾಸಗಿಯವರಿಗೆ ಕೊಟ್ಟು ಅವರ ಮೂಲಕ ಮಾರಾಟ ಮಾಡುವಾಗ ಐದಾರು ರೂಪಾಯಿ ಬೆಲೆ ಬಾಳತಕ್ಕ ಕಡಲೆ, ಕಡಲೆಬೇಳೆ ಇಂತವುಗಳಿಗೆ 60–70 ರೂಪಾಯಿ ಪ್ರಮಾಣದಲ್ಲಿ ತೆಗೆದುಕೊಂಡವರೂ ಇದ್ದರು. ಸಾವಿರಾರು ರೂಪಾಯಿ ಲಕ್ಷಾಂತರ ರೂಪಾಯಿ ಬಡಬಗ್ಗರ ರೊಕ್ಕವನ್ನು ಹೀರುವವರೂ ಇದ್ದಾರು. ಆಹಾರ ಸಾಮಗ್ರಿಗಳನ್ನು ಮಾರಾಟ ಮಾಡಿ ಒಂದಕ್ಕೆ ಎರಡರಷ್ಟು ಸಂಪಾದನೆ ಮಾಡಿ ಹತ್ತು ಸಾವಿರ ರೂಪಾಯಿ, ಲಕ್ಷ ರೂಪಾಯಿ ಕೊಟ್ಟು ಒಂದು ಆಸ್ಪತ್ರೆ, ಒಂದು ಪ್ರಾಥಮಿಕ ಶಾಲೆ, ಒಂದು ಧರ್ಮಛತ್ರ, ಇಂಥವನ್ನು ಕಟ್ಟಿಸಿ, 'ಧರ್ಮ ಪ್ರಕಾಶ' ರಾದವರೂ ಇದ್ದರು. ಅಂಥ ಪರಿಸ್ಥಿತಿ ಬರದ ಹಾಗೆ ನೋಡಿಕೊಳ್ಳಬೇಕಾದ್ದು ಯೋಗ್ಯವೆಂದು ಹೇಳುತ್ತೇನೆ.

ಎಲ್ಲಕ್ಕಿಂತ ಹೆಚ್ಚು ಭರತಖಂಡದ ದಕ್ಷಿಣದಲ್ಲಿರುವ ಸರ್ಕಾರಗಳು ಮತ್ತು ಸಮಾಜ ಮಾಡ ಬೇಕಾದ ಕೊಟ್ಟ ಮೊದಲನೆಯ ಕೆಲಸವೆಂದರೆ ವಿಶೇಷ ದೂರದಲ್ಲಿ ಯುದ್ಧ ನಡೆಯುವ ಕಾಲದಲ್ಲಿ ಅವರಿಗೆ ಬೇಕಾದ ಸಲಕರಣೆ, ಸಾಮಗ್ರಿಗಳನ್ನೂ ವಸ್ತು ಸಮುದಾಯವನ್ನೂ, ಬಟ್ಟೆ ಬರೆಗಳನ್ನು ಒದಗಿಸಿಕೊಡತಕ್ಕದ್ದು ಯೋಗ್ಯ. ಎಲ್ಲಕ್ಕಿಂತ ಪ್ರಧಾನವಾಗಿ ಆಹಾರದ ಕ್ಷೋಭೆ ಮಾತ್ರ ಯಾವ ಕಾಲದಲ್ಲಿಯೂ ಉಂಟಾಗಬಾರದು. ಹೊಟ್ಟೆಗಿಲ್ಲದೆ, ಬಟ್ಟೆ ಬರೆಯಿಲ್ಲದೆ ಯುದ್ಧ ಮಾಡುವುದಕ್ಕೆ ಯಾರೂ ಸಿದ್ಧವಿಲ್ಲ. ಯೋಧನಿಗೆ ಹೊಟ್ಟೆ ತುಂಬ ಹಾಕಬೇಕು. ಈ ಯುದ್ಧ ಪರಿಸ್ಥಿತಿಗೆ ನ್ಯಾಯವಾಗಿ

ಹೊಂದಿಕೊಂಡು ಹೋಗತಕ್ಕ ಕೆಲಸವನ್ನು ನೋಡಿಕೊಳ್ಳುವುದಕ್ಕೆ ಆಹಾರದ ಉದ್ಘಾಟನೆಯನ್ನು ವಿಶೇಷವಾಗಿ ಮಾಡಬೇಕಾದ್ದು ಅಗತ್ಯ.

ದೊಡ್ಡ ದೊಡ್ಡ ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದಕ್ಕೆ ಬದಲಾಗಿ, ಸಣ್ಣ ಮಟ್ಟ ನೀರಾವರಿ ಯೋಜನೆಗಳನ್ನು ಕೈಗೊಳ್ಳಬೇಕಾದ್ದು ಅತ್ಯಂತ ಅವಶ್ಯಕ. ಇದರಿಂದ ವ್ಯವಸಾಯ ಮಾಡಿ ಬೆಳೆಗಳನ್ನು ಮಾಡಬೇಕಾದುದು ಅಗತ್ಯ. ಇಂತಹ ಅತ್ಯಗತ್ಯವಾದ ಕೆಲಸವನ್ನು ಸರಕಾರ ಮಾಡಿಕೊಳ್ಳುತ್ತಾರೆಂದು ನಾನು ನಂಬಿದ್ದೇನೆ.

ಎರಡನೆಯದು ಸರಕಾರ ಮತ್ತು ಸಮಾಜದ ಜನ ಈ ತುರ್ತು ಪರಿಸ್ಥಿತಿಯಲ್ಲಿ ಒಂದು ರೀತಿಯಾದ ಸಂಯಮದ ಜೀವನ ನಡೆಸಬೇಕಾದ್ದು ಅಗತ್ಯ. ಯಾರು ಜನನಾಯಕರು ಆಗಿರುತ್ತಾರೋ ಅಂತಹ ಜನನಾಯಕರು ತಮ್ಮ ಜೀವನವನ್ನು ಸಾಮಾನ್ಯ ಜನರ ಜೀವನದಂತೆ ಅನುಷ್ಠಾನ ಮಾಡಬೇಕು. ಯಾವುದೋ ಒಂದು ರೀತಿಯ ಮತ್ತಿನಿಂದ ಜೀವನ ನಡೆಸುತ್ತಾರೋ ಅಂತಹ ಜೀವನ ನಡೆಸುವುದನ್ನು ಬಿಟ್ಟು ಸಾಮಾನ್ಯ ಜನತೆಯಂತೆ ಜೀವನ ನಡೆಸುವ ಏರ್ಪಾಡು ಮಾಡಬೇಕು.

ಜೀವನವನ್ನು ವೃತ್ತಿಯ ನಡವಳಿಕೆಯಂತೆ ನಡೆಸುವುದು ನ್ಯಾಯ. ಈ ರೀತಿಯಾದ ಜೀವನವನ್ನು ನಡೆಸಬೇಕಾದ್ದು ನ್ಯಾಯ. ಈ ರೀತಿಯಾದ ಜೀವನವನ್ನು ನಡೆಸಬೇಕಾದ್ದು ಜನರ ಮತ್ತು ನಾಯಕರ ಆದ್ಯಕರ್ತವ್ಯ ಎಂದು ನನಗೆ ಭಾಸವಾಗುತ್ತದೆ. ಕೇವಲ ಹತ್ತೂವರೆ ಗಂಟೆಯಿಂದ ಆರುವರೆ ಗಂಟೆಗಳ ಪ್ರತಿ ಸರಕಾರದ ಕಚೇರಿಗಳು ಹೆಚ್ಚು ಕೆಲಸ ಮಾಡುತ್ತವೆ ಎಂದು ಈಚೆಗೆ ಮಾಡಿದ್ದಾರೆ. ನನಗೂ ಕೂಡ ನಾಲ್ಕಾರು ಸಂಸ್ಥೆಗಳಲ್ಲಿ ಕೆಲಸ ಮಾಡಿರುವ ಅನುಭವವಿದೆ. ನಮ್ಮ ಸಂಸ್ಥೆಯಲ್ಲಿ ಜವಾನರಿಲ್ಲದೆ ಕೆಲಸ ನಡೆಸಿದ್ದೇನೆ. ಗುಮಾಸ್ತರಿಲ್ಲದೆ ನಮ್ಮ ತಾಲ್ಲೂಕುಗಳಲ್ಲಿರುವ ಇತರ ಟೀಚರುಗಳ ಸಹಾಯದಿಂದ ಸಂಸ್ಥೆಯ ಕೆಲಸಗಳನ್ನು ಮಾಡಿಕೊಂಡು ಬಂದಿದ್ದೇವೆ. ಈ ಹೊತ್ತು ಹಣದ ಅವಶ್ಯಕತೆ ಹೆಚ್ಚಾಗಿರುವ ಕಡೆಗೆ ಹೆಚ್ಚಿಗೆ ಹಣವನ್ನು ಉಪಯೋಗಿಸುವುದನ್ನು ಬಿಟ್ಟು ಹೆಚ್ಚು ಹೆಚ್ಚಾಗಿ ಗುಮಾಸ್ತರುಗಳನ್ನು ನೇಮಕ ಮಾಡುವುದನ್ನು ಬಿಟ್ಟು ಇರುವುದರಿಂದಲೇ ಹೆಚ್ಚಿನ ಕೆಲಸಗಳಾಗುವಂತೆ ಮಾಡಬಹುದು. ಆದುದರಿಂದ ಡಿಪಾರ್ಟುಮೆಂಟುಗಳಲ್ಲಿ ಜನಗಳನ್ನು ಹೆಚ್ಚು ಮಾಡದೇ ಕೆಲಸ ಕೆಲವು ಗಂಟೆಗಳ ಕಾಲ ಎಂದು 10–30 ಗಂಟೆಯಿಂದ 6–30 ಗಂಟೆಯವರೆಗೆ ಎಂದು ಈಗ ಮಾಡಿರುವುದರಿಂದ ಪ್ರಾಯಶಃ ಇದರಿಂದ ಜನರಿಗೆ ಹಿಂಸೆಯಾಗಬಹುದು. ಈ ಬೆಂಗಳೂರು ಸುಮಾರು ಎಂಟು–ಹತ್ತು ಮೈಲಿಗಳನ್ನು ದೂರದಿಂದ ಬಂದು ಇಲ್ಲಿನ ಕಚೇರಿಗಳಲ್ಲಿ ಕೆಲಸ ಮಾಡಿಕೊಂಡು ರಾತ್ರಿ ಒಂಭತ್ತು ಗಂಟೆಗೆ ಹೋಗಿ ಸೇರುವ ಮಹನೀಯರೂ ಇರುತ್ತಾರೆ. ಎನ್ನುವುದನ್ನು ನಾವೆಲ್ಲರೂ ಆಲೋಚನೆ ಮಾಡಬಹುದಾಗಿತ್ತು. ಯಾವ ಹುದ್ದೆಯಲ್ಲೇ ಇರಲಿ ಕೊನೆಯ ಪಕ್ಷ ಐದು ಗಂಟೆಗಳಷ್ಟು ಕಾಲ ಮನಃ ಪೂರ್ವಕವಾಗಿ ಕೆಲಸ ಮಾಡಿದರೆ ಬೇಕಾದಷ್ಟು ಕೆಲಸಗಳನ್ನು ಮಾಡಿಕೊಳ್ಳಬಹುದು. ಆರು ಗಂಟೆಗಳಷ್ಟು ಹೆಚ್ಚು ಕಾಲ ಕೆಲಸ ಮಾಡಬೇಕೆಂದು ನಿಗಧಿ ಮಾಡಿರುವುದರಿಂದ ಹೆಚ್ಚು ಕೆಲಸವಾಗುತ್ತದೆ ಎಂದು ಭಾವನೆ ಮಾಡಿಕೊಳ್ಳಬಾರದು.

ಎರಡನೆಯದು ನಮ್ಮ ಸಮಾಜದ ನಾಯಕರು ಸಂಯಮದ ಜೀವನವನ್ನು ನಡೆಸಿ ತಮ್ಮ ಇಲಾಖೆಗಳನ್ನು ನಡೆಸುವ ಸಿಬ್ಬಂದಿಯವರೂ ಯಶಸ್ವಿಯಾಗಿ ಕಾರ್ಯಗಳನ್ನು ನಡೆಸಲು ತಕ್ಕ ಯೋಜನೆಯನ್ನು ಹಾಕಿಕೊಳ್ಳಬೇಕು. ಇದರಿಂದ ದೇಶಕ್ಕೆ ವೆಚ್ಚವಾಗುವ ಕೋಟಿ ರೂಪಾಯಿಗಳಲ್ಲಿ ಹೆಚ್ಚಿನ ಉಳಿತಾಯವಾಗದೇ ಹೋದರೂ ಜನರ ಮನಸ್ಸಿನ ಮೇಲೆ ಇದು ವಿಶೇಷವಾಗಿ ಪರಿಣಾಮವಾಗುತ್ತದೆ. ಸಂಯಮ ಜೀವನವನ್ನೂ ಮಾಡುವಂತವರ ಮಾತು ಮುತ್ತಿನಂತಿರುತ್ತದೆ. ನಮ್ಮ ಜನರು ಧರ್ಮ ಬುದ್ಧಿಯಿಂದ ಕೂಡಿರುವವರು. ನಮ್ಮ ಮಂತ್ರಿಗಳಾದವರು ಈ ರೀತಿಯಾಗಿ ನಿಷ್ಠವಂತರಾಗಿ ಸಂಯಮ ಜೀವನವನ್ನು ತೃಪ್ತಿಯಿಂದ ನಡೆಸಿಕೊಂಡು ಹೋಗುವಂತೆ ಮಾಡಬೇಕು.

ಇನ್ನು ಎರಡು ಮಾತುಗಳನ್ನು ಮಹಿಳಾ ಪ್ರತಿನಿಧಿಯಾಗಿ ತಾವು ಈ ಸಭೆಯ ಉಪಾಧ್ಯಕ್ಷರಾಗಿರುವುದರಿಂದ ಈ ಸಮಯದಲ್ಲಿ ಹೇಳಲು ಬಹಳ ಸಂತೋಷವನ್ನುಂಟುಮಾಡುತ್ತದೆ. ನಮ್ಮ ದೇಶದಲ್ಲಿ ಅನಾದಿಕಾಲದಿಂದಲೂ ಮಹಿಳೆಯರು ಬಹಳ ಚೆನ್ನಾಗಿ ಕೆಲಸ ಮಾಡಿದ್ದಾರೆ. ಈಗ ಇಂತಹ ಹೆಂಗಸರಿಂದ ನಮ್ಮ ರಾಷ್ಟದ ಕೆಲಸ ನಡೆಯಬೇಕಾಗಿದೆ. ಸ್ವಾತಂತ್ರ್ಯದ ಕೆಲಸವನ್ನು ಉಳಿಸಬೇಕಾಗಿರುವ ಈ ಕಾಲದಲ್ಲಿ ಮನೆಯ ಮಾನ, ಕುಲ ಮಾನ, ಊರಿನ ಮಾನ, ಇದನ್ನು ಉಳಿಸಬೇಕಾದರೆ ನಮ್ಮ ಹೆಂಗಸರು ಸಣ್ಣ ಪುಟ್ಟ ದೇಹ ತ್ಯಾಗ ಮಾಡುವುದಕ್ಕೆ ತಮ್ಮ ಸ್ಫೂರ್ತಿಯನ್ನು ತೋರುವುದು ಅವಶ್ಯಕ. ಅಂತಹ ದೊಡ್ಡ ಕೆಲಸವೆಂದರೆ ಅವರು ವೀರ ಪತ್ನಿಯರಾಗಿ ತಮ್ಮ ಗಂಡಂದಿರನ್ನು ಯುದ್ಧ ಭೂಮಿಗೆ ಕಳುಹಿಸಿಕೊಡಬೇಕು. ತಮ್ಮ ಮಕ್ಕಳನ್ನು ದೇಶ ಸೇವೆಗಾಗಿ ಯುದ್ಧಕ್ಕಾಗಿ ಕಳುಹಿಸುವ ಪ್ರಯತ್ನ ಮಾಡಬೇಕು. ಇದಕ್ಕಾಗಿ ತನುಮನಧನಗಳನ್ನು ಕೊಟ್ಟು ಸಹಾಯ ಮಾಡಬೇಕೆಂದು ನಿರ್ಣಯವಾಡಿದ್ದಾರೆ. ಈ ರೀತಿ ಮಾಡಲು ನಮ್ಮ ದೇಶದ ಹೆಂಗಸರು ಮಾಡಬೇಕಾದ ದೊಡ್ಡ ಕೆಲಸ ಎಂದರೆ, ಅವರು ವೀರ ಪತ್ನಿಯರಾಗಿ ತಮ್ಮ ಗಂಡಂದಿರನ್ನು ಯುದ್ಧಕ್ಕಾಗಿ ಕಳುಹಿಸಲು ರಿಕ್ರೂಟುಮೆಂಟು ಮಾಡಿಕೊಳ್ಳಲು ಕಳುಹಿಸಬೇಕು. ಆ ರೀತಿಯಾಗಿ ಹೆಂಗಸರು ಮಾಡುವುದನ್ನು ತಾವು ಒಪ್ಪಿಕೊಳ್ಳುತ್ತೀರೆಂದು ನಂಬುತ್ತೇನೆ. ಇದರ ಪರಿಚಯ ತಮಗಿದೆ ಎಂದು ಹೇಳುತ್ತಿದ್ದೇನೆ.

ಇನ್ನೊಂದು ವಿದ್ಯಾಭ್ಯಾಸಕ್ಕೆ ಸಂಬಂಧಪಟ್ಟಂತೆ ಮನವಿ ಮಾಡಿಕೊಳ್ಳುವುದೇನೆಂದರೆ, ಭರತಖಂಡದ ಇಂತಹ ವಿಪತ್ಕಾಲದಲ್ಲಿ ಇಂತಹ ವಿಶೇಷ ಪರಿಸ್ಥಿತಿಯಲ್ಲಿ ಶಾಲಾ ಕಾಲೇಜುಗಳಲ್ಲಿ ಧೈರ್ಯವನ್ನು ತರುವಂತಹ ಶಿಕ್ಷಣವನ್ನು ಆಚರಣೆಗೆ ತರಬೇಕು. ಈಗಿರುವ ವಿದ್ಯಾಶಾಲೆಗಳಲ್ಲಿ ಕೆಲಸ ಕಾರ್ಯಗಳನ್ನು ಸುಸೂತ್ರವಾಗಿ ನಿಷ್ಠೆಯಿಂದ ತರಬೇತಿ ಕೊಟ್ಟು ಸಹಾಯವಾಗುವಂತಹ ಶಿಕ್ಷಣ ಕೊಡಬೇಕು. ಈಗ ಸುಮಾರು ಇಪ್ಪತ್ತು ಗಂಟೆಗಳಷ್ಟು ಕೆಲಸ ಮಾಡುವಾಗ ಸುಮಾರು ಐದು ಘಂಟೆಗಳಷ್ಟು ಕಾಲವನ್ನು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ದೈಹಿಕ ಶಿಕ್ಷಣವನ್ನು ಕೊಡತಕ್ಕದ್ದು ಅಗತ್ಯ. ಜನಗಳಿಗೆ ಯಾವ ರೀತಿ ಯಾದ ಶಿಕ್ಷಣವನ್ನು ಕೊಡಬೇಕೆಂದು ತಿಳಿಸತಕ್ಕದ್ದು ಅತ್ಯವಶ್ಯಕ. ಶಾಲೆ

ಕಾಲೇಜುಗಳಲ್ಲಿ ಶಿಸ್ತಿನ ಶಿಕ್ಷಣದ ಪ್ರಚಾರವನ್ನು ಚೆನ್ನಾಗಿ ಮನದಟ್ಟಾಗುವಂತೆ ಮಾಡಿ ಜನಗಳ ಮನಸ್ಸಿನ ಮೇಲೆ ಬಿಸಿ ಏರುವಂತೆ ಪರಿಣಾಮ ಮಾಡಬೇಕು. ಈಗ ಕಾಲೇಜುಗಳಲ್ಲಿ ಎನ್.ಸಿ.ಸಿ. ಎಂದು ಮಾಡಿದ್ದಾರೆ. ಇದರಲ್ಲಿ ಜೂನಿಯರ್ ಎನ್.ಸಿ.ಸಿ. ಮತ್ತು ಸೀನಿಯರ್ ಎನ್.ಸಿ.ಸಿ. ಎಂದು ವಯಃ ಪ್ರಮಾಣದ ಮೇಲೆ ಮಾಡಿದ್ದಾರೆ. ಎಲ್ಲ ಹುಡುಗರೂ ಇದಕ್ಕೆ ಸೇರತಕ್ಕದ್ದು ಅವಶ್ಯಕ. ನಮ್ಮ ಮೈಸೂರು ರಾಜ್ಯದ ಯೂನಿವರ್ಸಿಟಿಗಳಲ್ಲಿ ಸುಮಾರು ನಲವತ್ತು ಸಾವಿರ ವಿದ್ಯಾರ್ಥಿಗಳಿದ್ದಾರೆ. ಇದರಲ್ಲಿ ಸುಮಾರು ಹದಿನೈದು ಸಾವಿರದಷ್ಟು ಜನರೂ ಸೇರಿರಬಹುದು. ಆದರೆ ಇನ್ನುಳಿದಿರುವ ಸುಮಾರು 35000 ವಿದ್ಯಾರ್ಥಿಗಳಿಗೆ ಟ್ರೈನಿಂಗು ಕೊಡುವಂತೆ ಹೇಳಿದ್ದಾರೆ. ಆದರೆ ಎಲ್ಲಿ ಇಷ್ಟು ಜನಕ್ಕೂ ಟ್ರೈನಿಂಗು ಕೊಡುತ್ತಾರೆನ್ನುವುದು ಗೊತ್ತಾಗುತ್ತಿಲ್ಲ. ಆದರೆ ಈಗೇನೋ ಎಲ್ಲ ವಿದ್ಯಾರ್ಥಿಗಳೂ ಟ್ರೈನಿಂಗನ್ನು ಪಡೆಯಲು ಸಿದ್ಧರಾಗಿದ್ದಾರೆ. ಆದರೆ ಇದರಲ್ಲಿ ಎನ್.ಸಿ.ಸಿ. ಆಫೀಸರ್ಸ್‌ಗಳಾಗಿರುವವರನ್ನು ಯುದ್ಧಕ್ಕಾಗಿ ಕಳುಹಿಸಿದ್ದಾರೆ. ಉಳಿದಿರುವವರಿಗೆ ಶಿಕ್ಷಣದ ಏರ್ಪಾಡು ಇನ್ನೂ ನಡೆದಿಲ್ಲ. ನನಗನಿಸುವುದು ಎನ್.ಸಿ.ಸಿ ಆಫೀಸರುಗಳು ತರಬೇತಿ ನೀಡಲು ಸಾಕಷ್ಟು ಸಂಖ್ಯೆಯ ಪ್ರಮಾಣದಲ್ಲಿಲ್ಲ. ಅದರಿಂದ ಈಗ ತೊಂದರೆಯಾಗುತ್ತಿದೆ ಎಂದು ತೋರುತ್ತದೆ. ನನ್ನ ಅಭಿಪ್ರಾಯ. ಸೀನಿಯರು ಎನ್.ಸಿ.ಸಿ. ಆಫೀಸರುಗಳಲ್ಲಿ ಒಂದು ವರ್ಷ, ಎರಡು ವರ್ಷ ಮೂರು ವರ್ಷ ತರಬೇತಿ ಪಡೆದಿರುವ ಅಧಿಕಾರಿಗಳಿದ್ದಾರೆ. ಅವರುಗಳಲ್ಲಿ ಕೆಲವರನ್ನು ಚುನಾವಣೆ ಮಾಡಿ ಯೋಗ್ಯರಾದವರನ್ನು ನೇಮಿಸಿ ಶಿಕ್ಷಣವನ್ನು ಕೊಡಿಸುವಂತೆ ಮಾಡುವುದು ಅಗತ್ಯ. ಇದರಿಂದ ಎನ್.ಸಿ.ಸಿ ಶಿಕ್ಷಣದ ಕೊರತೆಯೂ ನೀಗುತ್ತದೆಂದು ನಾನು ನಂಬುತ್ತೇನೆ. ಇದರಿಂದ ಹೆಚ್ಚಿನ ಹುಡುಗರಿಗೂ ಶಿಕ್ಷಣ ಹೊಂದಲು ಸರಿಯಾಗುತ್ತದೆಂದು ನಾನು ಭಾವಿಸುತ್ತೇನೆ.

ಒಂದು ಅಭಿಪ್ರಾಯವನ್ನು ಈಗ ತಾನೇ ಮಾತನಾಡಿದ ಶ್ರೀಮಾನ್ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು ಹೇಳಿದ್ದರು. ರೈಫಲ್ಲುಗಳನ್ನು ಸಾಮಾನ್ಯ ಜನ ಹಿಡಿದು ಕೊಳ್ಳುವುದಕ್ಕೆ ಬರದಿದ್ದರೆ ಒಂದು ಕೋಲನ್ನು ಹಿಡಿದರೂ ಹಿಂದಿನ ಕಾಲದಲ್ಲಿ ನಡೆಯುತ್ತಿದ್ದಂತಹ ಯುದ್ಧದ ಕಾಲ ಈಗಿಲ್ಲ. ಹಿಂದೆ ಕೇವಲ ವೈದಿಕ ಆಚಾರ್ಯರುಗಳು ಮಂತ್ರವನ್ನು ಉಚ್ಚರಿಸಿದ್ದಂತೆ ಹಿಂದೆ ರಾಮನ ಕಾಲದಲ್ಲಿ ಬಕಾಸುರರ ಮೇಲೆ ಯುದ್ಧ ಮಾಡಿದಂತಹ ಕಾಲದ ಯುದ್ಧ ಇದಲ್ಲ. ಆದರೆ ಈಗಿನ ಯುದ್ಧ ಅಮೇರಿಕಾದಲ್ಲಿ ಇಂಗ್ಲೆಂಡಿನಲ್ಲಿ, ಫ್ರಾನ್ಸಿನಲ್ಲಿ ನಡೆಯುತ್ತಿರುವುದು ಅಣು ಯುಗದ ಯುದ್ಧ ಇಂತಹ ಯುದ್ಧದಲ್ಲಿ ಶಸ್ತ್ರಾಸ್ತ್ರಗಳನ್ನು ಪಡೆಯುವುದಕ್ಕಾಗಿ ಈ ಹೊತ್ತು ಚಿನ್ನ ಬೇಕಾಗಿರುವುದರಿಂದ ಈ ಪರಿಸ್ಥಿತಿ ಬಂದಿದೆ.

ಈ ಆರ್ಥಿಕ ವಿನಿಮಯ ಪಡೆಯುವುದಕ್ಕೋಸ್ಕರವೇ ಜನ ಇದನ್ನು ತ್ಯಾಗ ಮಾಡಬೇಕು. ನಮ್ಮಲ್ಲಿ ಚಿನ್ನದಲ್ಲಿ ಹೆಚ್ಚು ಲಾಭ ದರಿದ್ರರಾಗಿದ್ದರೂ, ಹಣ ಚಿನ್ನ ಇರತಕ್ಕಂಥ ಸ್ಥಳಗಳಿವೆ. ನಮ್ಮ ರಾಷ್ಟ್ರದಲ್ಲಿ ರಾಜ್ಯದಲ್ಲಿ ಅವುಗಳನ್ನು ಕಡ್ಡಾಯವಾಗಿ ವಸೂಲು ಮಾಡುವುದಕ್ಕೆ ಪ್ರಯತ್ನ ನಡೆಯುತ್ತಾ ಇಲ್ಲ. ಈ ಯುದ್ಧ ಒಂದು ಸರ್ಕಾರದ ಯುದ್ಧವಲ್ಲ; ಇದು ಇಡೀ ರಾಷ್ಟ್ರದ, ಇಡೀ ಜನತೆಯ ಯುದ್ಧ, ವ್ಯಕ್ತಿಷಃ ಸಂಸ್ಥೆಯ ಜನತೆಯ ಯುದ್ಧ. ಅವರೇ ಮುಂದೆ ಬಂದು ತಕ್ಕ ಕಾರ್ಯಕ್ರಮಗಳನ್ನು

ಕೈಗೊಳ್ಳಬೇಕು. ಪ್ರಜಾಸತ್ತಾತ್ಮಕ ಪದ್ಧತಿ ಏನಿದೆ ಅದರಿಂದ, ಈ ಹೊತ್ತು ಕಡ್ಡಾಯ ಬಂದಿಲ್ಲ, ಕಡ್ಡಾಯ ಇಲ್ಲದೇನೆ ಜನ ಕೊಡುವುದು ಬಹಳ ಪರಿಣಾಮಕಾರಿ ಇದೆ. ಯಾವ ಹೊತ್ತು ಕೊಡುವುದಿಲ್ಲವೋ, ಆ ಹೊತ್ತು ಸರ್ಕಾರ ಎಲ್ಲೆಲ್ಲಿ ಹಣ, ಚಿನ್ನ ಇದೆ, ಎಲ್ಲೆಲ್ಲಿ ಸ್ವಾರ್ಥ ವರ್ಗದ ಜನರಿದ್ದಾರೆ, ಎಲ್ಲೆಲ್ಲಿ ಗೌರವವನ್ನು ಉಳಿಸುವುದಕ್ಕೆ ಬೇಕಾಗಿರತಕ್ಕಂಥ ಸಾಮಾಗ್ರಿ ಇದೆ. ಅದನ್ನೆಲ್ಲವನ್ನು, ಸರ್ವಸ್ವವನ್ನು ಪಡೆಯಬೇಕಾದುದು ಅಗತ್ಯ. ಅದನ್ನು ಕಡ್ಡಾಯವಾಗಿ ಪಡೆಯುವಂತೆ ಮಾಡಬಾರದು. ತಾವಾಗಿಯೇ ಕೊಡದಿದ್ದರೆ ಅಂತಹವರಿಂದ ಪಡೆಯಲು ಸರ್ಕಾರ ಕ್ರಮ ತೆಗೆದುಕೊಳ್ಳುವುದೆಂದು ನೆನಪಿನಲ್ಲಿಡಬೇಕು.

ಈ ನಿರ್ಣಯದ ಮೇಲೆ ಹೆಚ್ಚು ಮಾತನಾಡಬೇಕಾದುದು ಇಲ್ಲ. ಈ ನಿರ್ಣಯದಲ್ಲಿ ಮುಖ್ಯವಾಗಿ ಅಡಕವಾಗಿರತಕ್ಕಂಥ ಅಂಶಗಳು ಎರಡು, ಒಂದು ಈ ಯುದ್ಧವನ್ನು ಗೆದ್ದು ದುರಾಕ್ರಮಣ ನಡೆಸಿರತಕ್ಕಂಥ ಶತ್ರುವನ್ನು ಹಿಂದಕ್ಕೆ ಅಟ್ಟಿ ಭರತ ಖಂಡದ ಸ್ವಾತಂತ್ರ್ಯವನ್ನು ಉಳಿಸಿ ಈ ಪಾವಿತ್ರವನ್ನು ಉಳಿಸತಕ್ಕಂಥಾದ್ದು, ಮತ್ತು ಯಾವ ಯಾವ ಕೆಲಸವನ್ನು ಕೇಂದ್ರ ಸರ್ಕಾರ ಮಾಡುತ್ತದೆ ಅದಕ್ಕೆ ಬೆಂಬಲ ಸೂಚಿಸುವುದು. ಮತ್ತು ಎಲ್ಲರಿಗೂ ಅತ್ಯಂತ ಪ್ರಿಯರಾಗಿರತಕ್ಕ ಪ್ರಧಾನಿ ಜವಹರ್‌ಲಾಲ್ ನೆಹರೂರವರ ಹಿಂದೆ ಜನರಿದ್ದಾರೆ ಅನ್ನತಕ್ಕಂಥಾದ್ದು ಒಂದು. ಎರಡನೆಯದಾಗಿ ಯುದ್ಧ ಗೆಲ್ಲುವುದಕ್ಕೆ ಎಲ್ಲ ವರ್ಗಗಳೂ ಕೂಡ, ಪಕ್ಷಗಳೂ ಕೂಡ ಅಲ್ಲಿ ಮತ ಕುಲ ಬಣಗಳಿಗೆ ಸೇರಿರತಕ್ಕಂಥ ಜನ ತಮ್ಮ ಸರ್ವತ್ಯಾಗವನ್ನು ಮಾಡುತ್ತೇವೆಂದು ಒಂದು ಪ್ರತಿಜ್ಞೆ, ಪಣಸ್ವೀಕಾರ, ಮಂತ್ರೋಚ್ಚಾರಣೆ ಮಾಡುವುದು. ಇದು ಅರ್ಥವಿಲ್ಲದ ಮಂತ್ರೋಚ್ಚಾರಣೆ ಮಾಡಿದ ಹಾಗಾಗ ಕೂಡದು; ಅರ್ಥವತ್ತಾಗಿ ಅದನ್ನು ತಿಳಿದು ಕಾರ್ಯದಲ್ಲಿ ಜೀವನವನ್ನು ನಡೆಸಿಕೊಂಡು ಬರತಕ್ಕಂಥ ಮಂತ್ರದ ಉಚ್ಚಾರಣೆಯಾಗಿರಬೇಕು. 100 ರೂಪಾಯಿಗಳನ್ನು ಕೊಡುವುದಕ್ಕೆ ಶಕ್ತಿ ಇರುವವರು, 101 ರೂಪಾಯಿಗಳನ್ನು ಕೊಡಬೇಕಾದುದು ಅಗತ್ಯ. ಅದೇ ರೀತಿ 10000 ರೂಪಾಯಿ ಕೊಡಲು ಶಕ್ತಿ ಇರುವವರು 10100 ರೂಪಾಯಿ ಕೊಡಬೇಕಾದುದು ಅಗತ್ಯ. ಒಬ್ಬ ಬಡವ, ಭಿಕಾರಿ ಕಾರ್ಮಿಕ, ಕೂಲಿ, ತನ್ನ ಎರಡು ದಿವಸದ ಜೀವನವನ್ನು ಸ್ವಲ್ಪ ಮುಗ್ಗಟ್ಟಿನಿಂದ ನಡೆಸಿ, ಎರಡು ದಿವಸಗಳ ದುಡಿತದ ಹಣವನ್ನು ರಕ್ಷಣಾ ನಿಧಿಗೆ ಕೊಟ್ಟ ಪಕ್ಷದಲ್ಲಿ ಅವನು ಮಾಡತಕ್ಕಂಥ ಸೇವೆ ತೋರಿಸತಕ್ಕಂಥ ರಾಷ್ಟ್ರ ಪ್ರೇಮ, ಲಕ್ಷಾಂತರ ರೂಪಾಯಿಗಳನ್ನು ಪಡೆಯುತ್ತಾ ಇರತಕ್ಕಂಥವರು, 10 ಲಕ್ಷ ರೂಪಾಯಿಗಳನ್ನು ಕೊಟ್ಟದ್ದಕ್ಕಿಂತ ಹೆಚ್ಚು ಎಂದು ಭಾವಿಸಿಕೊಳ್ಳಬೇಕು. ಈ ದೃಷ್ಟಿಯಿಂದ ನಿರ್ಬಂಧವಿಲ್ಲದೆ ಎಲ್ಲ ಜನರ ಬಳಿಗೂ ಹೋಗುತ್ತಿರುವುದು ಹಣ ತೆಗೆದುಕೊಳ್ಳುತ್ತಿರುವುದು, ಹೇಗೆ ಶ್ಲಾಘನೀಯವೋ ಹಾಗೆಯೇ ಯುದ್ಧ ಮುಗಿಯುವವರೆಗೂ ಜನತೆಯಲ್ಲಿ ಇದೇ ಹುಮ್ಮಸ್ಸನ್ನು ನಿಲ್ಲಿಸಿ ಕ್ಷಾತ್ರಪ್ರವೃತ್ತಿಯನ್ನು ನಿಲ್ಲಿಸಿ, ಇದೇ ವಿಧವಾದ ರಾಷ್ಟ್ರ ಪ್ರೇಮ ಉಕ್ಕುವ ಹಾಗೆ ಮಾಡತಕ್ಕಂಥ ಕೆಲಸ. ಈ ಮಹಾ ಸಭೆಯ ಸದಸ್ಯರ್‍ಯಾರಿದ್ದಾರೋ ಅಂಥವರ ಕೆಲಸವೆಂದು ತಮ್ಮ ಮೂಲಕ ಈ ಸಭೆಯ ಮಾನ್ಯ ಸದಸ್ಯರಲ್ಲಿ ವಿಜ್ಞಾಪನೆ ಮಾಡಿಕೊಳ್ಳುತ್ತೇನೆ. ಅಪಪ್ರಚಾರಗಳಿಂದಾಗಲಿ ಅಥವಾ ಚೀಣ ಆಗಾಗ್ಗೆ ಸಲ್ಲಿಸತಕ್ಕಂಥ ನಿಯಮಗಳಿಂದಾಗಲಿ, ಘೋಷಿಸತಕ್ಕಂಥ ಯುದ್ಧ ಸಂಭವದಿಂದಾಗಲಿ ಜನ ಹಿಂದಕ್ಕೆ ಹೋಗಬಾರದು. ರಾಷ್ಟ್ರೀಯ ರಕ್ಷಣೆ ಕಾರ್ಯ ಒಂದು ದಿವಸದ್ದು ಅಲ್ಲ. ಒಂದು ತಿಂಗಳದು ಅಲ್ಲ, ಒಂದು ವರ್ಷದ್ದು ಅಲ್ಲ, ಈ ಹೊತ್ತು

ಶಾಂತಿ ಪ್ರಿಯವಾಗಿರತಕ್ಕಂಥ ಸ್ವತಂತ್ರ ಭಾರತಕ್ಕೆ ಒಂದು ವೇಳೆ ಅಪತ್ತು ಒದಗಿದ ಕಾಲದಲ್ಲಿ ಕ್ಷಾತ್ರಿಯ ಪ್ರವೃತ್ತಿಯನ್ನು ತೋರಿ, ಇಡೀ ರಾಷ್ಟ ರಾಷ್ಟವೇ ತನ್ನ ಶಕ್ತಿಯನ್ನು ಪ್ರದರ್ಶಿಸಿ ಕೀರ್ತಿಯನ್ನು ಗಳಿಸಬೇಕಾಗಿದೆ. ಈ ಯುದ್ಧ ಬಂದಿರುವ ಕಾಲದಲ್ಲಿ ನಮಗೆ ಒಂದು ನೆನಪು ಬರುತ್ತದೆ. ಅದು ಭಗವದ್ಗೀತೆಯಲ್ಲಿ ಏಕೈಕ ಧರ್ಮ ನೀತಿ, ಕೌರವರಿಗೂ ಪಾಂಡವರಿಗೂ ನಡೆದಿರುವ ಧರ್ಮ ಯುದ್ಧ ಹೇಗೋ ಹಾಗೆಯೇ ಈ ಹೊತ್ತು ದೈವದಾನವರಿಗೆ ನಡೆಯುತ್ತಾ ಇರುವುದು ಧರ್ಮಯುದ್ಧ ಎಂದು ಭಾವಿಸಿದ ಪಕ್ಷದಲ್ಲಿ "ಯತೃಚ್ಛಯೂ ದೋಷವನ್ನು ಸ್ವರ್ಗದ್ವಾರಪುಪಾವೃತ್ತಂ ಸುಖಿತಃ ಕ್ಷತ್ರಿಯಃ ಪಾರ್ಥಲಭಂತೇ ಯುದ್ಧಮಿೊದೃಶಂ" ನಮಗೆ ಅನ್ವಯಿಸುತ್ತದೆ.

ಇದು ಜನ ಊಹೆ ಮಾಡಿಕೊಂಡು ತಿಳಿದುಕೊಂಡು ಡ್ಯಾಟಾ ಟೈಮ್ ಟೇಬಲ್ ಪಾಕಿ ಕ್ಯಾಲೆಂಡರ್ ನಿರ್ಮಾಣ ಮಾಡಿ ಈ ಹೊತ್ತು ನಮ್ಮ ಮೇಲೆ ಶತ್ರು ಬೀಳುತ್ತಿಲ್ಲ. ಕ್ಯೂಬಾದಲ್ಲಿ ಅಮೇರಿಕಾ ಮತ್ತು ರಷ್ಯಾ ಎರಡು ರಾಷ್ಟಗಳಿಗೂ ಇಂಥ ಕಾಲದಲ್ಲಿಯೇ ಘರ್ಷಣೆಯಾಗಬಹುದು ಎಂದು ಗೊತ್ತಾಗಿತ್ತು ಇದು ಅಂಥ ಯುದ್ಧವಲ್ಲ ಇದು ತಾನು ತಾನಾಗಿಯೇ ಬಂದಿರತಕ್ಕಂಥದ್ದು. ಶಾಂತಿ ಪ್ರಿಯಮಿತ್ರ, ಸಾತ್ವಿಕ ಮನೋವೃತ್ತಿಯುಳ್ಳ ರಾಷ್ಟದ ಮೇಲೆ ಇತರ ನೆರೆ ರಾಷ್ಟಕ್ಕೆ ಪುರಸ್ಕರಣೆ ಕೊಟ್ಟು ಮಿತ್ರನ ಮೇಲೆ ತನ್ನ ಶಕ್ತಿಯನ್ನು ಕತ್ತಿಯ ಪ್ರಯೋಗವನ್ನು ಮಾಡಿದ ಯುದ್ಧ.

ಇಲ್ಲಿ ನಾವು ಗೆದ್ದ ಪಕ್ಷದಲ್ಲಿ ವೀರ ಪಕ್ಷದಲ್ಲಿ ವೀರ ಸ್ವರ್ಗ ಉಂಟು, ಅಥವಾ ಅನಂತ ಕಾಲದಲ್ಲಿ ಭರತ ಸ್ವಾತಂತ್ರ್ಯ ಉಂಟು; ಮಾನವ ಕುಲದ ಸ್ವಾತಂತ್ರ್ಯ ಉಂಟು. ಇದು ಕೇವಲ ಭರತಖಂಡದ ಜನ ರಕ್ಷಣೆಗಾಗಲಿ ಅದರ ಸ್ವಾತಂತ್ರ್ಯವನ್ನು ಉಳಿಸುವುದಕ್ಕಾಗಲಿ ಅಲ್ಲ. ಮನುಷ್ಯ ಊಹೆ ಮಾಡಿಕೊಂಡು, ನಾಗರೀಕತೆಯಿಂದ ಏನು ಒಂದು ಜೀವನದ ಮೌಲ್ಯವನ್ನು ಕಲ್ಪನೆ ಮಾಡಿದ್ದಾನೆಯೋ ಅದನ್ನೇ ಉಳಿಸುವುದಕ್ಕೋಸ್ಕರ ಮಾನವ ಮೌಲ್ಯವನ್ನು ಉಳಿಸುವಂಥ ಧರ್ಮಯುದ್ಧ.

## "ಸ್ವರ್ಗದ್ವಾರ ಮಪಾವೃತಂ"

ಇಂಥ ಕಾಲದಲ್ಲಿ ಸುಖವನ್ನೇ ಅಪೇಕ್ಷಿಸತಕ್ಕ ಯಾವುದೇ ಒಬ್ಬ ಕ್ರಿಮಿ ಇರಬಲ್ಲನೆ? ಭಾರತ ಸ್ವಾತಂತ್ರ್ಯವನ್ನೇ ಬಿಟ್ಟು ತನ್ನ ಸುಖವನ್ನು ಗಳಿಸಬೇಕೆಂಬ ಕೀಳು ಮನುಷ್ಯ, ಭರತಖಂಡದಲ್ಲಿದ್ದಾನೆಯೇ ಎಂದು ಪ್ರಶ್ನೆ ಮಾಡುವುದು ಅಗತ್ಯವೇ? ಇಂತ ಯುದ್ಧ ಇನ್ನೊಂದು ಬಂದೀತೆ? ಆದ್ದರಿಂದ ಈ ಯುದ್ಧವನ್ನು ಗೆಲ್ಲುವುದಕ್ಕೆ ಸರ್ವತ್ಯಾಗ ಮಾಡಬೇಕು. ಇದಕ್ಕೆ ಪ್ರಚಾರ ಕಾರ್ಯ ಮಾಡಲು ಗೋರೂರು ರಾಮಸ್ವಾಮಿ ಅಯ್ಯಂಗಾರ್‌ರವರಂಥ ಜನ ನಾಯಕರು ಅಲ್ಲಲ್ಲಿ ಬೇಕು. ಎಲ್ಲಾ ತ್ಯಾಗವನ್ನು ಮಾಡಿ, ಈ ಯುದ್ಧವನ್ನು ಗೆಲ್ಲಬೇಕು. ಸರ್ಕಾರ ಸಾರ್ವಜನಿಕರು ಇಬ್ಬರು ಸಂಯಮದಿಂದ ಜೀವನ ನಡೆಸಿ ಬೆಳೆಯನ್ನು ಹೆಚ್ಚಾಗಿ ಬೆಳೆಸಿ ದೇಶದಲ್ಲಿ ಕ್ಷಾಮ ಇಲ್ಲದ ಹಾಗೆ ನೋಡಿಕೊಂಡು ಯುದ್ಧವನ್ನು ಗೆಲ್ಲಬೇಕು. ಇದಕ್ಕೆ ಸಂಪೂರ್ಣ ಅನುಮತಿ ಲಕ್ಷಾಂತರ ಕೋಟ್ಯಾಂತರ ಜನರದಿದೆ.

– * –

## ಭಾಗ–3

ಪ್ರೊ. ಎಂ.ಪಿ.ಎಲ್. ಶಾಸ್ತ್ರಿಯವರು ಇಂಗ್ಲಿಷ್‌ನಲ್ಲಿ ಮಾಡಿದ ಭಾಷಣಗಳನ್ನು – ಚರ್ಚೆಗಳನ್ನು ಭಾಷಾಂತರ ಮಾಡಿ ನೀಡಲಾಗಿದೆ. ಈ ಭಾಗದಲ್ಲಿ ಮುಖ್ಯವಾಗಿ ಶ್ರೀ ಸಾಲು ಡಿಸೋಜರವರು ಶಾಸ್ತ್ರಿಯವರ ಭಾಷಣಗಳ ಬಗ್ಗೆ ಕುರಿತು ಸಂಶೋಧನೆ ನಡೆಸಿ ಪ್ರಕಟಿಸಿದ ಇಂಗ್ಲಿಷ್ ಬರಹಗಳನ್ನು ಸದುಪಯೋಗ ಮಾಡಿಕೊಳ್ಳಲಾಗಿದೆ.

# 1. Nationalisation of Bangalore Road Transportation

## (24.9.1956 ರಿಂದ 22.10.1956 ರವರೆಗೆ ನಡೆದ ಚರ್ಚೆಯ ಸಂದರ್ಭದಲ್ಲಿ)

ಬೆಂಗಳೂರು ರಸ್ತೆ ಸಾರಿಗೆ ವ್ಯವಸ್ಥೆಯನ್ನು ಸರ್ಕಾರವು ರಾಷ್ಟ್ರೀಕರಣಗೊಳಿಸಿದಾಗ ಶಾಸ್ತ್ರೀಯವರು ಅದನ್ನು ಪುಷ್ಟೀಕರಿಸಿ ಸದನದಲ್ಲಿ ಮಾತನಾಡಿದ್ದು, ಹೀಗೆ –

"ನಾನು ತುಂಬು ಹೃದಯದಿಂದ ಸರ್ಕಾರದ ಕೈಗೊಂಡ ಈ ಕ್ರಮವನ್ನು ಬೆಂಬಲಿಸುತ್ತೇನೆ. ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದ ಅಂತಹ ಉದ್ಯಮಗಳನ್ನು ರಾಷ್ಟ್ರೀಕರಣ ಮಾಡಬೇಕೆಂಬ ದೃಷ್ಟಿಕೋನ ಹೊಂದಿದವರಲ್ಲಿ ನಾನೂ ಒಬ್ಬ. ನಾನು ಈ ದಿಸೆಯಲ್ಲಿ ಒಂದು ಅಥವಾ ಎರಡು ಅಂಶಗಳಿಗೆ ಒತ್ತು ನೀಡುತ್ತೇನೆ. ನಾನು ಈಗಾಗಲೇ ಹೇಳಿದಂತೆ ಈ ಬಿಲ್ಲನ್ನು (ಕಾನೂನನ್ನು) ತುಂಬಾ ಚೆನ್ನಾಗಿ ರಚಿಸಲಾಗಿದೆ. ಭಾಗ–6 (ಕ್ಲಾಸ್–6) ಕಂಪೆನಿಯನ್ನು ಬದ್ಧತೆಗೆ ಒಳಪಡಿಸುತ್ತದೆ ಹಾಗೂ ಭಾಗ–4 (ಕ್ಲಾಸ್–8) ಈಗಾಗಲೇ ಬೆಂಗಳೂರು ಸಾರಿಗೆ ಕಂಪೆನಿಯಲ್ಲಿರುವ ಅಧಿಕಾರಿಗಳಿಗೆ ಅವರ ಉದ್ಯೋಗ ಕುರಿತಂತೆ ರಕ್ಷಣೆ ನೀಡುತ್ತದೆ.

ಆದರೆ ಈ ಕಾನೂನು ಅದೇ ಬೆಂಗಳೂರು ಸಾರಿಗೆ ಕಂಪೆನಿಯ ಉದ್ಯೋಗಿಗಳಾಗಿದ್ದ ವಾಹನ ಚಾಲಕರು, ಟಿಕೆಟ್ ನಿರ್ವಾಹಕರು, ತಪಾಸಣಾ ಸಿಬ್ಬಂದಿಗೆ ರಕ್ಷಣೆ ನೀಡುವುದಿಲ್ಲ. ಬೆಂಗಳೂರು ಸಾರಿಗೆ ವ್ಯವಸ್ಥೆಯು ಯಶಸ್ವಿಯಾಗಿರುವುದಕ್ಕೆ ಹೆಚ್ಚಿನ ರೀತಿಯಲ್ಲಿ ಈ ಸಿಬ್ಬಂದಿಯು ಕಾರಣ ಎಂಬುದನ್ನು ಮರೆಯದೇ ಅವರನ್ನು ಈ ಕಾನೂನಿನಡಿ ಸೇರಿಸಬೇಕು. ಅವರನ್ನು ದಯೆಯಿಂದ ಕಂಡು ಅವರ ಸೇವೆಯ ಉಪಯೋಗವನ್ನು ಪಡೆದು ಕೊಳ್ಳಬೇಕು.

# 2. Promotion of State Government Officers to IAS rank

## 27.9.1956 ರಂದು ನಡೆದ ಚರ್ಚೆಯಲ್ಲಿ

ರಾಜ್ಯ ಸರ್ಕಾರದ ಅಧಿಕಾರಿಗಳನ್ನು ಐ.ಎ.ಎಸ್. ರ್‍ಯಾಂಕಿಗೆ ಬಡ್ತಿ ನೀಡುವಂತೆ ಬೆಂಬಲಿಸಿ ಅಧಿಕಾರಿಗಳ ಬಡ್ತಿಯನ್ನು ತಡೆ ಹಿಡಿದಿದ್ದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕಡಿದಾಳು ಮಂಜಪ್ಪನವರನ್ನು ಶಾಸ್ತ್ರಿಗಳು ಪ್ರಶ್ನಿಸಿದ್ದು ಹೀಗೆ

"ಈ ಐದು ಜನ ಅಧಿಕಾರಿಗಳು ಮೈಸೂರು ಸರ್ಕಾರದ ವಿವಿಧ ಹುದ್ದೆಗಳಲ್ಲಿ ಸೇವೆಸಲ್ಲಿಸಿರುವುದು ಹೌದಲ್ಲವೆ? ಮತ್ತು ಅವರು ಒಳ್ಳೆಯ ಅಧಿಕಾರಿಗಳೆಂದು ದಾಖಲೆಗಳು ತಿಳಿಸುತ್ತವೆ. ಆದ್ದರಿಂದ ಅವರು ಆಯ್ಕೆ ಸಮಿತಿಯು ಬಡ್ತಿ ನೀಡುತ್ತದೆ ಎಂದು ಬಯಸುವುದು ಸರಿ. ಮೈಸೂರು ಸರ್ಕಾರ ಅವರಿಗೆ ಬಡ್ತಿ ನೀಡದಿರುವುದಕ್ಕೆ ಕಾರಣಗಳನ್ನು ಪಡೆದಿದೆಯೆ?

## Mysore Khadi and Village Industries Bill, 1956 (24.9.1956 ರಿಂದ 22.10.1956 ರವರೆಗೆ ನಡೆದ ಚರ್ಚೆಯ ಸಂದರ್ಭದಲ್ಲಿ)

1956ರ ಮೈಸೂರು ಖಾದಿ ಮತ್ತು ಗ್ರಾಮೀಣಾ ಕೈಗಾರಿಕಾ ಮಸೂದೆಗೆ ಕಾರಣರಾದ ಶಾಸ್ತ್ರೀಯವರು ಆ ಕುರಿತು ಕೈಗಾರಿಕೆ ಮತ್ತು ಅಬಕಾರಿ ಮಂತ್ರಿಗಳಾದ್ದ ಡಾ: ನಾಗನ ಗೌಡರ ಜೊತೆ ನಡೆಸಿದ ಸಂಭಾಷಣೆಯಲ್ಲಿ ಹೇಳಿದ್ದು –

"ಖಾದಿ ನಿಜವಾಗಲೂ ಒಂದು ಗ್ರಾಮ ಕೈಗಾರಿಕೆ ಆಗಿದೆ. ಖಾದಿ ಒಂದು ಉದ್ಯಮ ಎಂದು ಪರಿಗಣಿಸಲ್ಪಟ್ಟಿದ್ದು ಆದಷ್ಟು ಗ್ರಾಮೀಣ ಜನರ ಆರ್ಥಿಕ ಅಭಿವೃದ್ಧಿಗೆ ಕಾರಣವಾಗಿದೆ. ಅದೇ ಸಮಯದಲ್ಲಿ ಈ ಪರಿಷತ್‌ನವರು (ನಾವು) ಕೇವಲ ಈ ಒಂದು ಕೈಗಾರಿಕೆಯನ್ನು ಕುರಿತು ಚರ್ಚಿಸದೆ ಗ್ರಾಮೀಣಾಭಿವೃದ್ಧಿಗೆ ನೆರವಾಗುವಂತ ಖಾದಿಯಷ್ಟೇ ಮುಖ್ಯವಾದ ಮತ್ತು ಮಹತ್ವವುಳ್ಳ ಇತರೆ ಗ್ರಾಮೀಣಾ ಕೈಗಾರಿಕೆಗಳ ಕುರಿತು ಚರ್ಚಿಸೋಣ.

## 4. Constitution Bill (7th Amendment) 1956 (24.9.1956 ರಿಂದ 22.10.1956 ನಡೆದ ಚರ್ಚೆಯ ಸಂದರ್ಭದಲ್ಲಿ)

ಶಾಸ್ತ್ರೀಯವರು ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಕುರಿತಂತೆ ಯಾವುದೇ ರೀತಿಯ ವ್ಯತ್ಯಾಸಗಳನ್ನು ಒಪ್ಪುತ್ತಿರಲಿಲ್ಲ. ಆ ವಿಚಾರ ಕುರಿತಂತೆ ಕೇಂದ್ರದಿಂದ ರಾಜ್ಯಕ್ಕೆ ಸಂವಿಧಾನದ 7ನೇ ತಿದ್ದುಪಡಿ ಮಸೂದೆ ಚರ್ಚೆ ಬಂದಾಗ ಸದನದಲ್ಲಿ ಆ ಕುರಿತು ಹೇಳಿದ್ದು–

"ನಮ್ಮ ದೇಶದ ರಾಜ್ಯಗಳನ್ನು ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳೆಂದು ಎರಡು ಗುಂಪುಗಳಾಗಿ ವಿಂಗಡಿಸುವ ಅಗತ್ಯವಿಲ್ಲ. ದೇಶದ ರಾಜಧಾನಿ ದೆಹಲಿಯಲ್ಲಿದ್ದರೂ ದೆಹಲಿಯು ಕೇಂದ್ರ ಸರ್ಕಾರದ ನೇರ ಆಡಳಿತದಡಿ ಬರುವುದು ಬೇಡ. ಒಂದು ವೇಳೆ ರಾಜಧಾನಿ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟರು ಬೆಂಗಳೂರು ಕೇಂದ್ರ ಸರ್ಕಾರದ ಆಡಳಿತದಡಿ ಇರುವ ಅವಶ್ಯಕತೆ ಇಲ್ಲ."

## 5. Against increasing the salaries of the Judges (24.9.1956 ರಿಂದ 22.10.1956 ರವರೆಗೆ ನಡೆದ ಚರ್ಚೆಯ ಸಂಧರ್ಭದಲ್ಲಿ)

ಶಾಸ್ತ್ರಿಗಳು ನ್ಯಾಯಾಧೀಶರ ಸಂಬಳದ ಏರಿಕೆಯನ್ನು ವಿರೋಧಿಸಿ ಸದನದಲ್ಲಿ ಹೇಳಿದ್ದು ಹೀಗೆ

"ಸಂವಿಧಾನವೇ ಉಚ್ಚನ್ಯಾಯಾಲಯದ ನ್ಯಾಯಾಧೀಶರುಗಳ ಸಂಬಳವನ್ನು ನಮೂದಿಸಿದ್ದು ಪುಟ 113ನೇ ಕಾನೂನಿನ 24ನೇ ಭಾಗವು ರೂ. 4000/– ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರಿಗೂ ಮತ್ತು ರೂ. 3,500/– ಇತರ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೂ ನಮೂದಿಸಿದೆ. ಅದನ್ನು ನ್ಯಾಯಾಧೀಶರಿಗೆ ಅವರು ನಿರ್ವಹಿಸಿದ ದೇಶದ ಕಾರ್ಯಕ್ಕಾಗಿ

ನೀಡಬೇಕಾಗುತ್ತದೆ. ನನ್ನ ಪ್ರಕಾರ ಈ ಸಂಬಳವೇ ತುಂಬಾ ಹೆಚ್ಚಾಗಿದೆ ನಮ್ಮ ದೇಶದ ಬಹುಸಂಖ್ಯೆಯ ಅಲ್ಪವೇ ಆದಾಯವಿರುವ ಬಡಜನರಿಗೆ ಹೋಲಿಸಿದಾಗ.

## 6. Mysore University Bill - 1956 (1960ರ ಸೆಪ್ಟೆಂಬರ್‌ನಿಂದ ಅಕ್ಟೋಬರ್‌ರವರೆಗೆ ನಡೆದ ಚರ್ಚೆಯ ಸಂದರ್ಭದಲ್ಲಿ)

ಶಾಸ್ತ್ರೀಯವರು ಸರ್ಕಾರವು ತಂದಂತ ಮೈಸೂರು ವಿಶ್ವವಿದ್ಯಾನಿಲಯ ಮಸೂದೆ, 1956ನ್ನು ಕುರಿತಂತೆ ಕಾನೂನು ಮತ್ತು ಶಿಕ್ಷಣ ಸಚಿವರಾಗಿದ್ದ ಶ್ರೀ ಎ.ಬಿ. ರಾಮಚಂದ್ರರಾವ್‌ರೊಡನೆ ಸಂಭಾಷಿಸಿದ್ದು ಹೀಗೆ –

"ಮೈಸೂರು ವಿಶ್ವವಿದ್ಯಾನಿಲಯವನ್ನು ಎಲ್ಲ ರೀತಿಯಿಂದಲೂ ಸಂಪದಭರಿತವನ್ನಾಗಿ ಮಾಡಿ ತುಂಬಾ ಉನ್ನತ ಸ್ಥಾನದಲ್ಲಿ ಪುನರ್‌ಸ್ಥಾಪಿಸುವಂತ ಮಸೂದೆ ಕಾಯುತ್ತಿದ್ದವರಲ್ಲಿ ನಾನೂ ಒಬ್ಬ. ಆದರೆ ಸರ್, ನನಗೆ ಆಯ್ಕೆ ಸಮಿತಿ ಮತ್ತು ಶಾಸಕಾಂಗ ಸಭೆಯು ಕೂಡಿ ಮಾಡಿದಂತ ಈ ಮಸೂದೆಯು ನಿರಾಸೆಯನ್ನು ತಂದಿದೆ.

## 7. On the Question of re-organisation of State (1960ರ ಸೆಪ್ಟೆಂಬರ್ ಅಕ್ಟೋಬರ್‌ರವರೆಗೆ ನಡೆದ ಚರ್ಚೆಯ ಸಂದರ್ಭದಲ್ಲಿ)

ರಾಜ್ಯಗಳನ್ನು ಭಾಷೆಗಳ ಆಧಾರದ ಮೇಲೆ ಪುರ್ನವಿಂಗಡಣೆ ಮಾಡುವುದನ್ನು ವಿರೋಧಿಸುತ್ತಿದ್ದ ಶಾಸ್ತ್ರಿಯವರು ಸದನದಲ್ಲಿ ಆ ಕುರಿತು ಉಪಸಭಾಪತಿಗಳಾಗಿದ್ದ ಶ್ರೀ ಜಿ. ವೀರಪ್ಪ ರೊಡನೆ ಸಂಭಾಷಿಸಿದ್ದು ಹೀಗೆ –

"ಕೋಲಾರ ಜಿಲ್ಲೆಯಿಂದ ಬಂದವನಾಗಿ ನಾನು ತೆಲುಗಿನಲ್ಲಿ ಮಾತನಾಡುತ್ತೇನೆ. ಮತ್ತು ತೆಲುಗನ್ನು ಚೆನ್ನಾಗಿ ತಿಳಿದಿದ್ದೇನೆ. ಜೊತೆಗೆ ಕನ್ನಡ ಮತ್ತು ಸಂಸ್ಕೃತದಲ್ಲಿ ಪರಿಣಿತಿ ಇದೆ. ಹೀಗಿದ್ದು ನಾನು, ಕನ್ನಡಿಗನೆಂದೇ ಗುರುತಿಸಿ ಕೊಳ್ಳುತ್ತೇನೆ ಹೊರತು ತೆಲುಗಿನವನೆಂದಲ್ಲ. ಸಂವಿಧಾನ ಅಧಿಕಾರ ನೀಡಿದೆಯೆಂದು ಯಾರೂ ಭಾಷೆಯ ಆಧಾರದ ಮೇಲೆ ಹಕ್ಕನ್ನು ಚಲಾಯಿಸಬಾರದು."

ಸರ್ ನಾನು ದೇಶದ ಭವಿಷ್ಯದ ದೃಷ್ಟಿಯಿಂದ ಹೇಳುತ್ತಿದ್ದೇನೆ. ಆ ರೀತಿ ಪುನರ್ವಿಂಗಡಣೆ ಮಾಡಿದಲ್ಲಿ ದೇಶದ ಭದ್ರತೆಗೆ ತೊಂದರೆಯಾಗುತ್ತದೆ. ದೇಶದ ಭದ್ರತೆಯೂ ಇದರಿಂದ ತೊಂದರೆಗೆ ಸಿಕ್ಕುತ್ತದೆ. ನೀವು ಒಂದು ವರ್ಗವನ್ನು ಇನ್ನೊಂದು ವರ್ಗದ ವಿರುದ್ಧ ಸೃಷ್ಟಿಸುತ್ತಿದ್ದೀರಾ. ನಮ್ಮ ಆಸಕ್ತಿ ಅಥವಾ ಉದ್ದೇಶ ಏನೆಂದರೆ ಬೇರೆ ಬೇರೆ ಜಾತಿವರ್ಗಗಳನ್ನು ಪಂಗಡಗಳನ್ನು ಬೇರೆ ಬೇರೆ ವರ್ಗದ ಜನರನ್ನು ಹಾಗೂ ಬೇರೆ ಬೇರೆ ಭಾಷೆಗಳನ್ನು ಮಾತಾಡುವ ಜನರನ್ನು ಹತ್ತಿರಕ್ಕೆ ತರುವುದು. (ಒಗ್ಗೂಡಿಸುವುದು).

•

ಆದರೆ ಈ ರೀತಿಯ ಮಸೂದೆಯಿಂದ ನಾವು ಜನರನ್ನು ದೂರ ದೂರ ಇಡುತ್ತಿದ್ದೇವೆ. ಕೊನೆಗೆ ಅದು ನಮ್ಮನ್ನು ಗೊತ್ತು ಗುರಿಯಿಲ್ಲದ ಸ್ಥಳಕ್ಕೆ ಕೊಂಡೊಯ್ಯುತ್ತದೆ. ನಾನು ಪ್ರಾರ್ಥಿಸುವುದು ಇಷ್ಟೇ. ಇಂತಹ ರಾಜ್ಯಗಳು ಸ್ಥಾಪನೆಯಾದಾಗ ನಾವೆಲ್ಲ ಒಗ್ಗಟ್ಟಿನಿಂದ ಕೆಲಸ ಮಾಡೋಣ ಮತ್ತು ನಾವೆಲ್ಲ ಸಂತೋಷದಿಂದ ಇದ್ದು ಮತ್ತೆ 'ಸುವರ್ಣಯುಗ' ಬರುವುದನ್ನು ನೋಡೋಣ. ನಾನೂ ನಮ್ಮ ರಾಷ್ಟ್ರನಾಯಕರು ಸುವರ್ಣಯುಗವಾಗಬೇಕೆಂದು ಕನಸು ಕಂಡಿದ್ದರೊ ಅದನ್ನು ನನಸಾಗಿಸೋಣ.

## 8. Mysore University and Prof Sastry (2.3.1959 ರಂದು ನಡೆದಂತ ಚರ್ಚೆಯಲ್ಲಿ)

ಮೈಸೂರು ವಿಶ್ವವಿದ್ಯಾನಿಲಯವು ಶ್ರೇಷ್ಠತೆಯನ್ನು ಹೊಂದಿದ್ದರೆ ಅದಕ್ಕೆ ಶಾಸ್ತ್ರೀಯವರು ಬಹುತೇಕ ಕಾರಣರು. ಅಲ್ಲದೇ, ವಿಶ್ವವಿದ್ಯಾನಿಲಯಗಳ ಕುರಿತಂತೆ ಮಸೂದೆಗಳು ಸದನದಲ್ಲಿ ಚರ್ಚೆಗೆ ಬಂದಾಗ ಶಾಸ್ತ್ರಿಗಳು ಆ ಕುರಿತು ಸವಿಸ್ತಾರವಾಗಿ ಚರ್ಚಿಸುತ್ತಿದ್ದರು. ಮೈಸೂರು ವಿಶ್ವವಿದ್ಯಾನಿಲಯ ಕುರಿತಂತ ಒಂದು ಚರ್ಚೆಯಲ್ಲಿ ಭಾಗವ ಶಾಸ್ತ್ರಿಗಳು ಹೇಳಿದ್ದು–

"ನನಗೆ ಸರ್ ಲಕ್ಷ್ಮಣ ಸ್ವಾಮಿ ಮೊದಲಿಯಾರ್ ಅಧ್ಯಕ್ಷರಾಗಿದಂತ ಸಮಿತಿಯಲ್ಲಿ ಸೇವೆ ಸಲ್ಲಿಸುವ ಅವಕಾಶ ಸಿಕ್ಕಿದ್ದು ಆ ಸಮಿತಿ ಒಮ್ಮತದಿಂದ ಅಂಗೀಕರಿಸಿದಂತ ನಿರ್ಣಯಗಳನ್ನು ರಾಜ್ಯ ಸರ್ಕಾರಕ್ಕೆ ಸಲ್ಲಿಸಿದೆ. ಅದರಲ್ಲಿ ರಾಜ್ಯದ ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳನ್ನು ಕಲಿಕೆಯ ದೇವಸ್ಥಾನಗಳೆಂದು ಪರಿಗಣಿಸಬೇಕೆಂದು ಸೂಚಿಸಿತ್ತು. ಅವು ನಮ್ಮ ದೇಶದ ಮತ್ತು ಹೊರದೇಶದ ವಿಶ್ವವಿದ್ಯಾನಿಲಯಗಳಿಗೆ ಹೋಲಿಸಿದಾಗ ಶ್ರೇಷ್ಠತೆಯನ್ನು ಹೊಂದಿದ್ದು ಕಲಿಕೆಯ ದೇವಸ್ಥಾನಗಳಾಗುವ ಎಲ್ಲ ಅರ್ಹತೆಯನ್ನು ಹೊಂದಿವೆ. ಅಲ್ಲದೆ ಸಮಿತಿಯ ಪ್ರಕಾರ ಮೈಸೂರು ರಾಜ್ಯದ ಎರಡು ಕಡೆ ಒಂದು ಧಾರವಾಡದಲ್ಲಿ ಮತ್ತೊಂದು ಮೈಸೂರಿನಲ್ಲಿ ಕಲಿಕೆಯ ದೇವಸ್ಥಾನಗಳಾಗಿ ಕೆಲಸ ಮಾಡಬೇಕೆಂಬ ಇಚ್ಛೆ ಇತ್ತು. ಆದರೆ ನಾನು ಈ ಹೊತ್ತು ಇಲ್ಲಿ ಹೇಳುತ್ತಿದ್ದೇನೆ. ಶೈಕ್ಷಣಿಕವಾಗಿ ಮತ್ತು ಶೈಕ್ಷಣಿಕ ರಂಗ ಹೊರತುಪಡಿಸಿ ಕೆಲವು ವ್ಯಕ್ತಿಗಳಿದ್ದಾರೆ, ಅವರು ಈ ಸಲಹೆಗಳು ಕಾರ್ಯಗತವಾಗಲು ಬಿಡುತ್ತಿಲ್ಲ. ಇದು ಪ್ರಶಸ್ತ ಸಮಯವಾಗಿದ್ದು ಕಲಿಕೆಯ ದೇವಸ್ಥಾನಗಳಾದ ವಿಶ್ವವಿದ್ಯಾನಿಲಯಗಳು ಹೆಚ್ಚು ಹೆಚ್ಚಾಗಿ ಸ್ನಾತಕೋತ್ತರ ಶಿಕ್ಷಣದಲ್ಲಿ ತರಬೇತಿ ಮತ್ತು ಸಂಶೋಧನೆಗಳಿಗೆ ಹೆಚ್ಚು ಒತ್ತು ನೀಡಬೇಕೆ ಹೊರತು ಕೇವಲ ಕಾಲೇಜು ನಡೆಸುವುದಕ್ಕಲ್ಲ."

## 9. Had to struggle to get grants from the Government for educational institutions (3.4.1959 ರಂದು ನಡೆದ ಚರ್ಚೆಯಲ್ಲಿ)

ಸರ್ಕಾರದಿಂದ ಶಿಕ್ಷಣ ಸಂಸ್ಥೆಗಳಿಗೆ ಧನಸಹಾಯ ಪಡೆಯುವಲ್ಲಿ ಇರುವ ಕಠಿಣ ಶ್ರಮ ಕುರಿತಂತೆ ಚರ್ಚಿಸಿದ ಸಂದರ್ಭದಲ್ಲಿ ಶಾಸ್ತ್ರೀಯವರು ಹೇಳಿದ್ದು.

"ಕೇಂದ್ರ ಸರ್ಕಾರವು (Private) ಆಡಳಿತ ಮಂಡಲಿಗಳು ಸ್ಥಾಪಿಸುವ ಮತ್ತು ನಡೆಸುವ ಶಿಕ್ಷಣ ತರಬೇತಿ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಬೇಕೆಂದು ಹೇಳುತ್ತೇನೆ. ಮೈಸೂರು ಸರ್ಕಾರ ಖಾಸಗಿ ಆಡಳಿತ ಮಂಡಳಿಗಳು ನಡೆಸುವಂತ ಶಿಕ್ಷಕ ತರಬೇತಿ ಸಂಸ್ಥೆಗಳ ಕುರಿತು ಕೇಂದ್ರ ಸರ್ಕಾರಕ್ಕೆ ತಿಳಿಸಿದೆಯೆ ಮತ್ತು ಶೇಕಡ ನೂರರಷ್ಟು ಧನಸಹಾಯ ಪಡೆಯುವ ಕುರಿತು ಆಶ್ವಾಸನೆ ನೀಡಿದ್ದು ಏನಾಯಿತು? ಮುಂಬರುವ ವರ್ಷಗಳಲ್ಲಾದರೂ ಪ್ರಯತ್ನಿಸುತ್ತದೆಯೇ?

ಶಿಕ್ಷಕ ತರಬೇತಿ ಸಂಸ್ಥೆಯನ್ನು ನಡೆಸುತ್ತಿರುವ ಮೈಸೂರು ಎಜುಕೇಶನ್ ಸೊಸೈಟಿ, ಮಲ್ಲೇಶ್ವರಂ, ಬೆಂಗಳೂರು ಇವರು ಈ ಸಂಬಂಧ ಅರ್ಜಿಯನ್ನು ಸಲ್ಲಿಸಿಲ್ಲವೆ? ಸರಿಯಾದ ಸಮಯದಲ್ಲಿ 1960–61 ವರ್ಷಕ್ಕೆ ಅನ್ವಯಿಸುವಂತೆ ಸಾರ್ವಜನಿಕ ಶಿಕ್ಷಣ ಸಚಿವಾಲಯಕ್ಕೆ ಇಲಾಖೆ ನಿರ್ದೇಶಕರ ಆದೇಶದ ಮೇರೆಗೆ ಕೇಂದ್ರ ಶಿಕ್ಷಣ ಇಲಾಖೆಗೆ ನೇರವಾಗಿ ಕಳುಹಿಸಿಲ್ಲವೇ !

## 10. Displeasure over the nexus between politicians and dishonest men (12.3.1959 ರಂದು ನಡೆದ ಚರ್ಚೆಯಲ್ಲಿ)

ರಾಜಕಾರಣಿಗಳು ಅಪ್ರಾಮಾಣಿಕ ಜನರಿಗೆ ಉತ್ತೇಜನ ನೀಡುವುದನ್ನು ಖಂಡಿಸುತ್ತಿದ್ದ ಶಾಸ್ತ್ರೀಯವರು ಹೇಳಿದ್ದು –

ಸರ್, ಸರ್ಕಾರದಲ್ಲಿ ನನ್ನ ನಮ್ರ ವಿನಂತಿ. ದಯವಿಟ್ಟು ನೀವು ಪ್ರಾಮಾಣಿಕ ಪ್ರಜೆಗಳಿಗೆ ಸ್ಥಾನ ಕೊಡಿ. ನೀವು ಪ್ರಾಮಾಣಿಕ ಜನ ಸಾಮಾನ್ಯರಿಗೆ ಸ್ಥಾನ ಕೊಡಿ. ನಮ್ಮ ಆಸೆ–ಉದ್ದೇಶ ಜನ ಸಾಮಾನ್ಯನನ್ನು ಮೇಲೆತ್ತುವುದು. ಆಗಿರಲಿ. ಯಾರು ಸಾಮಾಜಿಕವಾಗಿ, ರಾಜಕೀಯವಾಗಿ ಹಿಂದುಳಿದಿರುತ್ತಾನೋ ಮತ್ತು ಯಾರು ಹಿಂದೆ ಉಳಿದಿದ್ದಾನೋ ಅವನನ್ನು ಮೇಲೆತ್ತಿ.

## 11. Question of re allocation of Waters (21.10.1960 ರಂದು ನಡೆದ ಚರ್ಚೆಯಲ್ಲಿ)

ಕೃಷ್ಣ ಮತ್ತು ಗೋದಾವರಿ ನದಿಗಳ ನೀರು ಹಂಚಿಕೆ ವಿಷಯ ಕುರಿತಂತೆ ಸದನದಲ್ಲಿ ಶಾಸ್ತ್ರೀ ಮತ್ತು P.W.D ಸಚಿವರಾಗಿದ್ದ ಶ್ರೀ ಹೆಚ್.ಎಮ್. ಚೆನ್ನಬಸಪ್ಪನವರ ನಡುವೆ ನಡೆದ ಸಂಭಾಷಣೆಯಲ್ಲಿ

"ನದಿಗಳು ಯಾವೊಬ್ಬ ವ್ಯಕ್ತಿಯ, ಯಾವುದೇ ಒಂದು ಗುಂಪಿನ ಅಥವಾ ಯಾವುದೇ ಒಂದು ಜನರ ಸೊತ್ತಲ್ಲವೆಂದು ಹೇಳಲು ನಾನು ಇಚ್ಛಿಸುತ್ತೇನೆ. ನದಿಗಳು ಯಾವುದೇ ತಾರತಮ್ಯ ಮಾಡದೇ ಹರಿಯುತ್ತವಲ್ಲದೇ ಅವುಗಳ ಉದ್ದೇಶ ಆ ನೀರನ್ನು ಉಪಯೋಗಿಸಿಕೊಂಡು ಜೀವಿಸುವ ಜನರು ಸಂತೋಷದಿಂದರಬೇಕೆನ್ನುವುದು. ಆದ್ದರಿಂದ ಈ ದೊಡ್ಡ ನದಿಗಳ ವಿಚಾರದಲ್ಲಿ ನಾನು ಹೇಳುವುದು. ಇವು ಯಾವುದೇ ಜನರ ಅಥವಾ ರಾಜ್ಯದ ಸೋತ್ತಲ್ಲ. ಅವು ಇಡೀ ದೇಶದ ಜನರ ಸೋತ್ತಾಗಿದೆ. ಆದ್ದರಿಂದ ಈ ದೇಶದ ಒಂದು ಭಾಗವಾದ ಮೈಸೂರು ರಾಜ್ಯಕ್ಕೂ ಈ ಎರಡು ನದಿಗಳಾದ ಕೃಷ್ಣ ಮತ್ತು ಗೋದಾವರಿ ಮೇಲೆ ನ್ಯಾಯಬದ್ಧ ಹಕ್ಕಿದೆ."

## 12. Sastry was against Govt's take over of Central College (23.9.1960 ರಂದು ನಡೆದ ಚರ್ಚೆಯಲ್ಲಿ)

ಸೆಂಟ್ರಲ್ ಕಾಲೇಜನ್ನು ಸರ್ಕಾರವು ತನ್ನ ಅಧೀನಕ್ಕೆ ತೆಗೆದುಕೊಂಡು ಮೈಸೂರು ಮಹಾರಾಜ ಕಾಲೇಜನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಬಿಟ್ಟುಕೊಟ್ಟಾಗ ಅದನ್ನು ವಿರೋಧಿಸಿ ಶಾಸ್ತ್ರಿಯವರು ಸದನದಲ್ಲಿ ಹೇಳಿದ್ದು–

ನಾನು ಮಹಾರಾಜ ಕಾಲೇಜು ಮತ್ತು ಸೆಂಟ್ರಲ್ ಕಾಲೇಜು ನಡುವಿನ ಇಂತಹ ತಾರತಮ್ಯ ಒಪ್ಪುವುದಿಲ್ಲ. ಅವೆರಡು ವಿಶ್ವವಿದ್ಯಾನಿಲಯದ ವ್ಯಾಪ್ತಿಯಿಂದದ ಹೊರ ಇರತಕ್ಕದ್ದು. ಅವೆರೆಡು ಪದವಿ ಶಿಕ್ಷಣ ಮತ್ತು ಸ್ನಾತಕೋತ್ತರ ಶಿಕ್ಷಣಗಳೆರೆಡರಲ್ಲು ತರಬೇತಿ. ನೀಡುವುದಕ್ಕೆ ಮಾದರಿಯಾಗಬೇಕು. ವಿಶ್ವವಿದ್ಯಾನಿಲಯವು ಸಂಶೋಧನೆ ಮತ್ತು ಉಪನ್ಯಾಸಕ್ಕೆ ಒತ್ತು ನೀಡುವಂತ ಸ್ನಾತಕೋತ್ತರ ಕೇಂದ್ರವಾಗಿದ್ದು ಕೇವಲ ಮಾಸ್ಟರ್ ಡಿಗ್ರಿ ನೀಡುವುದಕ್ಕೆ ಅಲ್ಲ. ಅಲ್ಲದೆ ಹೊಸ ಹೊಸ ವಿಷಯಗಳ ಕುರಿತು ತರಗತಿಗಳನ್ನು ಪ್ರಾರಂಭಿಸಬೇಕು.

## 13. Committee on Women's Education (6.9.1960 ರಂದು ನಡೆದ ಚರ್ಚೆಯಲ್ಲಿ)

ಮಹಿಳಾ ಶಿಕ್ಷಣ ಕುರಿತಂತೆ ಸಮಿತಿ ರಚಿಸುವ ಸಂಬಂಧದಲ್ಲಿ ಶಾಸ್ತ್ರೀಯವರು ಶಿಕ್ಷಣ ಸಚಿವರಾಗಿದ್ದ ಶ್ರೀ ಅಣ್ಣಾರಾವ್ ಗಣಮುಖಿಯವರೊಡನೆ ನಡೆಸಿದ ಸಂಭಾಷಣೆಯಲ್ಲಿ –

"ಮಹಿಳಾ ಶಿಕ್ಷಣ ಕುರಿತಂತೆ ರಚಿಸಿರುವ ಸಮಿತಿಯಲ್ಲಿ ಎಷ್ಟು ಜನ ಗಣ್ಯ ವ್ಯಕ್ತಿಗಳನ್ನು ಸದಸ್ಯರನ್ನಾಗಿ ಮಾಡಿಕೊಂಡಿದ್ದೀರೆಂದು ನಾನು ತಿಳಿಯಬೇಕಿದೆ. ಅಲ್ಲದೆ ನಾನು ಸರ್ಕಾರ ನೀಡಿದ ವಚನದಂತೆ ಆ ಸಮಿತಿಯಲ್ಲಿ ಶಿಕ್ಷಣ ತಜ್ಞರನ್ನು ಸೇರಿಸಿಕೊಂಡಿದೆಯೆ ಹೇಗೆ ಎಂದು ತಿಳಿಯಬೇಕಿದೆ. ನಾನು ಆ ಸಮಿತಿಯಲ್ಲಿರುವ ಆ ಗಣ್ಯ ವ್ಯಕ್ತಿಗಳು ಯಾರೆಂದು ಮತ್ತು ಶಿಕ್ಷಣ ತಜ್ಞರು ಯಾರೆಂದು ಸ್ಪಷ್ಟವಾಗಿ ತಿಳಿಯಬೇಕಿದೆ.

ಶಿಕ್ಷಣ ಸಚಿವರು ಪರಿಷತ್ ಸಭೆಯಲ್ಲಿ ಇರುವುದರಿಂದ ಆ ಸಮಿತಿಯಲ್ಲಿ ಸರ್ಕಾರ ರಾಜ್ಯದ ಮಹಿಳಾ ಶಿಕ್ಷಣ ಅಭಿವೃದ್ಧಿ ದೃಷ್ಟಿಯಿಂದ ಶಿಕ್ಷಣ ತಜ್ಞರನ್ನು ನೇಮಿಸಲೇಬೇಕೆಂದು ಹೇಳುತ್ತಿದ್ದೇನೆ.

## 14. concern for the village development (ಮಾರ್ಚ್–ಏಪ್ರಿಲ್ 1962 ರ ನಡುವೆ ನಡೆದ ಸದನದ ಚರ್ಚೆಯಲ್ಲಿ)

ಗ್ರಾಮೀಣಾಭಿವೃದ್ಧಿ ಕುರಿತಂತೆ ನಡೆದ ಸದನದ ಒಂದು ಚರ್ಚೆಯಲ್ಲಿ ಅವರು ಸರ್ಕಾರವನ್ನು ಪ್ರಶ್ನಿಸಿದ್ದು –

"ನಮ್ಮದು ಒಂದು ಬಡರಾಜ್ಯವಾಗಿದ್ದು, ನಮ್ಮ ದೇಶ ಒಂದು ಬಡ ದೇಶವಾಗಿದೆ. ನಮ್ಮ ಹಳ್ಳಿಗಳಲ್ಲಿ ಇರಲೇ ಬೇಕಾದಂತ ನೈರ್ಮಲ್ಯ ವ್ಯವಸ್ಥೆಗಳನ್ನು ಹೊಂದಲು ಆಗದಾಗ್ಯೂ, ಹೇಗೆ ಕೆಲವೊಂದು ಮುನಿಸಿಪಾಲಿಟಿಗಳು ಆಧುನಿಕ ನೈರ್ಮಲ್ಯ ವ್ಯವಸ್ಥೆಗಳನ್ನು ಕೇಳುತ್ತಿವೆ ಮತ್ತು ಹೇಗೆ ಸರ್ಕಾರ ಅವುಗಳನ್ನು ಒದಗಿಸುವುದಾಗಿ ತಕ್ಷಣದಲ್ಲಿ ಒಪ್ಪಿಗೆ ಸೂಚಿಸಿದೆ?"

## 15. Implementation of Higher Secondary Scheme (2.4.1962 ರಂದು ನಡೆದಂತ ಚರ್ಚೆಯಲ್ಲಿ)

ರಾಜ್ಯದಲ್ಲಿ ಪ್ರೌಢಶಿಕ್ಷಣವನ್ನು ಜಾರಿಗೊಳಿಸುವ ಸಂಬಂಧ ಮುಖ್ಯಮಂತ್ರಿಗಳಾಗಿದ್ದ ಶ್ರೀ ಎಸ್.ಆರ್ ಕಂಠಿಯವರೊಡನೆ ನಡೆದ ಚರ್ಚೆಯಲ್ಲಿ ಶಾಸ್ತ್ರಿಯವರು ಕೇಳಿದ್ದು –

"ಸರ್ಕಾರ ಈ ಪ್ರಶ್ನೆಗಳಿಗೆ ಉತ್ತರಿಸುವ ಸೌಜನ್ಯ ತೋರುತ್ತದೆಯೆ" –

1. ಪ್ರೌಢ ಶಿಕ್ಷಣ ಪದ್ಧತಿಯನ್ನು ರಾಜ್ಯದ ಶಾಲೆಗಳಲ್ಲಿ ಜಾರಿಗೆ ತರಲಾಗಿದೆಯೆ?
2. ತಂದಿದ್ದರೆ ಯಾವ ದಿನಾಂಕದಿಂದ
3. ಪ್ರೌಢ ಶಾಲೆಗಳಾಗಿ ಪರಿವರ್ತಿಸಲಾದ ಶಾಲೆಗಳ ಸಂಖ್ಯೆ ಎಷ್ಟು?
4. 1962–63ನೇ ಸಾಲಿನಲ್ಲಿ ಎಷ್ಟು ಜನ ವಿದ್ಯಾರ್ಥಿಗಳು ಪ್ರೌಢಶಾಲೆಯ 10ನೇ ತರಗತಿಯಲ್ಲಿ ಇರುತ್ತಾರೆ?
5. 1963–64ರಲ್ಲಿ 9ನೇ ತರಗತಿ ನಡೆಸುವ ಕುರಿತು ಮಾಡಿರುವ ವ್ಯವಸ್ಥೆಗಳೇನು?

## 16. To set up many technical institutions (28.2.1968 ರಿಂದ 30.3.1968ರವರೆಗೆ ನಡೆದ ಚರ್ಚೆಯ ಸಂದರ್ಭದಲ್ಲಿ)

ತಾಂತ್ರಿಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವ ಕುರಿತಂತೆ ನಡೆದ ಒಂದು ಚರ್ಚೆಯಲ್ಲಿ ಅವರು ಹೇಳಿದ್ದು,

"ನಾನು ನಿಮಗೆ ಹೇಳಿದ ಹಾಗೇ, ಮೈಸೂರು ಮತ್ತು ಬೆಂಗಳೂರು ಉದ್ಯೋಗ ವಿನಿಮಯ ಕೇಂದ್ರಗಳಿಗೆ ಹೋಗಿ 2–3 ದಿನ ನಿಂತು ನೋಡಿ ಬಂದಿದ್ದೇನೆ. ಅಲ್ಲಿಯ ಚಿತ್ರಣ ತುಂಬ ದಾರುಣವಾದುದು. ನಮ್ಮ ಯುವಕರು ಮತ್ತು ಯುವತಿಯರು ಈಗಲೋ ಅಥವಾ ಮುಂದೆಯೋ ಕೆಲಸ ಪಡೆಯುವ ಆಸೆಯಿಂದ ಅರ್ಜಿ ಸಲ್ಲಿಸುತ್ತಿದ್ದರು.

"ನಾನು ಕೇವಲ ಸರ್ಕಾರಿ ಕಚೇರಿಗಳಲ್ಲಿ ಉದ್ಯೋಗದಲ್ಲಿರುವವರ ಕುರಿತು ಯೋಚಿಸುವುದಿಲ್ಲ. ಅಥವಾ ಯಾವುದೋ ಒಂದು ಜಿಲ್ಲೆಯ ಅಥವಾ ನನ್ನ ಕ್ಷೇತ್ರದಲ್ಲಿಯ ಜನರ ಬಗ್ಗೆ ಚಿಂತಿಸುವುದಿಲ್ಲ. ನಾನು ರಾಜ್ಯದ ಬಡ ಮತ್ತು ಮಧ್ಯಮ ವರ್ಗದ ಕುಟುಂಬಗಳ ಕುರಿತು ಯೋಚಿಸುತ್ತೇನೆ ಹಾಗೂ ಶಿಕ್ಷಣವಿದ್ದು ಉದ್ಯೋಗವಿಲ್ಲದವರ ಜೊತೆಗೆ ಶಿಕ್ಷಣವಿಲ್ಲದೆ ಉದ್ಯೋಗ ಇರದವರ ಕುರಿತು ಮಾತನಾಡುತ್ತಿದ್ದೇನೆ."

## 17. His intention to make Bangalore University as a Central University (20.4.1965 ರಂದು ನಡೆದ ಚರ್ಚೆಯಲ್ಲಿ)

ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಕೇಂದ್ರೀಯ ವಿಶ್ವವಿದ್ಯಾನಿಲಯವನ್ನು ಪರಿವರ್ತಿಸಬೇಕೆಂಬ ಆಸೆಯನ್ನು ಹೊಂದಿದ್ದ ಶಾಸ್ತ್ರೀಯವರು ಸದನದಲ್ಲಿ ಆ ಕುರಿತು ನಿರ್ಣಯ (resolution) ಪಾಸುಮಾಡಿ ಚರ್ಚಿಸಿದ ಸಂದರ್ಭದಲ್ಲಿ–

ಸರ್, ನಾವು ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಕೇಂದ್ರಿಯ [illegible]ದ್ಯಾನಿಲಯವನ್ನಾಗಿ ಪರಿವರ್ತಿಸುವುದರಿಂದ ಆಗುವ ಪ್ರಯೋಜನಗಳ ಕುರಿತು ಪ್ರಮುಖರಿಂದ ಕೂಡಿದಂತ ಈ ಸಭೆಗೆ ತಿಳಿಸುವ ಅಗತ್ಯವಿಲ್ಲವೆಂದು ತಿಳಿದಿದ್ದೇನೆ. ಒಂದು ವಿಶ್ವವಿದ್ಯಾನಿಲಯವಾಗಿ ಉತ್ಕೃಷ್ಟ ಶಿಕ್ಷಣ ಮಟ್ಟವನ್ನು ಕಾಯ್ದುಕೊಂಡು ಬರುತ್ತಿರುವ ಬೆಂಗಳೂರು ವಿಶ್ವವಿದ್ಯಾನಿಲಯವು ಕೇಂದ್ರೀಯ ವಿಶ್ವವಿದ್ಯಾನಿಲಯಗಳು ಹೊಂದಿರುವ ಎಲ್ಲ ಸವಲತ್ತುಗಳನ್ನು ಪಡೆಯಬೇಕೆಂಬುದೆ ನನ್ನ ಆಸೆ.

## 18. In Favour of imposition of prohibition

## (17.3.1966 ರಂದು ನಡೆದ ಚರ್ಚೆಯಲ್ಲಿ)

ಸರ್ಕಾರದ ಪ್ರತಿಬಂಧ ಕಾನೂನನ್ನು ಬೆಂಬಲಿಸಿ ಸದನದಲ್ಲಿ ಮಾತಾನಾಡುತ್ತ

"ಭಾರತ ಸಂವಿಧಾನದ 47ನೇ ಅನುಚ್ಛೇದ (article) ಅಥವಾ ಕಾನೂನು ಪ್ರಕಾರ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಜನರ ಜೀವನ ಮಟ್ಟವನ್ನು ಉತ್ತಮಗೊಳಿಸಲು, ಪೌಷ್ಟಿಕತೆಯನ್ನು ಹೆಚ್ಚಿಸಲು ಮತ್ತು ಸಾರ್ವಜನಿಕರ ಆರೋಗ್ಯವನ್ನೆ ಕಾಪಾಡಲು, ಈ ರೀತಿ ಕುಡಿಯುವುದನ್ನು ನಿಲ್ಲಿಸುವಂತೆ ನಿರ್ಬಂಧ ಹೇರಬಹುದು. ಶ್ರೀನಿವಾಸ ಶೆಟ್ಟರು (ಅಬಕಾರಿ ಸಚಿವರು) ಸಂವಿಧಾನಕ್ಕೆ ಬದ್ಧರಾಗಿರುವುದಾಗಿ ಪ್ರತಿಜ್ಞೆ ಕೈಗೊಂಡಿದ್ದು ಸಂವಿಧಾನಕ್ಕೆ ಗೌರವಸಲ್ಲಿಸುವ ಸಲುವಾಗಿ ಅವರು ಪ್ರತಿಬಂಧವನ್ನು ಯಶಸ್ವಿಯಾಗಿ ಆಚರಣೆಗೆ ತರಬೇಕಿದೆ."

## 19. Free Education to the Children of Primary School Teahcers (2.9.1960 ರಂದು ನಡೆದ ಚರ್ಚೆಯಲ್ಲಿ)

20. ಪ್ರೈಮರಿ ಶಾಲಾ ಶಿಕ್ಷಕರ ಮಕ್ಕಳಿಗೆ ಶುಲ್ಕ ರಹಿತ ಶಿಕ್ಷಣ ನೀಡುವ ಕುರಿತಂತೆ ಶಿಕ್ಷಣ ಸಚಿವರಾದ ಶ್ರೀ ಅಣ್ಣಾರಾವ್ ಗಣಮುಖಿಯವರೊಡನೆ ನಡೆಸಿದ ಚರ್ಚೆಯಲ್ಲಿ ಹೇಳಿದ್ದು–

"ಸಧ್ಯದ ಕಾನೂನಿಂದ ಶುಲ್ಕ ರಹಿತವಾಗಿ ಪ್ರೌಢ ಶಿಕ್ಷಣ ಪಡೆಯುತ್ತಿದ್ದ ಪ್ರೈಮರಿ ಶಾಲಾ ಶಿಕ್ಷಕರ ಮಕ್ಕಳು ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿಯೆ? ಇದರಿಂದ ಈ ಶಿಕ್ಷಕರಿಗೆ ತುಂಬಾ ತೊಂದರೆಯಾಗುತ್ತದೆಂದು ಸರ್ಕಾರಕ್ಕೆ ತಿಳಿದಿಲ್ಲವೆ? ಯಾರೂ ಬೇರೆ ಮಕ್ಕಳಿಗೆ ಶಿಕ್ಷಣ ಕೊಡುತ್ತಾರೊ ಅವರಿಗೆ ಅವರ ಸ್ವಂತ ಮಕ್ಕಳಿಗೆ ಆ ಸೌಲಭ್ಯವನ್ನು ಪ್ರೌಢ ಶಿಕ್ಷಣ ಹಂತದಲ್ಲಿ ನೀಡಲು ಸಾಧ್ಯವಿಲ್ಲವೆಂದು."

## 20. To set up Biological Research stations in the state (ರಂದು ನಡೆದ ಚರ್ಚೆಯಲ್ಲಿ)

ರಾಜ್ಯದಲ್ಲಿ ಕೆಲವು ಬಯೋಲಾಜಿಕಲ್ ( ) ಸಂಶೋಧನಾ ಸಂಸ್ಥೆಗಳ ಸ್ಥಾಪನೆಗೆ ಕಾರಣರಾದ ಶಾಸ್ತ್ರಿಗಳು ಆ ಕುರಿತು ನಡೆದ ಚರ್ಚೆಯಲ್ಲಿ ಹೇಳಿದ್ದು–

"ಪುಸ್ತುತ ಅಮೇರಿಕಾ ಅಥವಾ ಇಂಗ್ಲೆಂಡಿನಲ್ಲಿ ಒಂದು ಪ್ರಾಣಿ ಅಥವಾ ಜೀವಿ ಸತ್ತಿತೆಂದರೆ ಅದು ಯಾವ ಕಾಯಿಲೆಯಿಂದ ಸತ್ತಿತೆಂದು ತಕ್ಷಣದಲ್ಲಿ ತಿಳಿಯುವಂತೆ ಕ್ರಮಕೈಗೊಂಡಿದ್ದಾರೆ. ಆದರೆ ನಮ್ಮ ದೇಶದಲ್ಲಿ ಹಾಗಲ್ಲ. ವಿಜ್ಞಾನ ಮುಂದುವರೆದಿದೆ. ನಾವು ಹಳೆಯ ಪದ್ದತಿಯಲ್ಲಿಯೇ ಉಪಚರಿಸುತ್ತೇವೆ. ಮತ್ತು ಅದೇ ಹಳೇ ಪದ್ಧತಿಯ ಔಷಧಿಗಳನ್ನು ನೀಡುತ್ತೇವೆ. ಮತ್ತು ನಾವು ರೈತನಿಗೆ ಅದನ್ನು ತಕ್ಷಣದಲ್ಲಿ ಹೇಗೆ ತಡೆಗಟ್ಟಬಹುದು ಎಂಬುದಕ್ಕೆ ಶಿಕ್ಷಣ ನೀಡುವುದಿಲ್ಲ ಮತ್ತು ಮುಂದೆ ಹೇಗೆ ಜಾಗ್ರತೆ ವಹಿಸಬೇಕೆಂದು ತಿಳಿಸಿ ಕೊಡುವುದಿಲ್ಲ. ಆದ್ದರಿಂದ ನಾನು ಸಂಬಂಧಪಟ್ಟ ಮಂತ್ರಿಗಳನ್ನು ಒತ್ತಾಯಿಸುತ್ತಿದ್ದೇನೆ. ದಯಪಿಟ್ಟು ರಾಜ್ಯದಲ್ಲಿ ಕೆಲವು ಬಯಾಲಾಜಿಕಲ್ ( ) ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸುವ ಕುರಿತು ಕ್ರಮಕೈಗೊಳ್ಳಬೇಕು ಎಂದು ಹಾಗೂ ವಿಜ್ಞಾನಿಗಳು ಸಂಶೋಧನೆ ಕೈಗೊಂಡು ಔಷಧಿಗಳನ್ನು ಕಂಡು ಹಿಡಿದು ಆ ಜ್ಞಾನವನ್ನು ರೈತರಲ್ಲಿ ಹರಡುವಂತೆ ಮಾಡಬೇಕು.

ಇಲ್ಲದಿದ್ದರೆ ಕೇವಲ ಕಾನೂನು ಮಾಡುವುದರಿಂದ ಯಾವುದೇ ರೀತಿಯ ಯಶಸ್ಸನ್ನು ಸ್ಥಾಪಿಸಲು ಆಗುವುದಿಲ್ಲ ಮತ್ತು ಹಳ್ಳಿಗರಿಗೆ ಸಹಾಯ ಮಾಡಲಾಗುವುದಿಲ್ಲ, ಅಲ್ಲದೆ ನಮಗೆ ಕಾಯಿಲೆಗಳನ್ನು ತಡೆಗಟ್ಟಲು ಆಗಲಿ ಅಥವಾ ಹರಡುವುದನ್ನು ತಪ್ಪಿಸುವುದು ಆಗಲಿ ಆಗುವುದಿಲ್ಲ."

– * –

# ಸಂತಾಪ ಸೂಚಕ ಭಾಷಣಗಳು (16.7.2001)

ಬೆಂಗಳೂರಿನ ಪ್ರಸಿದ್ಧ ಎಂ.ಇ.ಎಸ್ ಶಿಕ್ಷಣ ಸಂಸ್ಥೆಯ ಸ್ಥಾಪಕ ಹಾಗೂ ವಿಧಾನ ಪರಿಷತ್ತಿನ ಸದಸ್ಯರಾಗಿ ಎರಡು ದಶಕಗಳಿಗೂ ದೀರ್ಘ ಕಾಲ ಶ್ರೇಷ್ಠ ಸೇವೆ ಸಲ್ಲಿಸಿದ್ದ ಪ್ರೊ: ಎಂ.ಪಿ.ಎಲ್. ಶಾಸ್ತ್ರಿಯವರು 6.6.2001 ರಂದು ನಿಧನರಾಗಿದ್ದು 16.7.2001 ರಂದು ಪ್ರಾರಂಭವಾದ ಪರಿಷತ್ತಿನ 94ನೇ ಅಧಿವೇಶನದಲ್ಲಿ ಅವರ ಮರಣ ಕುರಿತಂತೆ ಸಂತಾಪ ಸೂಚಕ ಸಭೆಯನ್ನು ನಡೆಸಲಾಯಿತು. ಮುಖ್ಯವಾಗಿ, ವಿಧಾನ ಪರಿಷತ್ತಿನ ಸಭಾಪತಿಗಳಾಗಿದ್ದ ಶ್ರೀ ಡೇವಿಡ್ ಸಿಮಿಯೋನ್, ಸಭಾನಾಯಕರಾದಂತ ಶ್ರೀ ಹೆಚ್.ಕೆ. ಪಾಟೀಲರು ಹಾಗೂ ಸದಸ್ಯರಾದ ಶ್ರೀ ಕೆ.ಎಚ್. ಶ್ರೀನಿವಾಸರವರು ಶಾಸ್ತ್ರಿಗಳ ಕುರಿತು ಮಾತಾನಾಡಿದರು.

## ಸಭಾಪತಿಗಳಾದ ಶ್ರೀ ಡೇವಿಡ್ ಸಿಮಿಯೋನ್‌ರವರು

1910ರಲ್ಲಿ ಕೋಲಾರ ಜಿಲ್ಲೆಯ ಮುತ್ತೂರು ಎಂಬ ಹಳ್ಳಿಯಲ್ಲಿ ಜನಿಸಿದ ಶ್ರೀಯುತರು ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಹಾಗೂ ಮೈಸೂರಿನಲ್ಲಿ ಅಭ್ಯಾಸಿಸಿ ಭಾಷಾ ವಿಷಯದ ಬಗ್ಗೆ ಅಧ್ಯಯನ ಮಾಡಿದರು. ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳ ಸೆನೆಟ್. ಕೌನ್ಸಿಲ್ ಹಾಗೂ ಸಿಂಡಿಕೇಟ್‌ಗಳಲ್ಲಿ ಸುಮಾರು 25 ವರ್ಷಗಳಷ್ಟು ದೀರ್ಘ ಕಾಲ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ಬೆಂಗಳೂರು ವಿಶ್ವವಿದ್ಯಾನಿಲಯದ ಸ್ಥಾಪನೆಗೆ ಶ್ರಮಿಸಿದಂತವರು. 1946ರಲ್ಲಿ ಹಳೆಯ ಮೈಸೂರು ರಾಜ್ಯದ ವಿಧಾನಪರಿಷತ್ತಿನ ಸದಸ್ಯರಾಗಿ (ನ್ಯಾಯ ವಿಧಾಯಕ ಸಭೆಯ) ಆಯ್ಕೆಯಾದ ಶ್ರೀಯುತರು 1952 ರಿಂದ 1968 ರ ಅವಧಿಯಲ್ಲಿ ಶಿಕ್ಷಕರ ಕ್ಷೇತ್ರದಿಂದ ವಿಧಾನ ಪರಿಷತ್ತಿನ ಸದಸ್ಯರಾಗಿ ಸೇವೆ ಸಲ್ಲಿಸಿರುತ್ತಾರೆ.

ಇವರು ಮೈಸೂರು ಎಜುಕೇಶನ್ ಸೊಸೈಟಿ ಅಧ್ಯಕ್ಷರಾಗಿ, ಆಕಾಶವಾಣಿಯ ಸಲಹಾ ಮಂಡಳಿಯ ಸದಸ್ಯರಾಗಿ, ಅಧಿಕೃತ ಭಾಷಾ ಆಯೋಗದ ಸದಸ್ಯರಾಗಿ ಸೇವೆ ಸಲ್ಲಿಸಿರುವುದಲ್ಲದೆ, ನಾಡಿನಲ್ಲಿ ಸಂಸ್ಕೃತ ಭಾಷೆ ಕಣ್ಮರೆಯಾಗುತ್ತಿರುವ ಈ ಸಂದರ್ಭದಲ್ಲಿ ಭಾಷಾ ಅಭಿವೃದ್ಧಿ ಮತ್ತು ಪ್ರಚಾರಕ್ಕಾಗಿ ಇವರು ಸಲ್ಲಿಸಿರುವ ಸೇವೆ ಅವಿಸ್ಮರಣೀಯವಾದುದು. ಶಿಕ್ಷಣ ರಂಗಕ್ಕೆ ಶ್ರೀಯುತರು ಸಲ್ಲಿಸಿದ ಅನುಪಮ ಕೊಡುಗೆಗಾಗಿ ವಿದ್ಯಾಸಾಗರ, ವಿದ್ಯಾಬಿನವ ಶಾಸ್ತ್ರರತ್ನ ಮುಂತಾದ ಬಿರುದುಗಳಿಗೆ ಪಾತ್ರರಾಗಿದ್ದ ಕೀರ್ತಿ ಶ್ರೀಯುತರದಾಗಿರುತ್ತವೆ.

ಇವರ ನಿಧನದಿಂದಾಗಿ ರಾಜ್ಯವು ಒಬ್ಬ ಉತ್ತಮ, ಕ್ರಿಯಾಶೀಲ ರಾಜಕಾರಣಿ ಹಾಗೂ ಶಿಕ್ಷಣ ತಜ್ಞರನ್ನು ಕಳೆದು ಕೊಂಡಂತಾಗಿದೆ.

## ಸಭಾನಾಯಕ ಶ್ರೀ ಹೆಚ್.ಕೆ. ಪಾಟೀಲರು

ಎಂ.ಪಿ.ಎಲ್. ಶಾಸ್ತ್ರಿಯವರು ಒಬ್ಬ ಶಿಕ್ಷಣ ಪ್ರೇಮಿಯಾಗಿದ್ದರು. ಅವರು ಸೆನೆಟ್, ಅಕಾಡೆಮಿಕ್ ಕೌನ್ಸಿಲ್, ಸಿಂಡಿಕೇಟ್ ಮುಂತಾದ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ್ದರು. ವಿಧಾನ ಪರಿಷತ್ತಿನ ಮುಖಾಂತರ ಶಿಕ್ಷಣ ಕ್ಷೇತ್ರಕ್ಕೆ ಅಪಾರ ಸೇವೆಯನ್ನು ಮಾಡಿದ್ದರು. ಅವರು ವಿದ್ಯಾಸಾಗರ, ವಿದ್ಯಾಭಿನವ ಹಾಗೂ ಶಾಸ್ತ್ರರತ್ನ ಎಂಬ ಏನು ಬಿರುದುಗಳನ್ನು ಪಡೆದುಕೊಂಡಿದ್ದರೋ ಆ ಬಿರುದುಗಳಿಗೆ ಗೌರವ ತರುವಂತಹ ವ್ಯಕ್ತಿತ್ವ ಅವರಾದ್ದಾಗಿತ್ತು. ಕ್ರಿಯಾಶೀಲ ರಾಜಕಾರಣಿಯಾಗಿ, ಶಿಕ್ಷಣ ತಜ್ಞರಾಗಿ ಕೆಲಸ ಮಾಡಿದ್ದರು. ವಿಧಾನ ಪರಿಷತ್ತಿನಲ್ಲಿದ್ದಾಗ ಕನ್ನಡ ನಾಡಿಗೆ ಅಪಾರವಾದ ಸೇವೆಯನ್ನು ಮಾಡಿದ್ದರು ಎಂದು ನೆನಪಿಸಿಕೊಳ್ಳುತ್ತಾ ಅವರಿಗೆ ಗೌರವ ಪೂರ್ವಕ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

## ವಿಧಾನ ಪರಿಷತ್ ಸದಸ್ಯರಾದ ಶ್ರೀ ಕೆ.ಹೆಚ್. ಶ್ರೀನಿವಾಸರವರು

ಎಂ.ಪಿ.ಎಲ್. ಶಾಸ್ತ್ರಿಯವರು ತಮ್ಮ ಸ್ವಸಾಮರ್ಥ್ಯದಿಂದ ತುಂಬ ಬದುಕನ್ನು ಬದುಕಿದ್ದಾರೆ. ಅವರು ಮನೆಯಿಂದ ಯಥಾ ಪ್ರಕಾರವಾಗಿ ವಿದ್ಯಾಸಂಸ್ಥೆಗೆ ಹೋಗಿ ಅಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಮತ್ತೆ ವಾಪಾಸ್ ಮನೆಗೆ ಬಂದ ನಂತರ ನಿಧನ ಹೊಂದಿದ್ದಾರೆ, ಅವರ ಯೋಗ್ಯತೆಗೆ ತಕ್ಕ ರೀತಿಯಲ್ಲಿ ನಿರ್ಗಮನ ಹೊಂದಿದ್ದಾರೆ. ಅವರು ನನಗಿಂತಲೂ ಬಹಳ ಹಿರಿಯರಾಗಿದ್ದರೂ ಕೂಡ ನಮ್ಮ ಜೊತೆ ಬಹಳ ಆತ್ಮೀಯವಾಗಿದ್ದರು. ಹಿರಿಯರು ಮಾರ್ಗದರ್ಶಕರ ಸ್ಥಾನದಲ್ಲಿ ಅವರು ಇದ್ದರು. ಕೆಲವೇ ದಿವಸಗಳ ಹಿಂದೆ ಬೇರೆಯವರು ಒಬ್ಬರು ತೊಂದರೆಯಲ್ಲಿದ್ದರು ಎಂದು ಅವರನ್ನು ನೋಡಲು ನಾವು ನರ್ಸಿಂಗ್ ಹೋಮಿಗೆ ಹೋದಾಗ ನಾವು ಇವರ ಜೊತೆ ಸ್ವಲ್ಪ ಕಾಲ ಕಳೆಯುವ ಹೊತ್ತು ಬಂದಾಗ ಬಹಳ ಸುದೀರ್ಘವಾಗಿ ರಾಜಕಾರಣದ ಬಗ್ಗೆ, ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಅವರ ಜೊತೆ ಚರ್ಚಿಸುವಂತಹ ಅವಕಾಶ ನನಗೆ ಒದಗಿತ್ತು. ಅವತ್ತು ಅವರನ್ನು ನೋಡಿದಾಗ ಖಂಡಿತವಾಗಿ ಇವರು ಶತಾಯುಷಿಗಳಾಗುತ್ತಾರೆಂಬ ನಂಬಿಕೆ ನನಗೆ ಇತ್ತು. ಅವರು ಮನೆಯಿಂದ ಅಲ್ಲಿಗೆ ನಡೆದುಕೊಂಡೇ ಬಂದಿದ್ದರು. ಅವರು ಶತಾಯುಷಿಗಳಾಗುತ್ತಾರೆಂಬ ನನ್ನ ನಂಬಿಕೆಗೆ ಭಗವಂತ ಅವಕಾಶ ಕೊಡದೆ ಅವರನ್ನು ಬಹಳ ಬೇಗನೆ ವಾಪಾಸ್ ಕರೆಸಿಕೊಂಡಿದ್ದಾನೆ.

– * –

## ಆಧಾರ ಲೇಖನಗಳು


1. ಪ್ರೊ. ಎಂ.ಪಿ.ಎಲ್. ಶಾಸ್ತ್ರಿ – ಪ್ರೊ ಅರಳು ಮಲ್ಲಿಗೆ ಪಾರ್ಥಸಾರಥಿ.
2. Two Decades of Service Commemorative Souvenir "BRAHMI" (MES-publication)
3. ಶಾಸ್ತ್ರಿಯವರ ಸಹವರ್ತಿಗಳನ್ನು ಸಂಪರ್ಕಿಸಿ – ಚರ್ಚಿಸಿ ಮಾಹಿತಿ ಪಡೆದಿದ್ದು.
4. ಕರ್ನಾಟಕ ಸರ್ಕಾರದ (ವಿಧಾನಸಭಾ ಸಚಿವಾಲಯವು) ಪ್ರೊ: ಎಂ.ಪಿ.ಎಲ್. ಶಾಸ್ತ್ರಿಯವರು ಸದನದಲ್ಲಿ ಮಾಡಿದ ಭಾಷಣಗಳ ಕುರಿತು ಪ್ರಕಟಿಸಿರುವ ಹಲವು ಗ್ರಂಥಗಳು.


– * –

# ವಿಧಾನ ಮಂಡಲ ಗ್ರಂಥಾಲಯ ಸಮಿತಿ

## 2001 - 2002

ಶ್ರೀ ಯುತರುಗಳಾದ :

| | |
|---|---|
| 1. ಬಿ.ಎಲ್. ಶಂಕರ್ | ವಿಧಾನ ಪರಿಷತ್ತಿನ ಸಭಾಪತಿಯವರು, ಅಧ್ಯಕ್ಷರು |
| 2. ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಅಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. ಬಿ.ಬಿ. ಶಿವಪ್ಪ | ವಿಧಾನಸಭಾ ಸದಸ್ಯರು ಹಾಗೂ ಉಪ ಸಮಿತಿಯ ಅಧ್ಯಕ್ಷರು |
| 4. ಸುಭಾಷ್ ರುಕ್ಮಯ್ಯ ಗುತ್ತೇದಾರ್ | ವಿಧಾನಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 5. ಚಂದ್ರಕಾಂತ ಗುರಪ್ಪ ಬೆಲ್ಲದ್ | - " - |
| 6. ಉಮೇಶ್ ವಿ. ಕತ್ತಿ | - " - |
| 7. ಕೆ.ಎನ್. ಸುಬ್ಬಾರೆಡ್ಡಿ | - " - |
| 8. ಡಾ॥ ಎಲ್. ಹನುಮಂತಯ್ಯ | ವಿಧಾನಪರಿಷತ್ತಿನ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 9. ಕೆ. ನಿರಂಜನ್ ನಾಯ್ಡು | - " - |
| 10. ಶ್ರೀಮತಿ ನಿರ್ಮಲಾ ವೆಂಕಟೇಶ್ | - " - |

## 2002-2003

ಶ್ರೀಯುತರುಗಳಾದ :

| | | |
|---|---|---|
| 1. | ಬಿ.ಎಲ್. ಶಂಕರ್ | ವಿಧಾನಪರಿಷತ್ತಿನ ಸಭಾಪತಿಯವರು ಹಾಗೂ ಸಮಿತಿಯ ಅಧ್ಯಕ್ಷರು |
| 2. | ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಉಪ ಸಮಿತಿ ಅಧ್ಯಕ್ಷರು |
| 4. | ಪಿ. ರಮೇಶ್ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 5. | ಡಾ. ಭಾರತಿ ಶಂಕರ್ | - " - |
| 6. | ಡಿ.ಆರ್. ಪಾಟೀಲ್ | - " - |
| 7. | ಕೆ.ಬಿ. ಚಂದ್ರಶೇಖರ್ | - " - |
| 8. | ರಾಮಚಂದ್ರೇಗೌಡ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿ ಸದಸ್ಯರು |
| 9. | ಡಾ. ಎಂ.ಪಿ. ನಾಡಗೌಡ | - " - |
| 10. | ಎಂ.ಎಸ್. ಸಿದ್ದರಾಜು | - " - |

## 2003-2004

ಶ್ರೀಯುತರುಗಳಾದ:

| | | |
|---|---|---|
| 1. | ಬಿ.ಎಲ್. ಶಂಕರ್ | ವಿಧಾನಪರಿಷತ್ತಿನ ಸಭಾಪತಿಯವರು ಹಾಗೂ ಸಮಿತಿಯ ಅಧ್ಯಕ್ಷರು |
| 2. | ಎಂ.ವಿ. ವೆಂಕಟಪ್ಪ | ವಿಧಾನ ಸಭೆಯ ಸಭಾಧ್ಯಕ್ಷರು ಹಾಗೂ ಸಮಿತಿ ಸದಸ್ಯರು |
| 3. | ಬಿ.ಬಿ. ಶಿವಪ್ಪ | ವಿಧಾನ ಸಭಾ ಸದಸ್ಯರು ಹಾಗೂ ಉಪಸಮಿತಿ ಅಧ್ಯಕ್ಷರು ಹಾಗೂ ಸಮಿತಿಯ ಸದಸ್ಯರು |
| 4. | ಎಸ್.ಕೆ. ಬೆಳ್ಳುಬ್ಬಿ | ವಿಧಾನ ಸಭಾ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 5. | ಬಿ.ಜಿ. ಗೋವಿಂದಪ್ಪ | - " - |
| 6. | ಷಡಾಕ್ಷರಿ ಕೆ. | - " - |
| 7. | ಗೋಪಾಲಕೃಷ್ಣ ಎನ್.ವೈ. | - " - |
| 8. | ಯಡಿಯೂರಪ್ಪ ಬಿ.ಎಸ್ | ವಿಧಾನ ಪರಿಷತ್ ಸದಸ್ಯರು ಹಾಗೂ ಸಮಿತಿಯ ಸದಸ್ಯರು |
| 9. | ಡಾ. ಎಂ.ಪಿ. ನಾಡಗೌಡ | - " - |
| 10. | ಖೋತ ಸಚ್ಚಿದಾನಂದ | - " - |

## 2004-2005

ಶ್ರೀಯುತರುಗಳಾದ :

| | | |
|---|---|---|
| 1. | ವಿ.ಆರ್. ಸುದರ್ಶನ್<br>ಸಭಾಪತಿಗಳು,<br>ಕರ್ನಾಟಕ ವಿಧಾನ ಪರಿಷತ್ತು | ಅಧ್ಯಕ್ಷರು |
| 2. | ಕೃಷ್ಣ<br>ಸಭಾಧ್ಯಕ್ಷರು,<br>ಕರ್ನಾಟಕ ವಿಧಾನ ಸಭೆ | ಸದಸ್ಯರು |
| 3. | ವಿಶ್ವನಾಥ್ ಪಾಟೀಲ್ ಹೆಬ್ಬಾಳ್<br>ವಿಧಾನ ಸಭಾ ಸದಸ್ಯರು ಹಾಗೂ<br>ಉಪ ಸಮಿತಿಯ ಅಧ್ಯಕ್ಷರು | ಸದಸ್ಯರು |
| 4. | ಜಿ.ಎಸ್. ಗಡ್ಡದೇವರ ಮಠ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 5. | ಆರ್. ಧ್ರುವನಾರಾಯಣ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 6. | ಕಳಕಪ್ಪ ಜಿ. ಬಂಡಿ<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 7. | ಡಾ. ವೀರಬಸವಂತರೆಡ್ಡಿ ಮುದ್ನಾಳ್<br>ವಿಧಾನ ಸಭಾ ಸದಸ್ಯರು | ಸದಸ್ಯರು |
| 8. | ಡಾ. ವಿ.ಎಸ್. ಆಚಾರ್ಯ (ದಿನಾಂಕ 26.11.04ರವರೆಗೆ)<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 9. | ಡಾ. ಎಲ್. ಹನುಮಂತಯ್ಯ (ದಿನಾಂಕ 26.11.04ರವರೆಗೆ)<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 10. | ಡಾ. ಚಂದ್ರಶೇಖರ ಬಿ. ಕಂಬಾರ<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 11. | ವಿಠಲ ಹೆರೂರು (ದಿನಾಂಕ 26.11.04 ರಿಂದ )<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 12. | ಖಾಜ್ಹಿ ಅರಶದ ಅಲಿ (ದಿನಾಂಕ 26.11.04 ರಿಂದ )<br>ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

## ಸಂಪಾದಕ ವರ್ಗ

## ಕರ್ನಾಟಕ ವಿಧಾನ ಸಭೆ ಸಚಿವಾಲಯ

ಶ್ರೀಯುತರುಗಳಾದ :

| | | |
|---|---|---|
| 1. | ಟಿ. ರಾಜಣ್ಣ | ಕಾರ್ಯದರ್ಶಿ |
| 2. | ಎಸ್.ಬಿ. ಪಾಟೀಲ್ | ಅಪರ ಕಾರ್ಯದರ್ಶಿ |
| 3. | ಟಿ.ಎನ್. ಧ್ರುವಕುಮಾರ್ | ಜಂಟಿ ಕಾರ್ಯದರ್ಶಿ |
| 4. | ಕೆ.ಎನ್. ಪ್ರಬಾಕರ್‌ರಾವ್ | ಜಂಟಿ ಕಾರ್ಯದರ್ಶಿ (ಪ್ರ) |
| 5. | ಎಸ್. ಬಸವರಾಜ | ಉಪ ಕಾರ್ಯದರ್ಶಿ (ಪ್ರ) |
| 6. | ಕೆ. ಚಿನ್ನಸ್ವಾಮಿ | ಉಪ ಕಾರ್ಯದರ್ಶಿ |
| 7. | ಮಿರ್ಜಾ ಮೆಹ್ದಿ | ಅಧೀನ ಕಾರ್ಯದರ್ಶಿ |
| 8. | ಹೆಚ್.ಎಸ್. ಜಗನ್ನಾಥ್ | ಅಧೀನ ಕಾರ್ಯದರ್ಶಿ |
| 9. | ಎ. ರಂಗಸ್ವಾಮಿ | ಶಾಖಾಧಿಕಾರಿ |
| 10. | ಅನಸೂಯ ಎನ್. ದೇವಗಿರಿ | ಸಹಾಯಕ ಗ್ರಂಥಪಾಲಕಿ |

## ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

ಶ್ರೀಯುತರುಗಳಾದ :

| | | |
|---|---|---|
| 1. | ಕೆ. ಜಯಶಂಕರಮೂರ್ತಿ | ಕಾರ್ಯದರ್ಶಿ (ಪ್ರ) |
| 2. | ವಿ. ಶ್ರೀಶ್ | ಸಭಾಪತಿಯವರ ಕಾರ್ಯದರ್ಶಿ |

# ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆಯಡಿಯಲ್ಲಿ ಬಿಡುಗಡೆಗೊಂಡಿರುವ ಪುಸ್ತಕಗಳು

| | ಪುಸ್ತಕಗಳು | ದರ ರೂ. |
|---|---|---|
| 1. | ಕೆ. ಹನುಮಂತಯ್ಯ | 20.00 |
| 2. | ಎಸ್. ನಿಜಲಿಂಗಪ್ಪ | 15.00 |
| 3. | ಶಾಂತವೇರಿ ಗೋಪಾಲಗೌಡ | 15.00 |
| 4. | ವೈಕುಂಠ ಬಾಳಿಗಾ | 20.00 |
| 5. | ವೀರೇಂದ್ರ ಪಾಟೀಲ್ | 20.00 |
| 6. | ಕಡಿದಾಳ್ ಮಂಜಪ್ಪ | 15.00 |
| 7. | ಜಿ.ವಿ. ಹಳ್ಳಿಕೇರಿ | 15.00 |
| 8. | ಶ್ರೀಮತಿ ಕೆ.ಎಸ್. ನಾಗರತ್ನಮ್ಮ | 15.00 |
| 9. | ಡಿ. ದೇವರಾಜ ಅರಸು | 15.00 |
| 10. | ಕೆ.ಟಿ. ಭಾಷ್ಯಂ | 15.00 |
| 11. | ಟಿ.ಸಿದ್ದಲಿಂಗಯ್ಯ | 20.00 |
| 12. | ಕೆ. ಪುಟ್ಟಸ್ವಾಮಿ | 15.00 |
| 13. | ಜಗಳೂರು ಇಮಾಂ | 15.00 |
| 14. | ಕೆ.ಸಿ. ರೆಡ್ಡಿ | 20.00 |
| 15. | ಬಿ.ವಿ. ಕಕ್ಕಿಲ್ಲಾಯ | 20.00 |
| 16. | ಜೆ.ಬಿ. ಮಲ್ಲಾರಾಧ್ಯ | 15.00 |
| 17. | ಹೆಚ್.ಎಂ. ಚೆನ್ನ ಬಸಪ್ಪ | 20.00 |
| 18. | ಎಂ. ನಾಗಪ್ಪ | 15.00 |
| 19. | ಬಿ. ರಾಚಯ್ಯ | 20.00 |
| 20. | ಗಂಗಾಧರ ನಮೋಶಿ | 15.00 |

| ಪುಸ್ತಕಗಳು | ದರ ರೂ. |
|---|---|
| 21. ಬಿ.ಡಿ. ಜತ್ತಿ | 15.00 |
| 22. ಆರ್. ಗುಂಡೂರಾವ್ | 20.00 |
| 23. ಕೆ.ಎಚ್. ಪಾಟೀಲ್ | 15.00 |
| 24. ಅಜೀಜ್ ಸೇಠ್ | 15.00 |
| 25. ಸಿ.ಎಂ. ಆರ್ಮುಗಂ | 15.00 |
| 26. ಎಸ್.ಡಿ. ಗಾಂವಕರ್ | 20.00 |
| 27. ಶ್ರೀಮತಿ ಬಿ.ಎಲ್. ಸುಬ್ಬಮ್ಮ | 15.00 |
| 28. ಟಿ.ಆರ್. ಶಾಮಣ್ಣ | 20.00 |
| 29. ಜೆ.ಹೆಚ್. ಪಾಟೀಲ್ | 30.00 |

ಭಾಷಾಂತರ ಪುಸ್ತಕಗಳು

| | |
|---|---|
| 1. ಡಾ: ಬಿ.ಆರ್. ಅಂಬೇಡ್ಕರ್ | 20.00 |
| 2. ಡಾ: ರಾಮ ಮನೋಹರ ಲೋಹಿಯಾ | 15.00 |
| 3. ವಿ.ಕೆ. ಕೃಷ್ಣಮೆನನ್ | 20.00 |
| 4. ಡಾ: ಶ್ಯಾಂಪ್ರಸಾದ್ ಮುಖರ್ಜಿ | 20.00 |
| 5. ಶೇಖ್ ಮಹಮದ್ ಅಬ್ದುಲ್ಲಾ | 15.00 |
| 6. ಡಾ: ರಾಜೇಂದ್ರ ಪ್ರಸಾದ್ | 20.00 |
| 7. ಭೂಪೇಶ್ ಗುಪ್ತಾ | 20.00 |
| 8. ಅನಂತಶಯನಂ ಅಯ್ಯಂಗಾರ್ | 20.00 |
| 9. ಶ್ರೀಮತಿ ರಾಜಕುಮಾರಿ ಅಮೃತ್ ಕೌರ್ | 20.00 |
| 10. ಡಾ: ಚಿಂತಾಮನ್ ಡಿ. ದೇಶ್‌ಮುಖ್ | 20.00 |
| 11. ಪನಂಪಿಲ್ಲಿ ಗೋವಿಂದ ಮೆನನ್ | 15.00 |
| 12. ಜೈ ಸುಖಲಾಲ್ ಹಾಥಿ | 15.00 |
| 13. ಎಸ್.ಎಂ. ಜೋಷಿ | 15.00 |
| 14. ಡಾ. ಲಂಕಾ ಸುಂದರಂ | 15.00 |

